ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಎ.ಕೆ. ಸುಬ್ಬಯ್ಯ

ಎಂ.ಎಸ್. ಶಶಿಕಲಾಗೌಡ

**ಪ್ರಕಟಣೆ**
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

**A.K. SUBBAIAH**
Eminent Parlimentarian Series
Written by **M.S. SHASHIKALA GOWDA,**
-----------------------------------------
---------------------------------------
**Published** by
Karnataka Legislature Library Committee
Vidhana Soudha, Bangalore-560001.
Page: 218 + x Price: 40-00 Rs.

First Edition: 2008 Copies: 2000
**Printed & Designed by**
Government Press, Bangalore.

**ಎ.ಕೆ. ಸುಬ್ಬಯ್ಯ**
ಪ್ರತಿಭಾವಂತ ಸಂಸದೀಯಪಟು ಪುಸ್ತಕ ಮಾಲಿಕೆ
**ಲೇಖಕರು: ಎಂ.ಎಸ್. ಶಶಿಕಲಾಗೌಡ**
-----------------------
----------------------
---------------------
**ಪ್ರಕಾಶನ**
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು-560 001.
ಪುಟ: 218 + x ಬೆಲೆ: 40/- ರೂ.

ಮೊದಲ ಮುದ್ರಣ: 2008 ಪ್ರತಿಗಳು: 2,000
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2009 – 2010

ಅಧ್ಯಕ್ಷರು

**ಶ್ರೀ ವೀರಣ್ಣ ಮತ್ತಿಕಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಕೆ.ಜಿ. ಬೋಪಯ್ಯ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಎಂ. ನಾರಾಯಣಸ್ವಾಮಿ**

ವಿಧಾನಸಭಾ ಸದಸ್ಯರು

**ಶ್ರೀ ಹೆಚ್.ಎಸ್. ಪ್ರಕಾಶ್**

ವಿಧಾನಸಭಾ ಸದಸ್ಯರು

**ಶ್ರೀ ಜಿ. ಸೋಮಶೇಖರ ರೆಡ್ಡಿ**

ವಿಧಾನಸಭಾ ಸದಸ್ಯರು

**ಶ್ರೀ ಸುರೇಶ್‌ಗೌಡ**

ವಿಧಾನಸಭಾ ಸದಸ್ಯರು

**ಶ್ರೀ ಸಾ.ರಾ. ಮಹೇಶ್**

ವಿಧಾನಸಭಾ ಸದಸ್ಯರು

**ಶ್ರೀ ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಡಾ॥ ಶ್ರೀನಾಥ್**

ವಿಧಾನ ಪರಿಷತ್ ಸದಸ್ಯರು

**ಪ್ರೊ॥ ಪಿ.ವಿ. ಕೃಷ್ಣಭಟ್ಟ**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

### ಕರ್ನಾಟಕ ವಿಧಾನ ಮಂಡಲ

ಡಿ'ಸೋಜ ರಾಬಿನ್‌ಸನ್ ಪ್ರಧಾನ ಕಾರ್ಯದರ್ಶಿ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ (ಪ್ರ) |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಮುನೀರುನ್ನಿಸಾ | ಅಧೀನ ಕಾರ್ಯದರ್ಶಿ |
| ಅನಸೂಯ ಎನ್. ದೇವಗಿರಿ | ಸಹಾಯಕ ಗ್ರಂಥಪಾಲಕಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೇಗೌಡ | ಅಪರ ಕಾರ್ಯದರ್ಶಿ |

### ಸಂಪಾದಕರು

ಡಾ. ಮಲ್ಲಿಕಾರ್ಜುನ ಎಂ.ಸಿ

# ಮುನ್ನುಡಿ

**5ನೇ ಮೇ 2010**

ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ॥ ರಾಮಮನೋಹರ ಲೋಹಿಯಾ, ಡಾ॥ ಬಿ.ಆರ್. ಅಂಬೇಡ್ಕರ್, ಡಾ॥ ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ಧಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ಎಂ.ಎಸ್. ಶಶಿಕಲಾಗೌಡ** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ **ಶ್ರೀ ಎ.ಕೆ. ಸುಬ್ಬಯ್ಯ** ಅವರ ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇವರ ಸದನದ ಭಾಷಣಗಳು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ವೀರಣ್ಣ ಮತ್ತಿಕಟ್ಟಿ**
ಸಭಾಪತಿ
ಕರ್ನಾಟಕ ವಿಧಾನಪರಿಷತ್ತು

**ಕೆ.ಜಿ. ಬೋಪಯ್ಯ**
ಸಭಾಧ್ಯಕ್ಷರು
ಕರ್ನಾಟಕ ವಿಧಾನಸಭೆ

# ಲೇಖಕಿಯ ಮಾತು

ಪ್ರತಿಭಾವಂತ ಸಂಸದೀಯಪಟು ಪುಸ್ತಕ ಮಾಲಿಕೆಯಲ್ಲಿ ಕರ್ನಾಟಕ ಘನಸರ್ಕಾರದ ಗ್ರಂಥಾಲಯ ಸಮಿತಿಯ ವರಿಷ್ಠರು,– ಶೋಷಿತರ ಆಶಾಕಿರಣ, ಕೊಡಗಿನ ಕೇಸರಿ, ಧೀಮಂತ ರಾಜಕಾರಣಿ ಶ್ರೀ ಎ.ಕೆ. ಸುಬ್ಬಯ್ಯ ಅವರನ್ನು ಕುರಿತು ಗ್ರಂಥವನ್ನು ರಚಿಸಲು ನನ್ನನ್ನು ನಿಯೋಜಿಸಿದ್ದು ನನ್ನ ಸುಕೃತವೆಂದೇ ಭಾವಿಸುವೆ.

ಎ.ಕೆ. ಸುಬ್ಬಯ್ಯನವರನ್ನು ಎಂದೂ ಕಂಡಿರದಿದ್ದರೂ ಸಹ ನಾನು ಅವರ ಬಗ್ಗೆ ಪರವಾದ ಹಾಗೂ ವಿರೋಧವಾದ ಅನೇಕ ಹೇಳಿಕೆಗಳನ್ನು ಕೇಳುತ್ತಿದ್ದೆನಾದುದರಿಂದ ವಸ್ತುನಿಷ್ಠತೆಯ ಕಾರಣದಿಂದಾಗಿ ಅತ್ಯಂತ ಜಾಗರೂಕತೆಯಿಂದ ಕಾರ್ಯತತ್ಪರಳಾಗಬೇಕಾದ ಅರಿವು ನನಗಿತ್ತು. ಈ ನಿಟ್ಟಿನಲ್ಲಿ ಮುಂದುವರೆದಾಗ ಅವರ ಎಲ್ಲಾ ಸಂಸದೀಯ ಕಾರ್ಯಚಟುವಟಿಕೆಗಳ ಹಾಗೂ ಭಾಷಣಗಳ ಅಧ್ಯಯನಗಳೊಂದಿಗೆ ಅವರೇ ರಚಿಸಿದ ಹಲವು ಕಿರುಹೊತ್ತಗೆಗಳೂ, ಅಂಕಣಕಾರರಾಗಿ ಸುಬ್ಬಯ್ಯನವರು 'ಕೊಡಗು ಸಮಾಚಾರ'– ಪತ್ರಿಕೆಗೆ ಬರೆದ ಲೇಖನಗಳೂ ಅವರ ವ್ಯಕ್ತಿತ್ವದ ವಿರಾಟ್ ದರ್ಶನವನ್ನು ಮಾಡಿಸಿದವು. ಈ ಅಧ್ಯಯನದಿಂದ ನನಗೆ ಅರ್ಥವಾದ ಸತ್ಯವೆಂದರೆ, 'ಖಂಡಿತವಾದಿ–ಲೋಕವಿರೋಧಿ' – ಎಂಬ ನಾಣ್ಣುಡಿಗೆ ಅನ್ವರ್ಥವಾದ ವ್ಯಕ್ತಿ ಸನ್ಮಾನ್ಯ ಸುಬ್ಬಯ್ಯನವರೆಂಬುದು. ಅಷ್ಟೇ ಅಲ್ಲ, ವಿಶಿಷ್ಟ ವ್ಯಕ್ತಿತ್ವದ, ನೇರ ನಡೆ–ನುಡಿಯ, ನುಡಿದಂತೆ ನಡೆವ, ಬದುಕಿದಂತೆ ಬರೆಯುವ, ಸಮಾನತೆಯನ್ನೇ ತಮ್ಮ ಜೀವನದ ಮುಖ್ಯ ಧ್ಯೇಯವನ್ನಾಗಿ ಮಾಡಿಕೊಂಡಿರುವ ಮಾನವತಾವಾದಿ ಹಾಗೂ ಸ್ವನಿಷ್ಠಾವಂತ ಸ್ವಾಭಿಮಾನಿ ಶ್ರೀ ಸುಬ್ಬಯ್ಯನವರು 'ಗಾಜಿನಹರಳುಗಳ ನಡುವೆ ಇರುವ ಅಮೂಲ್ಯ ವಜ್ರದಂತೆ'– ಎಂಬುದು ಉತ್ಪ್ರೇಕ್ಷೆಯ ಮಾತಲ್ಲ.

ವಿಧಾನ ಪರಿಷತ್ತಿನ ಎಲ್ಲಾ ಕಾರ್ಯಕಲಾಪಗಳಲ್ಲಿ ಪಾಲ್ಗೊಳ್ಳುತ್ತಾ ಸುಬ್ಬಯ್ಯನವರು ತಮ್ಮ ರಾಜಕೀಯ ಜೀವನದ ಇಪ್ಪತ್ತನಾಲ್ಕು ವರ್ಷಗಳ ಸಮಯದಲ್ಲಿ ನಡೆಸಿದ ಚರ್ಚೆ ಹಾಗೂ

ಭಾಷಣಗಳನ್ನು ಈ ಪುಸ್ತಕದ ಪರಿಮಿತಿಯಲ್ಲಿ ದಾಖಲಿಸುವುದು ಅಸಾಧ್ಯವಾದುದು. ಏಕೆಂದರೆ, ಅವರ ಮೂಲಭೂತ ಗುಣಗಳಾದ ಪ್ರಾಮಾಣಿಕತೆ ಮತ್ತು ನ್ಯಾಯಕ್ಕಾಗಿ ಹೋರಾಡುವ ತತ್ವಗಳ ಕಾರಣದಿಂದಾಗಿ ಪರಿಷತ್ತಿನಲ್ಲಿ ಅವರು ಸ್ಪಂದಿಸದ ವಿಷಯಗಳೇ ಇಲ್ಲ. 1968ರಲ್ಲಿ ಪದವೀಧರ ಕ್ಷೇತ್ರದಿಂದ ವಿಧಾನ ಪರಿಷತ್ತಿಗೆ ಆಯ್ಕೆಯಾದ ಸನ್ಮಾನ್ಯರು ವಿರೋಧ ಪಕ್ಷದ ನಾಯಕರಾಗಿ ಕಾರ್ಯ ನಿರ್ವಹಿಸಿದ ವೈಖರಿ ಕರ್ನಾಟಕದ ರಾಜಕೀಯಕ್ಕೆ ಮಾತ್ರವೇ ಸೀಮಿತವಾಗದೆ ರಾಷ್ಟ್ರಕ್ಕೇ ಮಾದರಿಯಾದುದು. ಪರಿಷತ್ತಿನಲ್ಲಿನ ಸುಬ್ಬಯ್ಯನವರ ಮಾತುಗಳು, ಚರ್ಚೆಗಳು, ಭಾಷಣಗಳನ್ನು ಸಂಪೂರ್ಣವಾಗಿ ಪರಿಗಣಿಸುವುದಾದರೆ ಹಲವು ಸಾವಿರ ಪುಟಗಳ ದಾಖಲೆಗಳಾಗುತ್ತವೆ. ಆದರೂ ಸ್ಥೂಲವಾಗಿಯಾದರೂ ಅವರನ್ನು ಸರ್ಕಾರವು ಮುಂದಿನ ಪೀಳಿಗೆಗೆ ಪರಿಚಯಿಸುತ್ತಿರುವುದು ಅಭಿನಂದನೀಯವಾದ ಕಾರ್ಯವಾಗಿದೆ.

ಅಪ್ರತಿಮ ಭ್ರಷ್ಟಾಚಾರವಿರೋಧಿ, ಪ್ರಖರವಾಗ್ಮಿ, ಪ್ರಜಾಪ್ರಭುತ್ವ ಪ್ರೇಮಿ, ದೀನ-ದಲಿತರ ಆಶಾಕಿರಣ, ಸರಳ-ಸಜ್ಜನಿಕೆಯ ಸುಬ್ಬಯ್ಯನವರನ್ನು ಕುರಿತು ಗ್ರಂಥವನ್ನು ರಚಿಸಿದ್ದು ನನಗೆ ಅತ್ಯಂತ ಹೆಮ್ಮೆಯ ವಿಷಯವಾಗಿದೆ.

ಈ ಸತ್ಕಾರ್ಯಕ್ಕೆ ಕಾರಣರಾದ ವಿಧಾನಮಂಡಲದ ಗ್ರಂಥಾಲಯ ಸಮಿತಿಯವರಿಗೆ, ವಿಶೇಷವಾಗಿ ಪರಿಷತ್ತಿನ ಸಭಾಪತಿಗಳಾಗಿದ್ದ ಸನ್ಮಾನ್ಯ ವಿ.ಆರ್.ಸುದರ್ಶನ್ ಅವರಿಗೆ-

ಗ್ರಂಥರಚನಾ ಸಮಯದಲ್ಲಿ ಮಾರ್ಗದರ್ಶನ ನೀಡಿ ಪ್ರೋತ್ಸಾಹಿಸಿದ ಹಿರಿಯರೂ, ಸಾಹಿತಿಗಳೂ ಆದ ಶ್ರೀ ಶೂದ್ರ ಶ್ರೀನಿವಾಸ್ ಅವರಿಗೆ-

'ಪ್ರತಿಭಾವಂತ ಸಂಸದೀಯ ಪಟು'- ಮಾಲಿಕೆಯ ಸಂಪಾದಕರಾದ ಶ್ರೀ ಎಲ್.ಎನ್. ಮುಕುಂದರಾಜ್ ಅವರಿಗೆ-

ಗ್ರಂಥಾಲಯದ ಮುಖ್ಯಸ್ಥರಾದ ಶ್ರೀಮತಿ ಅನುಸೂಯ ಎನ್. ದೇವಗಿರಿ ಅವರಿಗೂ, ಶ್ರೀ ಲೋಕೇಶ್ವರ್ ಜೆ.ಎಲ್ ಅವರಿಗೂ-

ನನ್ನ ಪರಿವಾರದ ಎಲ್ಲಸದಸ್ಯರು, ಸಹೋದ್ಯೋಗಿಗಳು, ಸಮಸ್ತ ಸ್ನೇಹಿತರು ಹಾಗೂ ಹಿತೈಷಿಗಳಿಗೂ–

ಈ ಕಾರ್ಯದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕಾರ ನೀಡಿದ ಸರ್ವರಿಗೂ–

ನನ್ನ ಹೃತ್ಪೂರ್ವಕವಾದ ಧನ್ಯವಾದಗಳನ್ನು ಅರ್ಪಿಸುತ್ತೇನೆ.

**ಎಂ.ಎಸ್.ಶಶಿಕಲಾಗೌಡ**
(9972911844)

## ಸುಬ್ಬಯ್ಯನವರ ಜೀವನದ ಘಟನಾವಾಳಿಗಳು

09.08.1934 : ವಿರಾಜಪೇಟೆ ತಾಲ್ಲೂಕು ಕೋಣಗೇರಿ ಗ್ರಾಮದಲ್ಲಿ ಜನನ

ಪ್ರಾಥಮಿಕ ವಿದ್ಯಾಭ್ಯಾಸ : ಅಜ್ಜಿಯ ಊರು ಹರಿಹರದಲ್ಲಿ, ಶಾಲೆಗೆ ಸೇರಿದ್ದು 1943 ರಿಂದ

ಮಾಧ್ಯಮಿಕ ವಿದ್ಯಾಭ್ಯಾಸ : ಟಿ. ಶೆಟ್ಟಿಗೇರಿ ಮಾಧ್ಯಮಿಕ ಶಾಲೆಯಲ್ಲಿ 1948 ರಿಂದ

ಹೈಸ್ಕೂಲು ವಿದ್ಯಾಭ್ಯಾಸ : ಕೋಣಗೇರಿ ಪಕ್ಕದ ಗ್ರಾಮ ಹುದಿಕೇರಿ ಇಲ್ಲಿ 1951 ರಿಂದ

ಪಿ.ಯು. (ಇಂಟರ್‌ಮೀಡಿಯೇಟ್) ವಿದ್ಯಾಭ್ಯಾಸ : ಗವರ್ನಮೆಂಟ್ ಕಾಲೇಜು, ಮಡಿಕೇರಿ ಇಲ್ಲಿ 1953 ರಿಂದ

1955 : ಹುದಿಕೇರಿ ಮಾಧ್ಯಮಿಕ ಶಾಲೆಯಲ್ಲಿ ಮೂರು ತಿಂಗಳು ಶಿಕ್ಷಕರಾಗಿ ನೌಕರಿ. ನಂತರ ಹಣಕೋಡು ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿ ನೌಕರಿ.

1955 : ಆರೋಗ್ಯ ಇಲಾಖೆಯಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ನೌಕರಿ

1957 : ನೌಕರಿ ತ್ಯಜಿಸಿ ಮಡಿಕೇರಿ ಕಾಲೇಜಿನಲ್ಲಿ ಬಿ.ಎಸ್‌ಸಿ.ಗೆ ಸೇರ್ಪಡೆ. ಕಾಲೇಜು ಹಾಸ್ಟೆಲಿನ ಅವ್ಯವಸ್ಥೆ ಕುರಿತು ಹೋರಾಟ.

1957 : ಮೈಸೂರಿನ ಶಾರದಾವಿಲಾಸ ಕಾಲೇಜಿನಲ್ಲಿ 2ನೇ ಬಿ.ಎಸ್.ಸಿ.ಗೆ ಸೇರ್ಪಡೆ

1958 : ಮಡಿಕೇರಿಯಲ್ಲಿ ವಿಧಾನಸಭೆಗೆ ಉಪಚುನಾವಣೆ ಘೋಷಣೆ
ಬಿ.ಎಸ್.ಪಿ. ಅಭ್ಯರ್ಥಿ ಪರ ಪ್ರಚಾರ.
ವಿದ್ಯಾರ್ಥಿ ದೆಸೆಯಲ್ಲೇ ರಾಜಕೀಯ ವೇದಿಕೆ ಪ್ರವೇಶ.

1961 : ಬಿ.ಎಸ್.ಸಿ. ಮುಗಿಸಿ ಕಾನೂನು ಪದವಿ ಅಧ್ಯಯನಕ್ಕೆ ಶಾರದಾ ವಿಲಾಸ ಕಾಲೇಜಿಗೆ ಸೇರ್ಪಡೆ

1964 : ವಿರಾಜಪೇಟೆಯಲ್ಲಿ ವಕೀಲವೃತ್ತಿ ಆರಂಭ, ಅದೇ ವರ್ಷ ಭೀಮಯ್ಯನವರ ಪುತ್ರಿ ಪೊನ್ನಮ್ಮ ಅವರೊಂದಿಗೆ ವಿವಾಹ

1965 : ಮೊದಲ ಪುತ್ರನ ಜನನ, ಮಡಿಕೇರಿಯಲ್ಲಿ

1968 : ಕೊಡಗು ಮಂಗಳೂರು ಮೈಸೂರು ಪದವೀಧರರ ಕ್ಷೇತ್ರದಿಂದ ವಿಧನಪರಿಷತ್ ಸದಸ್ಯರಾಗಿ ಆಯ್ಕೆ

1874, 1980, 1986 : ಸತತ ವಿಧಾನಪರಿಷತ್ ಸದಸ್ಯರಾಗಿ ಆಯ್ಕೆ

1975 : ತುರ್ತುಪರಿಸ್ಥಿತಿ ವಿರೋಧಿಸಿ ಜೈಲಿಗೆ ಹೋದದ್ದು

1980 : ವಿಧಾನಪರಿಷತ್ತಿನಲ್ಲಿ ವಿರೋಧ ಪಕ್ಷದ ನಾಯಕ

1987 : ಬೆಂಗಳೂರಿನಲ್ಲಿ ಹೈಕೋರ್ಟಿನಲ್ಲಿ ವಕೀಲ ವೃತ್ತಿ ಆರಂಭ

2010 : ಹುದಿಕೇರಿ ಕೊಡವ ಸಮಾಜದಲ್ಲಿ 75ನೇ ವರ್ಷಾಚರಣೆ

2015 : ಕೊಡಗು ಪತ್ರಿಕಾ ಭವನದಲ್ಲಿ 81ನೇ ವರ್ಷಾಚರಣೆ

**ಸಂದ ಪ್ರಶಸ್ತಿಗಳು:**

ಪೆರಿಯಾರ್ ಪ್ರಶಸ್ತಿ

ಟಿಪ್ಪು ಸುಲ್ತಾನ್ ಯೂನಿಟಿ ಅವಾರ್ಡ್

ಕರ್ನಾಟಕ ಮಹಾ ವಿಚಾರರತ್ನ ಪ್ರಶಸ್ತಿ

ಬಂಟಮಲೆ ಕುವೆಂಪು ಪ್ರಶಸ್ತಿ

**ಪುಸ್ತಕಗಳು**

**(ಅಭಿನಂದನಾ ಸಮಾರಂಭದ ಸಂದರ್ಭದಲ್ಲಿ ಪ್ರಕಟವಾದ ಪುಸ್ತಕಗಳು)**

ಸೌಹಾರ್ದ ಸೆಲೆ : ಎ.ಕೆ. ಸುಬ್ಬಯ್ಯನವರ ಸಮಗ್ರ ಬರಹಗಳ ಸಂಪುಟ–1

ಆರ್‌ಎಸ್‌ಎಸ್ ಅಂತರಂಗ ಮತ್ತು ಇತರ ಲೇಖನಗಳು : ಎ.ಕೆ. ಸುಬ್ಬಯ್ಯನವರ ಸಮಗ್ರ ಬರಹಗಳ ಸಂಪುಟ–2

ದೇವರು ಮತ್ತು ಧರ್ಮ : ಎ.ಕೆ. ಸುಬ್ಬಯ್ಯನವರ ಸಮಗ್ರ ಬರಹಗಳ ಸಂಪುಟ–3

ಮಾತಿನ ಮನೆಯಲ್ಲಿ ಸ್ಫಟಿಕದ ಸಲಾಕೆ : ಎ.ಕೆ. ಸುಬ್ಬಯ್ಯನವರ ಶಾಸನ ಸಭೆಯ ಭಾಷಣ, ಚರ್ಚೆ – (ಸಂಪುಟ–1) – ಎಂ.ಎಸ್. ಶಶಿಕಲಾಗೌಡ

ನುಡಿಯೆಂಬುದು ಉರಿಯ ಕೆಂಡ : ಎ.ಕೆ. ಸುಬ್ಬಯ್ಯನವರ ಶಾಸನ ಸಭೆಯ ಭಾಷಣ, ಚರ್ಚೆ – (ಸಂಪುಟ–2) – ಎಂ.ಎಸ್. ಶಶಿಕಲಾಗೌಡ

ನಿರ್ಭೀತಿಯ ಹೆಜ್ಜೆಗಳು : ಎ.ಕೆ. ಸುಬ್ಬಯ್ಯ – ಹೋರಾಟಗಾರನ ಜೀವನ ಪಸಂಗಗಳು – ಬಿ.ಎನ್. ಮನುಶೆಣೈ

ಫೀನಿಕ್ಸ್ : ಎ.ಕೆ. ಸುಬ್ಬಯ್ಯನವರ ಜೀವನ ಚರಿತ್ರೆ – ಬಿ.ಎನ್. ಮನುಶೆಣೈ

ದಾರಿದೀಪ : ಎ.ಕೆ. ಸುಬ್ಬಯ್ಯನವರ ಅಭಿನಂದನಾ ಗ್ರಂಥ

# ಪರಿವಿಡಿ

# ಎ.ಕೆ. ಸುಬ್ಬಯ್ಯ

ನೇರ ನಡೆ–ನುಡಿಯ ಪ್ರಖರ ವ್ಯಕ್ತಿತ್ವಕ್ಕೆ ಹೆಸರಾದ ಅಷ್ಟೇ ಟೀಕೆ–ಟಿಪ್ಪಣಿಗಳಿಗೂ ಗುರಿಯಾದ ಶ್ರೀ ಎ.ಕೆ. ಸುಬ್ಬಯ್ಯನವರು ನಮ್ಮ ನಡುವಿನ ಅಪರೂಪದ ಸಂಸದೀಯ ಪಟು. ಬದುಕಿನ ಹಲವಾರು ಮಜಲುಗಳಲ್ಲಿ ಇಂದಿಗೂ ಸಕ್ರಿಯರಾಗಿರುವ ಶ್ರೀಯುತರು ವಿಧಾನ ಪರಿಷತ್ತಿನ ಸದಸ್ಯರಾಗಿ ನಾಲ್ಕು ಅವಧಿಯ ಒಟ್ಟು ಇಪ್ಪತ್ತನಾಲ್ಕು ವರ್ಷಗಳ ಕಾಲ ತಮ್ಮ ನಿಷ್ಠುರತೆಯಿಂದಲೇ ಮನೆ ಮಾತಾಗಿದ್ದು 1968 ರಿಂದ 1994 ರವರೆವಿಗೂ ರಾಜಕೀಯ ವಲಯದಲ್ಲಿ ಅದರಲ್ಲೂ ವಿರೋಧ ಪಕ್ಷದ ನಾಯಕರಾಗಿ ಸದನದಲ್ಲಿ ಉಂಟು ಮಾಡಿದ ಸಂಚಲನ ವಿನೂತನ ಹಾಗೂ ವಿಶಿಷ್ಟವಾದುದು. ವಿರೋಧ ಪಕ್ಷಕ್ಕೆ ಮಾನ್ಯತೆ ತಂದುಕೊಟ್ಟು ರಾಷ್ಟ್ರಕ್ಕೆ ಮಾದರಿಯೆನಿಸಿದ ಅಪರೂಪದ ಸರಳ, ಪ್ರಾಮಾಣಿಕ ಸಜ್ಜನ ವ್ಯಕ್ತಿ ಶ್ರೀ ಎ.ಕೆ. ಸುಬ್ಬಯ್ಯನವರು.

## ಅಜ್ಜೀಕುಟ್ಟೀರ ಕಾರ್ಯಪ್ಪ ಸುಬ್ಬಯ್ಯ

### ಬಾಲ್ಯ:

ದಕ್ಷಿಣ ಕೊಡಗಿನ ವಿರಾಜಪೇಟೆ ತಾಲ್ಲೂಕು, ಹುದಿಕೇರಿ ಅಂಚೆ, ಕೋಣಗೇರಿ ಗ್ರಾಮದ ಕೃಷಿಕರಾದ ಅಜ್ಜೀಕುಟ್ಟೀರ ಕಾರ್ಯಪ್ಪ ಮತ್ತು ಶ್ರೀಮತಿ ಚಿನ್ನಮ್ಮ ದಂಪತಿಗಳ ಏಕೈಕ ಪುತ್ರರಾಗಿ 1934ರ ಆಗಸ್ಟ್ ತಿಂಗಳ ಒಂಭತ್ತನೇ ದಿನಾಂಕದಂದು ಸುಬ್ಬಯ್ಯ ಜನಿಸಿದರು. ಇವರು ಕೇವಲ ಒಂದು ವರ್ಷದ ಹಸುಳೆಯಾಗಿದ್ದಾಗ ಇವರ ತಂದೆಯವರಾದ ಎ. ಕಾರ್ಯಪ್ಪನವರು ಅಕಾಲದಲ್ಲಿ ವಿಧಿವಶರಾದ ಕಾರಣ, ಶಿಶುವಾಗಿದ್ದ ಸುಬ್ಬಯ್ಯನವರು ತಮ್ಮ ಬಾಲ್ಯವನ್ನು ಅವರ ಸೋದರ ಮಾವಂದಿರಾದ ಶ್ರೀ ಮುತ್ತಣ್ಣ ಮತ್ತು ಶ್ರೀ ಬೆಳ್ಳಿಯಪ್ಪ ಅವರ ಆಶ್ರಯದಲ್ಲಿದ್ದು ಹರಿಹರದಲ್ಲಿ ಕಳೆದರು.

### ಶಿಕ್ಷಣ:

ಬಡಕೃಷಿಕರಾದ ಸೋದರ ಮಾವಂದಿರ ಆಶ್ರಯದಲ್ಲಿದ್ದ ಸುಬ್ಬಯ್ಯನವರು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಹರಿಹರದಲ್ಲೂ, ಮಾಧ್ಯಮಿಕ ಮತ್ತು ಪ್ರೌಢಶಾಲಾ ಶಿಕ್ಷಣವನ್ನು ಹುದಿಕೇರಿಯಲ್ಲೂ ಪಡೆದರು. ಕೊಂಚಕಾಲದವರೆಗೆ ಕಾಲೇಜು ಶಿಕ್ಷಣವನ್ನು ಮಡಿಕೇರಿಯಲ್ಲಿ ಮುಗಿಸಿ ಕಾರಣಾಂತರಗಳಿಂದ ಮುಂದೆ ಮೈಸೂರಿನ

ಪ್ರತಿಷ್ಠಿತ ವಿದ್ಯಾ ಸಂಸ್ಥೆಯಾದ ಶಾರದ ವಿಲಾಸ ಕಾಲೇಜಿನಲ್ಲೂ ಓದಿ ಬಿ.ಎಸ್ಸಿ. ಪದವಿಯನ್ನು ಪಡೆದರು.ಉತ್ತಮ ವಿದ್ಯಾರ್ಥಿಎಂಬ ಹೆಸರು ಗಳಿಸಿದ್ದ ಸುಬ್ಬಯ್ಯನವರು ಶಾರದ ವಿಲಾಸ ಲಾ ಕಾಲೇಜಿನಿಂದ ಕಾನೂನು ಪದವಿಯನ್ನೂ ಅರ್ಜಿಸಿದರು.

**ಕುಟುಂಬ :**

ಹುದಿಕೇರಿಯಲ್ಲಿ ದಿನಾಂಕ:13.5.1964ರಂದು ದಕ್ಷಿಣ ಕೊಡಗಿನ ವಿರಾಜಪೇಟೆಯ ವಕೀಲರಾದ ಶ್ರೀಮತಿ ಸೀತಮ್ಮ ಮತ್ತು ಶ್ರೀ ಭೀಮಯ್ಯ ದಂಪತಿಗಳ ಸುಪುತ್ರಿ ಪೊನ್ನಮ್ಮ (ಡಾಟಿ) ಅವರನ್ನು ತಮ್ಮ ಧರ್ಮಪತ್ನಿಯನ್ನಾಗಿ ಸ್ವೀಕರಿಸಿದ ಶ್ರೀ ಎ.ಕೆ. ಸುಬ್ಬಯ್ಯನವರದು ಸಂತೃಪ್ತ ಸಂಸಾರ. ಈ ದಂಪತಿಗಳಿಗೆ ಜನಿಸಿದ ಐವರು ಪುತ್ರರೂ ತಾವು ಮೆಚ್ಚಿದವರ ಕೈ ಹಿಡಿದು ಸ್ವಂತ ದುಡಿಮೆಯೊಂದಿಗೆ ನೆಮ್ಮದಿಯ ಬದುಕಿನ ಬಳುವಳಿಯನ್ನು ಪಡೆದಿದ್ದಾರೆ. ಸುಬ್ಬಯ್ಯನವರ ಸೋದರ ಸಂಬಂಧಿ ಹೆಣ್ಣು ಮಗಳಾದ ತುಂಬು ಮನಸ್ಸಿನ ಮಮತಾಮಯಿ ಮೀನಮ್ಮನವರು ಮನೆಮಗಳಾಗಿ ಸುಬ್ಬಯ್ಯ ದಂಪತಿಗಳಿಗೆ ಹೆಣ್ಣಮಕ್ಕಳಿಲ್ಲದ ಕೊರತೆಯನ್ನು ತುಂಬಿದ್ದಾರೆ.

**ವ್ಯಕ್ತಿತ್ವ:**

ಶ್ರೀ ಎ.ಕೆ. ಸುಬ್ಬಯ್ಯನವರ ವ್ಯಕ್ತಿತ್ವಕ್ಕೊಂದು ನಾಯಕತ್ವದ ವರ್ಚಸ್ಸಿದೆ. ಕನ್ನಡ ನಾಡು-ನುಡಿ ಏಳ್ಗೆಯ ಬಗ್ಗೆ ನಿಷ್ಠೆ ಇದೆ. ತೆರೆದ ಪುಸ್ತಕದಂತಿರುವ ಇವರ ಬದುಕು, ನಾಡಿನ ಯುವಕ-ಯುವತಿಯರಿಗೆ ಮಾದರಿ ಎಂಬುದರಲ್ಲಿ ಸಂಶಯವಿಲ್ಲ.

ಸುಬ್ಬಯ್ಯನವರದು ಸತ್ವ ಪೂರ್ಣ -ಸತ್ಯ ನಿಷ್ಠ ವ್ಯಕ್ತಿತ್ವದ ಸಾರ್ವಜನಿಕ ಬದುಕಾಗಿದೆ. ಇವರ ಭಾವನೆ ಹೇಗೋ ಬರಹವೂ ಹಾಗೇ. ನುಡಿಯು ಹೇಗೋ ನಡೆಯೂ ಹಾಗೆಯೇ. ನಿಷ್ಠುರವಾಗಿ ಸತ್ಯವನ್ನಾಡುವ ಇವರಿಗೆ ಪ್ರಖರವಾದ ವ್ಯಂಗ್ಯದ ಮೂಲಕ ಸಮಾಜದ ಓರೆ ಕೋರೆಗಳನ್ನು ತಿದ್ದುವ ನೈತಿಕ ತಾಖತ್ತಿದೆ. ಸುಬ್ಬಯ್ಯನವರ ಬದುಕಿನಲ್ಲಿ ಐಹಿಕ ಸುಖ -ಸಂಪತ್ತುಗಳಿಗೂ ಮಿಗಿಲಾದದ್ದು ಇರುವುದಾದರೆ ಅದು ಸಾರ್ವಜನಿಕ ಕಳಕಳಿಯ ಹಿತಾಸಕ್ತಿ ಮಾತ್ರ !

ಈ ಸಕಾರಾತ್ಮಕ ಸದಭಿರುಚಿಯ ಸಂಸ್ಕಾರವಂತ ರಾಜಕಾರಣಿಯಲ್ಲಿ ಎಂತಹ ಸಂದರ್ಭದಲ್ಲೂ ಎದ್ದು ಕಾಣುವ ಮಾನವೀಯ ಗುಣಗಳು ಪ್ರಶ್ನಾತೀತವಾದುದು.

'ಮತದ ಮತಿಹೀನತೆಯು ಸಾಕೆಮಗೆ!
ಬೇಕು ಸನ್ಮತಿಯ ನಾಗರೀಕತೆಯು!

ಎಂಬ ಕುವೆಂಪುವಾಣಿಯಂತೆ ಜಾತ್ಯಾತೀತನಿಲುವನ್ನು ಹೊಂದಿರುವ ಸುಬ್ಬಯ್ಯನವರು ಮೂಢತನ –ಮೂಢನಂಬಿಕೆಗಳ ಆಚರಣೆಗಳನ್ನು ತೀವ್ರವಾಗಿ ಖಂಡಿಸಿ ವೈಜ್ಞಾನಿಕದೃಷ್ಟಿಕೋನ ಬೆಳೆಸಲು ಸಮಾಜಕ್ಕೆ ಪ್ರೇರಣೆ ನೀಡಿದ್ದಾರೆ.

"ನಮ್ಮ ಜೀವಿತದ ಅವಧಿಯಲ್ಲಿ ಪರಸ್ಪರ ಮಾನವಪ್ರೀತಿ ಮತ್ತು ನಿರ್ಭೀತಿಯ ವಾತಾವರಣಕ್ಕಾಗಿ ನಿರಂತರವಾಗಿ ಸೆಣೆಸುವ ಸರ್ವಶ್ರೇಷ್ಠವಾದ ಹೊಣೆಗಾರಿಕೆಯನ್ನು ನಾನು ಬಂಡಾಯವೆಂದು ನಂಬಿದ್ದೇನೆ" ಎಂಬ ಡಾ॥ ಕಾಳೇಗೌಡ ನಾಗವಾರರ ಅಭಿಪ್ರಾಯಕ್ಕೆ ಮೂರ್ತರೂಪವೆಂದರೆ ನಿಸ್ಸಂಶಯವಾಗಿಯೂ ಶ್ರೀ ಎ.ಕೆ. ಸುಬ್ಬಯ್ಯನವರು. ಬಹುತೇಕ ಇವರು ಕೈಗೊಂಡ ಜನಪರ ಹೋರಾಟಗಳಲ್ಲಿ ತಮ್ಮವರಿಂದಲೇ ಅನೇಕ ರೀತಿಯ ಎಡರು ತೊಡರುಗಳನ್ನು ಎದುರಿಸಿದರೂ ಸಹ ಜನರ ಹಿತಕ್ಕಾಗಿ ಹೋರಾಡಿ ಸರಿ ಸುಮಾರು ದಶಕಗಳ ಕಾಲ ನ್ಯಾಯಾಲಯಗಳಲ್ಲಿ ಸೆಣೆಸಿ ಕೊಡಗಿನ ಭೂಹಿಡುವಳಿದಾರರಿಗೆ ಬಾಣೆ ಜಮೀನಿನ ಒಡೆತನವನ್ನು ಒದಗಿಸಿಕೊಟ್ಟದ್ದು ಇವರ ಸಾರ್ವಜನಿಕ ಹೋರಾಟಗಳಲ್ಲಿ ಅತಿ ಮುಖ್ಯವಾದದ್ದು. ಆ ಸಂಬಂಧವಾಗಿ ಎಷ್ಟೇ ಅಡಚಣೆಗಳು ಬಂದಾಗ್ಯೂ ನಿರಾಶಾದಾಯಕ ಪರಿಸ್ಥಿತಿಯ ಸಂದರ್ಭಗಳಲ್ಲೂ ಸಹ ಎದೆಗುಂದದೆ ಧೈರ್ಯದಿಂದ ಹೋರಾಡುತ್ತಾ ಬಂದವರು. ವಕಾಲತ್ತಿಗಾಗಿ ಹುದಿಕೇರಿಯ ಎ. ಸೆವೆನ್ ಕ್ಲಬ್ಬಿನ ಸದಸ್ಯರು ಕೇಸು ನಡೆಸಲು ನೀಡಿದ ಏಳು ಸಾವಿರ ರೂಪಾಯಿಗಳನ್ನಲ್ಲದೇ ಇತರ ಯಾರಿಂದಲೇ ಆಗಲಿ ಬಿಡಿಗಾಸನ್ನೂ ಪಡೆಯದೆ ತಮ್ಮ ಸ್ವಂತ ಹಣದಿಂದ ನಿರಂತರ ಪ್ರಯತ್ನ ಪಟ್ಟು ಅತ್ಯಂತ ಕ್ಲಿಷ್ಟಕರವಾಗಿದ್ದ ಬಾಣೆ ಜಮೀನಿನ ಸಂಬಂಧವಾಗಿ ಸರಕಾರದ ವಿರುದ್ಧ ಜಯಭೇರಿ ಬಾರಿಸಿ ಕೊಡಗಿನ ಭೂಹಿಡುವಳಿದಾರರಿಗೆ ಒಳಿತನ್ನುಂಟು ಮಾಡಿದ್ದು ಶ್ರೀ ಸುಬ್ಬಯ್ಯನವರ ಜೀವನದ ಅತ್ಯಂತ ಪ್ರಮುಖ ಸಂಗತಿ. ಮಾತನಾಡುವವರು ಬರೆಯುವುದಿಲ್ಲ; ಬರೆಯುವವರು ಸಮರ್ಥವಾಗಿ ಮಾತನಾಡುವುದಿಲ್ಲ ಎಂಬ ಅಭಿಪ್ರಾಯಕ್ಕೆ ಅಪವಾದವೆಂಬಂತೆ ತಮಗೆ ಸರಿಯೆನಿಸಿದ್ದನ್ನು ಕೇವಲ ಮಾತನಾಡುವುದಷ್ಟೇ ಅಲ್ಲ ಅದರಂತೆಯೇ ನಡೆಯುವ ಹಾಗೂ ಅಂತೆಯೇ ಅದನ್ನು ದಾಖಲಿಸಲೂ ಬಲ್ಲ ಅಪರೂಪದ ಪ್ರತಿಭಾವಂತರು ಸುಬ್ಬಯ್ಯನವರು.

ಯಾವತ್ತೂ ಜನಪರ ಕಾಳಜಿಯುಳ್ಳ ಸಮಾಜಮುಖಿಯಾದ ಸುಬ್ಬಯ್ಯನವರು ವೈಚಾರಿಕತೆ ಮತ್ತು ಧೀಮಂತಿಕೆಗಳ ಸಂಗಮವಾಗಿ ತಮ್ಮ ಹೃದಯಕ್ಕೆ ಆಪ್ತವಾಗಿಸಿಕೊಂಡದ್ದು ಸಮಕಾಲೀನಜೀವನದ ಸಮಸ್ಯೆಗಳ ಬಗೆಗೆ ಚಿಂತನ–ಮಂಥನ

ಮತ್ತು ಅದರ ಪರಿಹಾರೋಪಾಯಗಳ ವಾಸ್ತವ ನೆಲೆಗಟ್ಟಿನ ಋಜುಮಾರ್ಗ. ನಿರಂತರ ಸಂಘರ್ಷದಿಂದ ಕೂಡಿರುವ ಬದುಕನ್ನು ಸವಾಲಾಗಿ ಸ್ವೀಕರಿಸುತ್ತ, ಜೀವನ ದೃಷ್ಟಿಯನ್ನು ಹಿರಿದಾಗಿಸಿಕೊಂಡು ಸಾಮಾಜಿಕ ನ್ಯಾಯಕ್ಕಾಗಿ ಸೆಣೆಸುವುದೇ ಅವರಿಗೆ ಅಚ್ಚುಮೆಚ್ಚು.

ತಮ್ಮ ಮನೆಮಾತು "ಕೊಡವ" ಆದರೂ ಕನ್ನಡದ ಬಗೆಗಿನ ಅವರ ಅನನ್ಯ ಅಕ್ಕರೆ ಅದ್ಭುತವಾದುದು. ಅಂತೆಯೇ ಕನ್ನಡನಾಡಿನ ಬಗೆಗಿನ ಅವರ ಅಚಲ ಅಭಿಮಾನ, ಗೌರವ ಪ್ರಶ್ನಾತೀತವಾದುದು. ಇಂತಹ ಅಪರೂಪದ ಸಮಷ್ಠಿ ಪ್ರಜ್ಞೆಯ ಮನೋಭಾವವನ್ನು ಸಹಜವಾಗಿ ತಮ್ಮ ವ್ಯಕ್ತಿತ್ವದಲ್ಲಿ ಹೊಂದಿರುವುದರಿಂದಲೇ ಬಡವರ, ದಲಿತರ, ಅಲ್ಪ ಸಂಖ್ಯಾತರ, ಅಸಹಾಯಕರ ಮತ್ತು ಮಹಿಳೆಯರ ಪರವಾಗಿ ಹೋರಾಡುವ ಗುಣ ಅವರಲ್ಲಿ ಅನೂಚಾನವಾಗಿ ಬೆಸೆದು ಬಂದಿದೆ. ಜನರು ಮೂಢನಂಬಿಕೆಗಳ ದಾಸರಾಗುವ ಮೂಲಕ ಸುಲಭವಾಗಿ ಶೋಷಣೆಗೆ ಒಳಪಡುತ್ತಿರುವ ಬಗ್ಗೆ ಮರುಕ ಪಡುವ ಸುಬ್ಬಯ್ಯನವರು ಜನರು ಹೆಚ್ಚು-ಹೆಚ್ಚು ವಿಚಾರವಂತರಾಗಬೇಕು ಮತ್ತು ಮಾನವೀಯಮೌಲ್ಯಗಳನ್ನು ರೂಢಿಸಿಕೊಳ್ಳಬೇಕೆಂದು ಆಶಿಸುತ್ತಾರೆ.

ಸುಬ್ಬಯ್ಯನವರು ಕರ್ನಾಟಕದಲ್ಲಷ್ಟೇ ಅಲ್ಲ ರಾಷ್ಟ್ರರಾಜಕಾರಣದಲ್ಲಿಯೇ ವಿಶಿಷ್ಟ ಸ್ಥಾನಮಾನ ಪಡೆದ ಅಪೂರ್ವ ರಾಜಕಾರಣಿ. ಇವರು ತಮ್ಮ ಹರಿತವಾದ ಭಾಷಣಗಳಿಂದಲೂ, ಅನ್ಯಾಯದ ವಿರುದ್ಧ ಹೋರಾಡುವ ಮನೋಭಾವದಿಂದಾಗಿಯೂ ಯಾವುದೇ ಸಮಸ್ಯೆಯ ವಿರುದ್ಧ ಜನಹಿತ ಕಾರ್ಯಕ್ಕಾಗಿ ಸೆಣೆಸುತ್ತಾ ತಮ್ಮದೇ ನಿಲುವಿಗೆ ಬದ್ಧರಾಗಿರುತ್ತಿದ್ದುದರಿಂದಲೇ "ಸುದ್ದಿ ಸುಬ್ಬಯ್ಯ" ನವರೆಂದು ಜನಜನಿತರಾದರು. ಆಡಳಿತ ಪಕ್ಷದ ಯಾವುದೇ ಲೋಪ-ದೋಷಗಳಾದರೂ ಸರಿಯೇ ಅದನ್ನು ಯಾವ ಮುಲಾಜಿಗೂ ಒಳಪಡದೆ ಟೀಕಿಸಿ ಮಂತ್ರಿ- ಮಹೋದಯರುಗಳ ಅಸಲೀತನವನ್ನು ಅನಾವರಣಗೊಳಿಸಲು ಹಿಂಜರಿಯದ ದಿಟ್ಟೆದೆಯ ಶುದ್ಧ ಹಸ್ತದ ನಿಷ್ಠಾವಂತ.

ಪ್ರತಿಯೊಂದು ವಿಷಯವನ್ನು ಕೂಲಂಕಷವಾಗಿ ಪರೀಕ್ಷಿಸಿ ಒಳಿತಾದುದ್ದನ್ನು ಒಪ್ಪಿಕೊಳ್ಳುವ ಇವರ ದೃಷ್ಠಿಕೋನ, ದೂರದರ್ಶಿತ್ವ ಮನೋಭಾವವು ಅವರನ್ನು ಒಬ್ಬ ದಕ್ಷ ರಾಜಕೀಯ ಮುತ್ಸದ್ದಿಯನ್ನಾಗಿಸಿದೆ. ವಿಚಾರವಾದಿಗಳೂ, ಸಮಾನತಾವಾದಿಗಳೂ ಸ್ವಚ್ಛ ಚಾರಿತ್ರ್ಯದ, ದಿಟ್ಟ ನಡೆ-ನುಡಿಯ ಅಪರೂಪದ ವ್ಯಕ್ತಿಯಾದ ಶ್ರೀ ಅಜ್ಜಿಕುಟ್ಟೀರ ಸುಬ್ಬಯ್ಯನವರು ಇಂದಿಗೂ ಮುಂದಿಗೂ ಎಂದೆಂದಿಗೂ ಚರಿತ್ರೆಯಲ್ಲಿ ಇತ್ಯಾತ್ಮಕ ಕ್ರಿಯಾತ್ಮಕತೆಯ ಜೀವಂತ ನಿದರ್ಶನವಾಗಿರುತ್ತಾರೆ.

# ಎ.ಕೆ. ಸುಬ್ಬಯ್ಯನವರ ದೃಷ್ಟಿಯಲ್ಲಿ

**(ಅ) ಧರ್ಮ ಮತ್ತು ರಾಜಕೀಯ :** ಧರ್ಮ ಮತ್ತು ರಾಜಕೀಯ ಎರಡೂ ಭಿನ್ನವೆಂದು ಪ್ರತಿಪಾದಿಸುತ್ತಾ "ನಿತ್ಯ ಭಜನೆ ಮಾಡುತ್ತಾ ಆತ್ಮಶುದ್ಧಿ, ಮುಕ್ತಿ ಮತ್ತಿತರ ವಿಚಾರಗಳಲ್ಲಿ ಕಾವಿತೊಟ್ಟ ಸನ್ಯಾಸಿಪಡೆ ಮುಳುಗುತ್ತದೆ. ಇದು ಅವರ ಧರ್ಮ ಅಥವಾ ತತ್ವ. ರಾಜ್ಯಾಂಗ ಹಾಗೂ ಕಾರ್ಯಾಂಗಗಳು ಕಾನೂನಿನಂತೆ ಕರ್ತವ್ಯ ನಿರ್ವಹಿಸುತ್ತಾ ಜನರಿಗೆ ನೆಮ್ಮದಿಯ ಜೀವನ ಒದಗಿಸುವುದು ಸರಕಾರದ ಕರ್ತವ್ಯ"–ಎಂದು ಹೇಳಿ ಮಠಗಳು ಪರ್ಯಾಯ ರಾಜಕೀಯ ಕೇಂದ್ರಗಳಾಗಿರುವ ಕುರಿತು ಅಸಹನೆ ವ್ಯಕ್ತಪಡಿಸುತ್ತಾರೆ.

**(ಅ) ದೇವರ ಅಸ್ತಿತ್ವ ಮತ್ತು ಮೂಢನಂಬಿಕೆ:** ದೇವರ ಅಸ್ತಿತ್ವ ಮತ್ತು ಇರುವಿಕೆಯ ಬಗ್ಗೆ ಎ.ಎನ್. ಮೂರ್ತಿರಾಯರ "ದೇವರು ಕೃತಿಯಲ್ಲಿನ ಮಹತ್ವವನ್ನು ಪುಷ್ಠೀಕರಿಸುತ್ತಾ ಸುಬ್ಬಯ್ಯನವರು, "ದೇವರಿದ್ದಾನೋ ಇಲ್ಲವೋ ಎನ್ನುವ ಬಗ್ಗೆ ಮೇಧಾವಿಗಳಲ್ಲಿ, ತತ್ವಜ್ಞಾನಿಗಳಲ್ಲಿ, ವಿಜ್ಞಾನಿಗಳಲ್ಲಿ ಹೀಗೆ ಎಲ್ಲರಲ್ಲಿಯೂ ಭಿನ್ನಾಭಿಪ್ರಾಯವಿರುದಂತೂ ನಿಜ. ಅಂದ ಮೇಲೆ ದೇವರಿದ್ದಾನೆನ್ನುವುದು ಸರ್ವವಿಧಿತವಾದುದೇನೂ ಅಲ್ಲ. ಆದರೂ ಈ ಬಗ್ಗೆ ಚಿಂತನೆ ಮಾಡುವ ಗೋಜಿಗೇ ಹೋಗದೆ, ದೇವರು ಖಂಡಿತಾ ಇದ್ದಾನೆಂದು ನಂಬಿ ಶರಣಾಗುವುದೇ ವಸ್ತು ಸ್ಥಿತಿ ಅಂದರೆ ದೇವರಿದ್ದಾನೆಂಬುದು ಒಂದು ಅಚಲವಾದ ನಂಬಿಕೆ ಮಾತ್ರವೆಂಬುದು ಸ್ಪಷ್ಟ" ಎಂದು ಅಭಿಪ್ರಾಯಪಡುತ್ತಾರೆ.

"ತಾಯಿ–ಸತ್ಯ, ತಂದೆ–ನಂಬಿಕೆ" – ಎಂಬಂತೆ ನಂಬಿಕೆಯು ಸತ್ಯವಾಗಿರಲೇಬೇಕೆಂದೇನೂ ಇಲ್ಲ. ಹಿಂದು ಮುಂದಾಲೋಚನೆ ಮಾಡದೆ ಯಾರೋ ಹೇಳಿದ್ದಾರೆಂದೋ, ಎಲ್ಲೋ ಬರೆದಿದೆಯೆಂದೋ ನಂಬುವುದು ಮೂಢನಂಬಿಕೆಯಾಗುತ್ತದೆ. ಮೂಢನಂಬಿಕೆಯಿಂದ ಮನುಷ್ಯನ ಉದ್ದಾರವಾಗಲೀ, ಪ್ರಗತಿಯಾಗಲಿ ಸಾಧ್ಯವಿಲ್ಲ ಎಂದು ಒತ್ತಿ ಹೇಳುತ್ತಾರೆ. ಅಲ್ಲದೇ ಮೂಢನಂಬಿಕೆಗಳ ಅರ್ಥಹೀನ ಆಚರಣೆಗಳನ್ನು ಖಂಡಿಸುತ್ತಾ "ಮಳೆ ಬಾರದಿದ್ದಾಗ ಪ್ರಾರ್ಥನೆ, ಪೂಜೆ, ಕಪ್ಪೆ–ಮದುವೆ, ಕತ್ತೆ–ಮದುವೆಯಂತಹ ಆಚರಣೆಗಳನ್ನು ಬದಿಗೊತ್ತಿ ತಂತ್ರಜ್ಞಾನದ ಮೂಲಕ ವೈಜ್ಞಾನಿಕ ವಿಧಿ–ವಿಧಾನಗಳನ್ನು ಅನುಸರಿಸಿ, ಜನರ ಸಮಸ್ಯೆಗೆ ಪರಿಹಾರ ಹುಡುಕುವ ಕಾರ್ಯದಲ್ಲಿ ತೊಡಗಬೇಕೇ ವಿನಹ 'ಪೂಜೆ

ಪ್ರಾರ್ಥನೆಗಳಿಂದ ದೇವರನ್ನು ಒಲಿಸಿ ಮಳೆ ಸುರಿಯುವಂತೆ ಮಾಡುತ್ತೇವೆ' ಎಂಬುದು ಮೂರ್ಖತನ" ಎಂದು ಅಸಂಬದ್ಧ ಆಚರಣೆಗಳನ್ನು ಕಟುವಾಗಿ ಖಂಡಿಸುತ್ತಾರೆ.

ದೇವರು ಮತ್ತು ದೇವಲೋಕದ ಬಗ್ಗೆ ಪ್ರಶ್ನಿಸುತ್ತಾ- "ದೇವಲೋಕದಲ್ಲಿ ಏನೇನಿದೆಯೆಂದು ವರ್ಣಿಸುವ ಪುರಾಣಗಳು ದೇವಲೋಕ ಎಲ್ಲಿದೆ ಎಂದು ಏಕೆ ಹೇಳುವುದಿಲ್ಲ? ಮನುಷ್ಯ ಆಕಾಶವನ್ನು ತೋರಿಸಿ "ಅದೇ ದೇವಲೋಕ" ಎನ್ನುತ್ತಾನೆ. ಆಕಾಶದಲ್ಲಿ ವಿಮಾನಗಳು ಹಾರಾಡುತ್ತವೆ. ಹೀಗೆ ಹಾರಾಡುವಾಗ ಎಲ್ಲಿಯೂ ಯಾರಿಗೂ ದೇವಲೋಕ ಗೋಚರಿಸಿಲ್ಲ. ರಾಕ್ಷಸರಿಗೆ ಮಾತ್ರ ಗೋಚರಿಸುತ್ತಿತ್ತು. ರಾಕ್ಷಸರಿಗೆ ಕಾಣಿಸುತ್ತಿದ್ದ ದೇವರುಗಳು ಮನುಷ್ಯನಿಗೇಕೆ ಕಾಣುವುದಿಲ್ಲ? ರಾಕ್ಷಸರು ದಾಳಿ ನಡೆಸುತ್ತಾ ಬಂದ ಲೋಕಕ್ಕೆ ಮನುಷ್ಯನಿಗೇಕೆ ಹೋಗಲಾಗುವುದಿಲ್ಲ?

ಎಂಬ ಈ ಎಲ್ಲಾ ಪ್ರಶ್ನೆಗಳಿಗೆ ಪುರೋಹಿತರಿಂದ 'ಅದು ಮಾಯಾಲೋಕ' ಆದ್ದರಿಂದ ಅದು ಮನುಷ್ಯನಿಗೆ ಕಾಣಿಸುತ್ತಿಲ್ಲ.' ಎಂಬ ಹಾರಿಕೆಯ ಉತ್ತರ ದೊರೆಯಬಹುದು" ಎಂದು ವ್ಯಂಗ್ಯವಾಡುತ್ತಾರೆ.

**(ಇ) ಧರ್ಮ ಮತ್ತು ಸಮಾನತೆ:** ಧರ್ಮ ಪ್ರವರ್ತಕರುಗಳೂ, ಮಹಾನ್ ಮಾನವತಾವಾದಿಗಳೂ ಸಮಾಜಸುಧಾರಕರುಗಳೂ ಆದ ಮಹಾವೀರ, ಗೌತಮಬುದ್ಧ, ಬಸವಣ್ಣ, ಅಕ್ಕಮಹಾದೇವಿ, ಮಹಾತ್ಮಗಾಂಧಿ, ರಾಜಾರಾಂ ಮೋಹನರಾಯ್, ಅಂಬೇಡ್ಕರ್‌ರವರ ಸಿದ್ಧಾಂತಗಳನ್ನು ಬಹುವಾಗಿ ಮೆಚ್ಚುವ ಸುಬ್ಬಯ್ಯನವರು 'ಬಸವಣ್ಣನವರು ಅನುಭಾವಕ್ಕೆ ಹೆಚ್ಚು ಮಹತ್ವ ನೀಡುತ್ತಾರೆ. ಆದ್ದರಿಂದಲೇ ಅವರು ಹಿಂದೂ ವೈದಿಕ ಧರ್ಮದ ಶ್ರೇಣೀಕೃತ ಸಮಾಜ ವ್ಯವಸ್ಥೆಗೆ ಪ್ರತಿಕ್ರಿಯಿಸಲೆಂದೇ ಶರಣ-ಧರ್ಮದ ಪ್ರವರ್ತಕರಾದರು' ಎಂದು ಹೇಳಿ, "ಜಾತಿ ವ್ಯವಸ್ಥೆ ಮತ್ತು ಸ್ತ್ರೀ ಅಸಮಾನತೆಯನ್ನು ಸೃಷ್ಟಿಸಿದ ಪುರೋಹಿತಶಾಹಿಗಳು, ಕೊಳಕು ಹಿಂದೂ ಸಂಸ್ಕೃತಿಯ ಉದಯಕ್ಕೆ ಕಾರಣರಾದರು. ಇಂತಹ ಅವಮಾನಕರವಾದ ವ್ಯವಸ್ಥೆಯ ವಿರುದ್ಧ ಸಿಡಿದೆದ್ದ ಬಂಡಾಯವೇ ಜೈನ, ಬೌದ್ಧ, ವೀರಶೈವ ಧರ್ಮಗಳಾಗಿ ರೂಪುಗೊಂಡವು. ಇವು ಮಾನವಧರ್ಮದ ಉದಯಕ್ಕೆ ಕಾರಣವಾಗಿ ಮನುಷ್ಯನ ಬದುಕನ್ನು ಮತ್ತು ಅವನ ಸಾಮಾಜಿಕಸ್ತರವನ್ನು ಮೇಲೆತ್ತಲೂ ಕಾರಣವಾಯಿತು" - ಎಂದು ಮೆಚ್ಚುಗೆ ವ್ಯಕ್ತಪಡಿಸುತ್ತಾರೆ.

**(ಈ) ಜಾತ್ಯಾತೀತತೆ:** ಶುದ್ಧನಾಸ್ತಿಕರಾದ ಶ್ರೀ ಎ.ಕೆ. ಸುಬ್ಬಯ್ಯನವರು ದೇವರು, ಧರ್ಮ, ಕೋಮುವಾದ, ಭ್ರಷ್ಟಾಚಾರ, ಮೂಢನಂಬಿಕೆ, ಢಂಬಾಚಾರ, ಶೋಷಣೆಗಳಂತಹ ಸಾಮಾಜಿಕ ಅನಿಷ್ಟಗಳ ಕಟ್ಟಾವಿರೋಧಿಗಳು. ನುಡಿದಂತೆ ನಡೆವ

ಸ್ವನಿಷ್ಠಾವಂತ ಆತ್ಮಾಭಿಮಾನಿ. ಜೊತೆಗೆ ಸಮಾನತಾವಾದಿಯಾದ ಸುಬ್ಬಯ್ಯನವರ ಬದುಕು ಆದರ್ಶನೀಯ, ಇವರ ಐವರು ಪುತ್ರರೂ ಪ್ರೇಮವಿವಾಹವಾಗಿದ್ದು. ಅವರಲ್ಲಿ ಮೊದಲ ನಾಲ್ವರೂ ಅಂತರಜಾತಿ ವಿವಾಹವನ್ನು ಮಾಡಿಕೊಂಡಿರುವುದು ಅವರ ಜಾತ್ಯಾತೀತ ನಿಲುವಿಗೆ ನಿದರ್ಶನ.

## ಸಾರ್ವಜನಿಕ ಬದುಕು

ನ್ಯಾಯಕ್ಕಾಗಿ ಅನವರತ ಹೋರಾಡುವುದನ್ನು ತಮ್ಮ ಧರ್ಮವನ್ನಾಗಿ ಸ್ವೀಕರಿಸಿರುವ ಶ್ರೀ ಸುಬ್ಬಯ್ಯನವರು ತಮ್ಮನ್ನು ವಿದ್ಯಾರ್ಥಿದೆಸೆಯಲ್ಲಿಯೇ ಸಾರ್ವಜನಿಕ ಬದುಕಿಗೆ ಸರ್ಮಪಿಸಿಕೊಂಡವರು. 1959ರಲ್ಲಿ ನಡೆದ ವಿರಾಜಪೇಟೆಕ್ಷೇತ್ರದ ಉಪಚುನಾವಣೆಯಲ್ಲಿ ಪ್ರಜಾಸಮಾಜವಾದಿ ಪಕ್ಷದ ಅಭ್ಯರ್ಥಿಯು ಕಾಂಗ್ರೆಸ್ ಪಕ್ಷದ ವಿರುದ್ಧ ಗೆಲವು ಸಾಧಿಸಲು ಶ್ರಮಿಸುವ ಮೂಲಕ ರಾಜಕೀಯ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದ ಶ್ರೀಯುತರು 1962ರಲ್ಲಿ ನಡೆದ ಸಾರ್ವಜನಿಕ ಚುನಾವಣೆಯ ತರುವಾಯ "ಜನ ಸಂಘ" ಎಂಬ ರಾಜಕೀಯ ಪಕ್ಷವನ್ನು ಕಟ್ಟಲು ತೊಡಗಿದರು. ಆ ಸಮಯದಲ್ಲಿ ಆರ್.ಎಸ್.ಎಸ್. ನವರು ಆಗಾಗ್ಗೆ ಇವರನ್ನು ಭೇಟಿಮಾಡತೊಡಗಿ ಜನಸಂಘಕ್ಕೆ ತಮ್ಮ ಬೆಂಬಲ ವ್ಯಕ್ತಪಡಿಸತೊಡಗಿದ ಕಾರಣದಿಂದ ಸಹಜವಾಗಿಯೇ ಆಗಿನ್ನೂ ವಿದ್ಯಾರ್ಥಿಯಾಗಿದ್ದ ಎ.ಕೆ. ಸುಬ್ಬಯ್ಯನವರಿಗೆ ಆರ್.ಎಸ್.ಎಸ್. ಪರವಾಗಿ ಒಲವು ಬೆಳೆಯಿತು. ಆ ಪರಿಣಾಮವಾಗಿ ಅವರನ್ನು 1963ರಲ್ಲಿ ಶಿವಮೊಗ್ಗದ ತಮ್ಮ ಶಿಬಿರಕ್ಕೆ ಆರ್.ಎಸ್.ಎಸ್.ನವರು ಕರೆದೊಯ್ದರು. ಅಲ್ಲಿದ್ದ ಒಂದು ತಿಂಗಳ ಅವಧಿಯಲ್ಲಿ ಆರ್.ಎಸ್.ಎಸ್. ಬಗ್ಗೆ ತಮಗೆ ಸದಭಿಪ್ರಾಯವೇ ಮೂಡಿ ಬಂದರೂ ಸಹ ಅದರ ಯಜಮಾನಿಕೆಯನ್ನು ಸ್ವೀಕರಿಸದೆ ತಮ್ಮ ಸ್ವಕ್ಷೇತ್ರವಾದ ವಿರಾಜಪೇಟೆ ತಾಲ್ಲೂಕಿನಲ್ಲಿ ಸ್ವತಂತ್ರವಾಗಿ ಜನಸಂಘವನ್ನು ಕಟ್ಟಿ ಬೆಳೆಸಿದ್ದರಿಂದ 1967ರ ಚುನಾವಣೆಯಲ್ಲಿ ಜನಸಂಘಕ್ಕೆ ಜಯವು ಸಿದ್ದಿಸಿತು.

1967ರ ಚುನಾವಣೆ ನಂತರ ಕೊಡಗು ಜಿಲ್ಲೆಯಲ್ಲಿ ಬಹಳ ದೊಡ್ಡರೀತಿಯಿಂದ ಪ್ರವೇಶ ಪಡೆದ ಆರ್.ಎಸ್.ಎಸ್ ಹಾಗೂ ತಮ್ಮ ಜನಸಂಘದಲ್ಲಿನ ಹಲವಾರು ದೋಷಗಳನ್ನು ಗುರುತಿಸಿ ಅವುಗಳ ವಿಶ್ಲೇಷಣೆಗೆ ಸುಬ್ಬಯ್ಯನವರು ತೊಡಗಿ ಆ ದೋಷಗಳನ್ನು ನಿವಾರಿಸುವ ಆಶಯ ವ್ಯಕ್ತಪಡಿಸಿದಾಗಲೆಲ್ಲಾ ಆರ್.ಎಸ್.ಎಸ್. ಮುಖಂಡರೊಡನೆ ದೊಡ್ಡಮಟ್ಟದಲ್ಲಿ ವಾಗ್ಯುದ್ಧವೇ ನಡೆದುಹೋಗುತ್ತಿತ್ತು. ಆದಾಗ್ಯೂ 1968ರ ವಿಧಾನ ಪರಿಷತ್ತಿಗೆ ಸುಬ್ಬಯ್ಯನವರು

ಆರಿಸಿ ಬರಲು ಇವರ ಪರಿಶ್ರಮದೊಡನೆ ಆರ್.ಎಸ್.ಎಸ್.ನ ಸಕ್ರಿಯ ಪ್ರಯತ್ನವೂ ಮುಖ್ಯವಾಗಿತ್ತು.

1973 ರಿಂದ ತಮ್ಮ ಜನ ಸಂಘದಲ್ಲಿನ ದೋಷಗಳನ್ನು ನಿವಾರಿಸಿ ಜನರಿಗೆ ಅನುಕೂಲ ಮಾಡಿಕೊಡುವ ನಿಟ್ಟಿನಲ್ಲಿ ತಮ್ಮನ್ನು ತೊಡಗಿಸಿಕೊಂಡಾಗ ಆರ್.ಎಸ್.ಎಸ್. ಅವರೊಡನೆ ಅತೀವ ಬಿಕ್ಕಟ್ಟು ಏರ್ಪಟ್ಟ ಕಾರಣ 1974 ಮತ್ತು 1980ರ ಚುನಾವಣೆಯಲ್ಲಿ ಶ್ರೀ ಎ.ಕೆ.ಸುಬ್ಬಯ್ಯನವರು ವಿಧಾನ ಪರಿಷತ್‌ಗೆ ಆರಿಸಿಬಂದರೂ ಸಹ ಅವರ ಆಯ್ಕೆಯಲ್ಲಿ ಆರ್.ಎಸ್.ಎಸ್.ನವರು ಯಾವುದೇ ಆಸ್ಥೆ ವಹಿಸದೇ ಅಸಡ್ಡೆ ತೋರಿಸಿದರು. ಹಾಗೆ ನೋಡಿದರೆ ಸ್ವತಂತ್ರ ಚಿಂತಕರಾಗಿ ಹೊರ ಹೊಮ್ಮಿದ್ದ ಸುಬ್ಬಯ್ಯನವರನ್ನು 1974ರ ಸುಮಾರಿನಲ್ಲೇ ಆರ್.ಎಸ್.ಎಸ್. ನವರು ಕಪ್ಪು ಪಟ್ಟಿಯಲ್ಲಿ ಸೇರಿಸಿದ್ದರು. "ಪರಿಸ್ಥಿತಿಯು ಹಾಗೇ ಮುಂದುವರಿದಿದ್ದ ಪಕ್ಷದಲ್ಲಿ ತಮ್ಮದೇ ಸಂಸ್ಥೆಯಾದ ಜನ ಸಂಘದಿಂದ ತಮ್ಮನ್ನೇ ಉಚ್ಚಾಟಿಸುತ್ತಿದ್ದರೇನೋ ಈ ಆರ್.ಎಸ್.ಎಸ್.ನ ಪುರೋಹಿತ ಶಾಹಿಗಳು" ಎಂಬ ಅನಿಸಿಕೆಯೂ ಆ ಸಂದರ್ಭದಲ್ಲಿ ಸುಬ್ಬಯ್ಯನವರಿಗೆ ಬಂದಿದ್ದುಂಟು. ಆ ಸಮಯದಲ್ಲಿ ದೇಶದಾದ್ಯಂತ ತುರ್ತುಪರಿಸ್ಥಿತಿ ಜಾರಿಗೊಳಿಸಲ್ಪಟ್ಟು ಸುಬ್ಬಯ್ಯನವರೊಂದಿಗೆ ಅನೇಕ ಮುಖಂಡರುಗಳು ಬಂಧನಕ್ಕೊಳಗಾಗಿ ಸೆರೆಮನೆಗೆ ತಳ್ಳಲ್ಪಟ್ಟರು. ಜೈಲುವಾಸ ಅನುಭವಿಸಿ ಹೊರ ಬಂದಾಗ ಉದಯಿಸಿದ್ದೆ ಜನತಾಪಾರ್ಟಿ. ಈ ಪಕ್ಷ ಕಟ್ಟಲು ಜನ ಸಂಘದ ಸಂಪರ್ಕವನ್ನು ಸಂಪೂರ್ಣವಾಗಿ ತೊರೆದುಕೊಂಡಿದ್ದ ಸುಬ್ಬಯ್ಯನವರು ಹಗಲು, ರಾತ್ರಿ ಶ್ರಮಿಸಿದ್ದರು. ಅದು ಒಡೆದು ಕೇಂದ್ರ ಸರ್ಕಾರದಲ್ಲಿ ಜನತಾ ಸರ್ಕಾರ ಪತನಗೊಂಡಾಗ ಬಹಳವಾಗಿ ನಿರಾಶೆಗೊಂಡ ಇವರು ರಾಜಕೀಯ ಕ್ಷೇತ್ರವನ್ನು ಶಾಶ್ವತವಾಗಿ ತೊರೆದು ಜನತೆಗೆ ಒಳಿತನ್ನುಂಟು ಮಾಡುವ ಯಾವುದಾದರೂ ಜನಾಂದೋಲನ ಕಾರ್ಯಕ್ರಮದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕೆಂದು ನಿರ್ಧರಿಸಿದರಾದರೂ, ಆ ವೇಳೆಗೆ ಉದಯವಾಗಿದ್ದ ಬಿ.ಜೆ.ಪಿ.ಯವರ ಜನಪರ ನಿಲುವಿನ ಘೋಷಣೆಗಳಿಂದ ಆಕರ್ಷಿತರಾಗಿ ಬಿ.ಜೆ.ಪಿ. ಸೇರಿದರು. ಬಿ.ಜೆ.ಪಿ. ಸಂಚಾಲಕರಾಗಿ ಸ್ವಲ್ಪ ಸಮಯದವರೆಗೆ ಕಾರ್ಯನಿರ್ವಹಿಸಿದ ಸುಬ್ಬಯ್ಯನವರಿಗೆ ಬಿ.ಜೆ.ಪಿ.ಯು ತಮ್ಮದು ಜಾತ್ಯಾತೀತ ಪಕ್ಷವೆಂದೂ ಮತ್ತು ತಾವು ಗಾಂಧಿವಾದಿ ಸಮಾಜ ನಿರ್ಮಾಪಕರೆಂದೂ ಹೇಳಿಕೊಂಡಿದ್ದರೂ ಸಹ ವಾಸ್ತವವಾಗಿ ಅದು ಸಂಘ ಮತ್ತು ಆರ್.ಎಸ್.ಎಸ್.ನ ಪ್ರಭಾವಕ್ಕೆ ಒಳಗಾಗುತ್ತಿರುವುದನ್ನು ಮನಗಂಡು ಅದನ್ನು ತಡೆಯಲು ಪ್ರಯತ್ನಿಸಿ ವಿಫಲರಾದರು. ಇದೇ ಕಾರಣವಾಗಿ ಸುಬ್ಬಯ್ಯನವರ ಮೇಲೆ ಇಲ್ಲ-ಸಲ್ಲದ ಆರೋಪಗಳನ್ನು ಸೃಷ್ಟಿಸಿ ತೇಜೋಭಂಗ ಮಾಡುವ ಪ್ರಯತ್ನವು

ನಡೆಯಿತು. ಬಿ.ಜೆ.ಪಿ ಯಿಂದ ಸಿಡಿದು ಹೊರಬಂದ ಸುಬ್ಬಯ್ಯನವರು ತಾವು ನಂಬಿದ ಸಿದ್ಧಾಂತಗಳನ್ನು ಸಾಕಾರಗೊಳಿಸಲು ಹುಟ್ಟು ಹಾಕಿದ ಪಕ್ಷವೇ "ಕನ್ನಡ ನಾಡು". ಅದು ನಿಜಕ್ಕೂ ತಮ್ಮ ಧ್ಯೇಯಗಳಿಗನುಗುಣವಾಗಿ ಕಾರ್ಯನಿರ್ವಹಣೆಯಲ್ಲಿ ತೊಡಗಿದ್ದು ಶ್ರೀಯುತರಿಗೆ ಸಂತಸ ತಂದ ಘಟನೆಗಳಲ್ಲೊಂದು. ಈ ನಡುವೆ ಕೊಡಗಿನಲ್ಲಿ "ಜಿಲ್ಲಾ ರೈತ ಸಂಘ" ವನ್ನು ಸ್ಥಾಪಿಸಿ ರೈತರಿಗೆ ಹಲವು ರೀತಿಯ ಸೌಲಭ್ಯಗಳನ್ನು ಒದಗಿಸಿಕೊಡಲು ಮುಂದಾದರು.

1987ರಿಂದ ಕರ್ನಾಟಕ ರಾಜ್ಯದ ಹೈಕೋರ್ಟ್‌ನಲ್ಲಿ ವಕೀಲರಾಗಿ ವೃತ್ತಿಯನ್ನಾರಂಭಿಸಿದ ಸುಬ್ಬಯ್ಯನವರು ತಮ್ಮ ವೃತ್ತಿಯ ಜೊತೆಯಲ್ಲೇ ಶತಮಾನಗಳಿಂದಲೂ ಬ್ರಿಟೀಷರ ಮತ್ತು ನಂತರ ಪಟ್ಟಭದ್ರ ಹಿತಾಸಕ್ತಿಗಳ ಹಿಡಿತಕ್ಕೊಳಗಾಗಿದ್ದ ಭೂಹಿಡುವಳಿದಾರರ ಒಳಿತಿಗಾಗಿ, ಅನೇಕ ಕಷ್ಟ- ನಷ್ಟಗಳೂ ಹಾಗೂ ಅತ್ಯಂತ ಎಡರು-ತೊಡರುಗಳುಂಟಾದರೂ ಎದೆ ಗುಂದದೆ ಜಮ್ಮ ಹಾಗೂ ಬಾಣೆ ಜಮೀನಿಗೆ ಸಂಬಂಧಪಟ್ಟಂತೆ ಸತತ ಆರು ವರ್ಷಗಳ ಹೋರಾಟ ನಡೆಸಿ ಜಯಸಾಧಿಸಿದ್ದು ಅವರ ಸಾಧನೆಗಳಲ್ಲೆಲ್ಲಾ ಕಿರೀಟಪ್ರಾಯವಾಗಿದ್ದು, ಅವರು ನ್ಯಾಯಕ್ಕಾಗಿ ಎಂತಹ ಪ್ರತಿಕೂಲ ಪರಿಸ್ಥಿತಿಯಲ್ಲೂ ಛಲದಿಂದ ಹೋರಾಡಿ 'ಗೆಲುವು' ಎಂಬ ಪ್ರತಿಷ್ಠೆಯನ್ನು ಮುಡಿಗೇರಿಸಿ ಕೊಳ್ಳುತ್ತಾರೆಂಬುದಕ್ಕೆ ಜ್ವಲಂತ ಸಾಕ್ಷಿ. ಅಂತೆಯೇ ಸರಕಾರದ "ಕಂಬದ ಕಡ" ಮತ್ತು "ಬರಪುಳೆ" ಯೋಜನೆಗಳಿಂದ ಕೊಡಗಿಗೆ ಮುಕ್ತಿ ದೊರಕಿಸಿದ್ದು ಸಹ ಶ್ರೀಯುತರ ಜನಪರ ಕಾಳಜಿಗೆ ನಿದರ್ಶನಗಳಾಗಿವೆ. ಪ್ರಸ್ತುತ ಪ್ರಗತಿಪರ ಜನತಾದಳದ ರಾಜಕೀಯ ವ್ಯವಹಾರಗಳ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿರುವ ಸುಬ್ಬಯ್ಯನವರು ಡಾ. ರಾಮಮನೋಹರ ಲೋಹಿಯಾ ಅವರು ಅಭಿಪ್ರಾಯ ಪಡುವಂತೆ "ನಿಜವಾದ ಕ್ರಾಂತಿಯು ಕುಬ್ಜತೆಯ ಸುಳಿವು ಕಾಣದ ಸಮೃದ್ಧ ಮಾನವ ಸಿದ್ಧಾಂತವೊಂದರ ಬೆನ್ನು ಹತ್ತಿರುತ್ತದೆ" ಎಂಬಂತೆ ಯಾವ ಕಾರಣಕ್ಕೂ ಎದೆಗುಂದದೆ ಅನವರತ ಹೋರಾಡುತ್ತ ತೆರೆದ ಮನದವರಾಗಿ, ಮಾನವೀಯ ಸಂಬಂಧಗಳಿಗೆ ಸದಾ ಹತ್ತಿರದವರಾಗಿದ್ದು ಆದರ್ಶಕ್ಕೆ ಮಾದರಿಯಾಗಿದ್ದಾರೆ.

## ಬರಹಗಾರರಾಗಿ

ಹುಟ್ಟು ಹೋರಾಟಗಾರರಾದ ಸುಬ್ಬಯ್ಯನವರು, ಭ್ರಷ್ಟಾಚಾರಕ್ಕಿಂತಲೂ ಕೋಮುವಾದವೇ ಅತ್ಯಂತ ಮಾರಕವೆಂದು ಭಾವಿಸಿ ಅದರ ವಿರುದ್ಧ ಪ್ರಚಂಡ

ಹೋರಾಟಕ್ಕಿಳಿದು ಜನ ಜಾಗೃತಿ ಮೂಡಿಸುವುದಕ್ಕಾಗಿ ಬರೆದ ಕೃತಿಯೇ "ಆರ್.ಎಸ್.ಎಸ್. ಅಂತರಂಗ". ಇದಲ್ಲದೇ ಕಾಲಕಾಲಕ್ಕೆ ಅನ್ಯಾಯದ ವಿರುದ್ಧ ದನಿ ಎತ್ತಿದಂತೆಯೇ ಅದಕ್ಕೆ ಪೂರಕವಾಗಿ ಇವರ ಲೇಖನಿಯಿಂದ "ದಾರಿ ತಪ್ಪಿದ ಕಾವೇರಿ ಹೋರಾಟ" ಮತ್ತು "ನಾಗರ ಹೊಳೆಯಲ್ಲಿ ಕಿಡಿಕಾರಿ ಉರಿದ ನಿರ್ಲಜ್ಜೆ" ಮುಂತಾದ ಕಿರು ಹೊತ್ತಗೆಗಳು ರಚಿಸಲ್ಪಟ್ಟು ಮುದ್ರಣ ಕಂಡಿವೆ.

ಕೊಡಗಿನ ಪ್ರತಿಷ್ಠಿತ ವಾರಪತ್ರಿಕೆ "ಕೊಡಗು ಸಮಾಚಾರ"ದ ಸಂಪಾದಕರಾದ ಶ್ರೀ ಬಿ.ಎನ್. ಮನುಶೆಣೈ ಅವರು ಶ್ರೀ ಎ.ಕೆ. ಸುಬ್ಬಯ್ಯ ಅವರನ್ನು ಸಂಪರ್ಕಿಸಿ ತಮ್ಮ ಪತ್ರಿಕೆಗೆ ಅಂಕಣಕಾರರಾಗಲು ಕೋರಿಕೊಂಡಾಗ ಏಕಾಏಕಿ ಬರಹಕ್ಕಿಳಿದ ಶ್ರೀ ಎ.ಕೆ. ಸುಬ್ಬಯ್ಯನವರು ಆ ಪತ್ರಿಕೆಯ "ಬಿಚ್ಚು ಮಾತುಗಳು" ಅಂಕಣಕ್ಕೆ ಬರಹಗಾರರಾಗಿ ಸತತವಾಗಿ ಬರೆಯತೊಡಗಿದರು..

ಆ ಲೇಖನಗಳ ವಸ್ತು ನಿಷ್ಠತೆ, ಸರಳಶೈಲಿ, ವಿಷಯ ನಿರೂಪಣೆಯ ಪರಿಪಕ್ವತೆಗಳು ಓದುಗರ ಮನಸೆಳೆದು ಜನಪ್ರಿಯರಾದ ಸುಬ್ಬಯ್ಯನವರು ಇಂದಿಗೂ ಆ ಪತ್ರಿಕೆಗೆ ಅಂಕಣಕಾರರಾಗಿ ಬರೆಯುತ್ತಿದ್ದಾರೆ. ಈ ಅಂಕಣದ ಜನಪ್ರಿಯತೆಯ ಕಾರಣಕ್ಕಾಗಿಯೇ ಆ ಪತ್ರಿಕೆಯ ಸಂಪಾದಕರಾದ ಶಣೈ ಅವರು ಸುಬ್ಬಯ್ಯನವರ ಲೇಖನಗಳನ್ನೆಲ್ಲಾ ಒಗ್ಗೂಡಿಸಿ ಪ್ರಕಟಿಸುವ ತೀರ್ಮಾನ ಮಾಡಿ"ಎ.ಕೆ. ಸುಬ್ಬಯ್ಯನವರ ಬಿಚ್ಚು ಮಾತುಗಳು" ಎಂಬ ಸಂಪಾದಿತ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಹೊತ್ತಗೆಯಲ್ಲಿ ಸುಬ್ಬಯ್ಯನವರ "ಆರ್.ಎಸ್.ಎಸ್. ಅಂತರಂಗ" ಎಂಬ ಕೃತಿ ಮತ್ತು "ನಾಗರ ಹೊಳೆಯಲ್ಲಿ ಕಿಡಿಕಾರಿ ಉರಿದ ನಿರ್ಲಜ್ಜೆ" ಎಂಬ ಲೇಖನವನ್ನೂ ಸೇರಿಸಿ ಪ್ರಕಟಿಸಿದ್ದಾರೆ. ಈ ಗ್ರಂಥವೂ ಸುಬ್ಬಯ್ಯನವರ ವ್ಯಕ್ತಿತ್ವ ಹಾಗೂ ನಿಜ ಬದುಕನ್ನು ಅನಾವರಣ ಗೊಳಿಸುವಲ್ಲಿ ಯಶಸ್ವಿಯಾಗಿದೆಯಲ್ಲದೇ, ಅದರಲ್ಲಿನ ಲೇಖನಗಳಲ್ಲಿ ಕೊಡವರ ಹತ್ತು-ಹಲವು ಸಂಪ್ರದಾಯಗಳ, ಮೂಢನಂಬಿಕೆಗಳ, ಅಸ್ಪೃಶ್ಯತಾಚರಣೆಗಳ,"ಜಾತಿಗೆ–ಜಾತಿವೈರಿ, ನೀರಿಗೆ–ಪಾಚಿ ವೈರಿ" ಎಂಬಂತಹ ಕೊಡವರಲ್ಲೇ ಇರುವ ಮೇಲು–ಕೀಳೆಂಬ ಜಾತಿ ಕಲಹದ ವಾಸ್ತವಿಕ ನೆಲೆಯಲ್ಲಿ ವಿಷಯ ಪ್ರಸ್ತಾಪಿಸುವ ಮೂಲಕ ಆ ಜನಾಂಗದ ಒಳಿತು ಕೆಡಕುಗಳನ್ನು ನಿರ್ಭಯವಾಗಿ ವಿಶ್ಲೇಷಿಸಿರುವುದು ಅವರ ನಿರ್ಭೀತ ನಿಷ್ಠುರತನವನ್ನು ಅಭಿವ್ಯಕ್ತಗೊಳಿಸುತ್ತದೆ. ಆ ಪುಸ್ತಕಕ್ಕೆ ಮುನ್ನುಡಿ ಬರೆದ ಡಾ: ಡಿ.ಬಿ.ರಾಮಚಂದ್ರಾಚಾರ್ ಅವರ ಅನಿಸಿಕೆಯು ಇಂತಿದೆ – "ಇದೇ ಲೇಖನಗಳನ್ನು ಕೊಡವನೇತರನೊಬ್ಬ ಬರೆದಿದ್ದರೆ, ಆತನ

ಅಸ್ತಿ–ಆಸ್ತಿಗಳೆರಡಕ್ಕೂ ಜಖಂ ಆಗುತ್ತಿತ್ತು" ಎಂಬ ಮಾತು ಅಕ್ಷರಶಃ ನಿಜ. ಅಂತಹ ವಸ್ತುನಿಷ್ಠ ಬರವಣಿಗೆಯೇ ಆ ಲೇಖನಗಳ ಮಹತ್ವ ಮತ್ತು ಸತ್ವವನ್ನು ಹೆಚ್ಚಿಸಿರುವುದು. ಎ.ಕೆ. ಸುಬ್ಬಯ್ಯನವರ ಮಾತಿನಂತೆಯೇ ಅವರ ಬರವಣಿಗೆಯೂ ಸಹ ನೇರ ಹಾಗೂ ನಿಚ್ಚಳ.

ಅಂತೆಯೇ ಸುಬ್ಬಯ್ಯನವರಿಂದ ರಚಿಸಲ್ಪಟ್ಟ ಆರ್.ಎಸ್.ಎಸ್. ಕಪಿಮುಷ್ಠಿಯಲ್ಲಿ ಭಾ.ಜ.ಪ. ಎಂಬ ಕನ್ನಡ ಮತ್ತು R.S.S. whipping hand of B.J.P. ಎಂಬ ಆಂಗ್ಲ ಆವೃತ್ತಿಯ ಕಿರು ಹೊತ್ತಿಗೆಗಳಲ್ಲಿ ತಮ್ಮ ವಿರುದ್ಧ ಸೃಷ್ಟಿಸಲಾದ ಕ್ಷುಲಕ ಹಾಗೂ ಸುಳ್ಳು ಆರೋಪಗಳು ಮತ್ತು ಅವುಗಳಿಗೆ ತಾವು ನೀಡಿದ ವಸ್ತು ನಿಷ್ಠ ವಿವರಣೆಯೊಂದಿಗಿನ ಉತ್ತರಗಳು ಯಥಾವತ್ತಾಗಿ ದಾಖಲಿಸಲ್ಪಟ್ಟಿವೆ.

ಸಾರ್ವಜನಿಕವಾಗಿ ಗುರುತಿಸಲ್ಪಡುವ ಯಾರೇ ಆದರೂ ತಮ್ಮ ವಿರುದ್ಧ ಆಪಾದನೆಗಳು ಉಂಟಾದಾಗ ಅವು ಅಸಲಿಯೇ ಆಗಿರಲಿ ಅಥವಾ ಸೃಷ್ಟಿಸಿದ್ದೇ ಆಗಿರಲಿ ಅವುಗಳನ್ನು ಇದ್ದುದ್ದನ್ನು ಇದ್ದಂತೆಯೇ ದಾಖಲಿಸಿ ಜನರಿಗೆ ತಲುಪಿಸುವ ಮೂಲಕ ಸತ್ಯಾಂಶವನ್ನು ತಿಳಿಸುವ ಉದ್ದೇಶವು ಘನವಾದದ್ದೇ ಆದರೂ ಆ ರೀತಿ ಮಾಡಲು ಅವರಿಗೆ ಉನ್ನತ ಮಟ್ಟದ ನೈತಿಕತೆಯ ಅವಶ್ಯಕತೆ ಇರುತ್ತದೆ. ಅಂತಹ ಅಪರೂಪದ ಕಿರು ಹೊತ್ತಗೆ, ಶ್ರೀ ಎ.ಕೆ. ಸುಬ್ಬಯ್ಯನವರಿಂದ ರಚಿಸಲ್ಪಟ್ಟ 'ಆರ್.ಎಸ್.ಎಸ್. ಕಪಿ ಮುಷ್ಠಿಯಲ್ಲಿ ಭಾ.ಜ.ಪ.'

ಆ ಕೃತಿಯ ಮುನ್ನುಡಿಯಲ್ಲಿ ಸುಬ್ಬಯ್ಯನವರು ತಮ್ಮನ್ನು ಬಿ.ಜೆ.ಪಿ ವರಿಷ್ಠ ಮಂಡಳಿಯು ಪಕ್ಷದ ಪ್ರಾಥಮಿಕ ಸದಸ್ಯತ್ವದಿಂದ ಹೊರಹಾಕಲು ತಮ್ಮ ವಿರುದ್ಧ ಗಂಭೀರ ಅಶಿಸ್ತು ಮತ್ತು ಪಕ್ಷ ವಿರೋಧಿ ಚಟುವಟಿಕೆಯ ಆರೋಪ ಹೊರಿಸಿದರೂ ಸಹ ಆ ಪಕ್ಷ ವಿರೋಧಿ ಹಾಗೂ ಅಶಿಸ್ತಿನ ನಡವಳಿಕೆಯ ವಿವರಗಳೇನು ಎಂಬುದು ಮಾತ್ರ ಪ್ರಪಂಚಕ್ಕೆ ತಿಳಿಸಲೇ ಇಲ್ಲ ಎಂಬ ವಾಸ್ತವವನ್ನು ತಿಳಿಸುತ್ತಾರೆ.

"ನಿಜಸಂಗತಿ ಎಂದರೆ ಪಕ್ಷದೊಳಗೆ ಆರ್.ಎಸ್.ಎಸ್.ನ ಸಾರ್ವಭೌಮತ್ವವನ್ನು ಯಾವುದೇ ಕಾರಣಕ್ಕಾಗಿ ಒಪ್ಪದಿದ್ದ ನನ್ನನ್ನು ಹೇಗಾದರೂ ಮಾಡಿ ಹೊರಹಾಕಬೇಕಿತ್ತು. ನಾನು ಬಿ.ಜೆ.ಪಿಯ ಘೋಷಿತ ನೀತಿಗೆ ಬದ್ಧನಿದ್ದೆ, 'ಬಾ.ಜ.ಪ.ಕ್ಕೆ ಸದಸ್ಯನಾಗುವವನಿಗೆ ಭಾ.ಜ.ಪ. ಜಾತ್ಯಾತೀತ ರಾಷ್ಟ್ರ ಅಂದರೆ, ಧರ್ಮಕ್ಕೆ ಅಧೀನವಲ್ಲದ ಸರಕಾರದಲ್ಲಿ ವಿಶ್ವಾಸವಿಡಬೇಕಲ್ಲದೆ ತನಗಿರುವ ಇನ್ನಾವುದೇ ಸಾಂಸ್ಕೃತಿಕ ಸಂಸ್ಥೆಯ ಸಂಬಂಧದಿಂದ ಬಿಜೆಪಿ ಬಗ್ಗೆ ನಿಷ್ಠೆ ತೆಳುವಾಗಕೂಡದು; ಅಂದರೆ ಮೊದಲನೆ

ನಿಷ್ಠೆ ಭಾ.ಜ.ಪ.ಕ್ಕೆ ಮಾತ್ರ" ಎಂಬ ಪಕ್ಷದ ಈ ಪ್ರಕಟಿತನೀತಿಯನ್ನು ಸಂಪೂರ್ಣ ನಂಬಿ, ಪಕ್ಷದೊಳಗೆ ಹೋದವರಲ್ಲಿ ನಾನೂ ಒಬ್ಬ. ಆದರೆ ಭಾ.ಜ.ಪ. ದಲ್ಲಿ ವಸ್ತು ಸ್ಥಿತಿಗೂ ಘೋಷಿತ ನೀತಿಗೂ ಸಂಬಂಧವಿಲ್ಲವೆಂದು ತಿಳಿದುಕೊಳ್ಳುವುದಕ್ಕೆ ನನಗೆ ಸ್ವಲ್ಪ ಸಮಯಬೇಕಾಯಿತು. ಶ್ರೀ ವಾಜಪೇಯಿಯವರು ಆರ್.ಎಸ್.ಎಸ್. ಜೊತೆ ಮುಖಾಮುಖಿ ನಡೆಸಕೂಡದೆಂದು ಅನೇಕ ಬಾರಿ ನನ್ನಲ್ಲಿ ವಿನಂತಿಸಿಕೊಂಡದ್ದು ನಿಜ. ಆದರೆ ಆರ್.ಎಸ್.ಎಸ್. ನವರು ನನ್ನ ವಿರುದ್ಧ ನಿರಂತರ ಅಪಪ್ರಚಾರದಲ್ಲಿ ತೊಡಗಿ, ಪಕ್ಷಘಾತುಕ ಚಟುವಟಿಕೆ ಎಸಗುತ್ತಿದ್ದುದ್ದನ್ನು ನಿಲ್ಲಿಸುವ ಸಾಮರ್ಥ್ಯ ಮಾತ್ರ ಶ್ರೀ ವಾಜಪೇಯಿಯವರಿಗಿರಲಿಲ್ಲ. ಆದ್ದರಿಂದ ಸ್ವತಹ ನಾನೇ ಅವರ ವಿರುದ್ಧ ತಿರುಗಿ ಪ್ರಚಾರ ಮಾಡಬೇಕಾಗಿ ಬಂತು. ಇಂತಹ ಪರಿಸ್ಥಿತಿಯಲ್ಲಿ ನನ್ನನ್ನು ಅಥವಾ ಆರ್.ಎಸ್.ಎಸ್. ಕೂಟವನ್ನು ಆಯ್ಕೆಮಾಡಿಕೊಳ್ಳಬೇಕಾದ ಅನಿವಾರ್ಯತೆ ಒದಗಿ ಬಂದಾಗ ವರಿಷ್ಠ ಮಂಡಳಿ ನನ್ನನ್ನು ಬಿಟ್ಟು ಆರ್.ಎಸ್.ಎಸ್. ಕೂಟವನ್ನು ಆಯ್ಕೆ ಮಾಡಿಕೊಂಡಿತು. ಹೀಗೆ ಮಾಡುವುದಕ್ಕಾಗಿ ನನ್ನ ವಿರುದ್ಧ ಅನೇಕ ಕ್ಷುಲ್ಲಕ, ಸುಳ್ಳು ಆರೋಪಗಳನ್ನು ಸೃಷ್ಠಿಸಲಾಯಿತು.

ಹೀಗೆ ನನ್ನ ವಿರುದ್ಧ ಸೃಷ್ಠಿಸಲಾದ ಕ್ಷುಲ್ಲಕ ಹಾಗೂ ಸುಳ್ಳು ಆರೋಪಗಳು ಮತ್ತು ಅವುಗಳಿಗೆ ನಾನು ಕೊಟ್ಟಿರುವ ಉತ್ತರಗಳ ಸಂಗ್ರಹವೇ ಕಿರು ಹೊತ್ತಿಗೆಯಾದ R.S.S. ಕಪಿಮುಷ್ಠಿಯಲ್ಲಿ ಭಾಜಪ. ಈ ಮೂಲಕ ದಾಖಲೆಗಳನ್ನು ನೇರವಾಗಿಡುವುದೇ ನನ್ನ ಮುಖ್ಯ ಉದ್ದೇಶ. ನನ್ನ ಮೇಲಿನ ಆರೋಪಗಳು ಮತ್ತು ಅವುಗಳಿಗೆ ನನ್ನ ಉತ್ತರಗಳನ್ನು ಒಟ್ಟಿಗೆ ಓದಿದರೆ ಮಸುಕು ಮಾಯವಾದೀತು."

ಎಂಬ ವಾಸ್ತವ ಅಭಿಪ್ರಾಯವನ್ನು ಮಂಡಿಸುತ್ತಾ, ಆ ಕೃತಿಯಲ್ಲಿ ತಮ್ಮ ವಿರುದ್ಧ ಮಾಡಲಾದ ಮಿಥ್ಯಾರೋಪಗಳಿಗೆ ಸಮಂಜಸವಾದ ಉತ್ತರ ನೀಡುವುದರ ಮೂಲಕ ವಾಸ್ತವ ಸ್ಥಿತಿ ಏನು ಎಂಬ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಆ ದೃಷ್ಟಿಯಿಂದ ಅದೊಂದು ಮೌಲಿಕ ಹೊತ್ತಗೆಯಾಗಿದೆ ಎಂಬುದು ಸತ್ಯ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಸಮಾಜದ ಅರ್ಬುದಗಳಾದ, ಶೋಷಣೆ, ಸ್ವಾರ್ಥ, ಮೋಸ, ಅನ್ಯಾಯ ಮುಂತಾದುವುಗಳ ಮೂಲಕ ಮತ್ತೊಬ್ಬರ ಏಳಿಗೆ ಸಹಿಸದ ಕೊಳಕುಮನಸುಗಳಿಗೆಲ್ಲಾ ತಮ್ಮ ಹರಿತವಾದ ಲೇಖನಿಯಿಂದ ಶಸ್ತ್ರ ಚಿಕಿತ್ಸೆ ಮಾಡುವ ವೈದ್ಯರಂತೆ ತೋರುತ್ತಾರೆ ಸುಬ್ಬಯ್ಯನವರು. ಈ ನಿಟ್ಟಿನಲ್ಲಿ ಬರಹಗಾರರಾಗಿಯೂ ಸುಬ್ಬಯ್ಯನವರು ಯಶಸ್ವಿಯಾಗಿದ್ದಾರೆ.

## ಪತ್ರಿಕಾ ಸಂಪಾದಕರಾಗಿ

ಸುಬ್ಬಯ್ಯನವರು ದಕ್ಷಿಣ ಕೊಡಗಿನ ವಿರಾಜಪೇಟೆಯಿಂದ ಜಿಲ್ಲಾ ಮಟ್ಟದ ದಿನಪತ್ರಿಕೆಯ ಸಂಪಾದಕರೂ ಪ್ರಕಾಶಕರೂ ಆಗಿ "ಹಿತವಾಣಿ" ಎಂಬ ಪತ್ರಿಕೆಯ ಸಾರಥ್ಯ ವಹಿಸಿದ್ದರು. 1973ರಲ್ಲಿ ಪ್ರಾರಂಭವಾಗಿ ಜಿಲ್ಲಾ ಮಟ್ಟದಲ್ಲಿ ಅತ್ಯುತ್ತಮ ಪ್ರಸಾರ ಹೊಂದಿದ್ದ ಈ ದೈನಿಕವನ್ನು ತುರ್ತುಪರಿಸ್ಥಿತಿಯ ಸಮಯದಲ್ಲಿ ಸರ್ಕಾರವು ಮುಟ್ಟುಗೋಲು ಹಾಕಿಕೊಂಡಿತು. ಈ ರೀತಿಯಲ್ಲಿ ಜನಹಿತಕ್ಕಾಗಿ ಸ್ಪಂದಿಸುತ್ತಿದ್ದ ಒಂದು ಸಣ್ಣ ಪತ್ರಿಕೆ ಅವಸಾನ ಕಂಡಿದ್ದು ತುರ್ತು ಪರಿಸ್ಥಿತಿಯಲ್ಲಿನ ಹಲವು ಕರಾಳ ದೃಷ್ಟಾಂತಗಳ ನಿದರ್ಶನಕ್ಕೆ ಸಣ್ಣ ಉದಾಹರಣೆಯಷ್ಟೇ.

## ವೃತ್ತಿ

ವಿದ್ಯಾರ್ಥಿ ದೆಸೆಯಿಂದಲೂ ಸಮಾಜಮುಖಿಯಾಗಿ ಸಾಮಾಜಿಕ ಅನ್ಯಾಯಗಳ ವಿರುದ್ಧ ದನಿ ಎತ್ತುತ್ತಿದ್ದ ಎ.ಕೆ.ಸುಬ್ಬಯ್ಯನವರು ಇಂಟರ್ ಮೀಡಿಯೇಟ್ ಮುಗಿಸಿದ ನಂತರ 1955–1957ರ ವರೆಗೂ ಮಾಧ್ಯಮಿಕ ಶಾಲೆಯಲ್ಲಿ ಉಪಾಧ್ಯಾಯ ವೃತ್ತಿಯನ್ನು ನಿರ್ವಹಿಸಿದರು. ನಂತರ ತಮ್ಮ ಕಾಲೇಜು ವಿದ್ಯಾಭ್ಯಾಸವನ್ನು ಮುಗಿಸಿ ವಿಜ್ಞಾನ ಪದವಿ ಮತ್ತು ಕಾನೂನು ಪದವಿಯನ್ನು ಪಡೆದ ನಂತರ 1962 ರಿಂದ ವಿರಾಜಪೇಟೆಯಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದರು. ಜೊತೆ ಜೊತೆಯಲ್ಲಿಯೇ ರಾಜಕೀಯ ಸಂಘಟನೆಗಳಲ್ಲಿ ಸಕ್ರಿಯ ಪಾತ್ರವಹಿಸಿ ಸತತವಾಗಿ ರಾಜಕೀಯ ಕ್ಷೇತ್ರದಲ್ಲಿ ಹಲವು ಗುರುತರ ಸ್ಥಾನಗಳನ್ನು ನಿರ್ವಹಿಸಿ ನಾಯಕರೆನಿಸಿದರೂ ಸಹ ಜೀವನ ನಿರ್ವಹಣೆಗೆ ವಕೀಲವೃತ್ತಿಯನ್ನೇ ಅವಲಂಬಿಸಿದರು.

1987 ರಿಂದ ಬೆಂಗಳೂರಿನ ಹೈಕೋರ್ಟ್‌ನಲ್ಲಿ ವಕೀಲವೃತ್ತಿಯನ್ನು ಮುಂದುವರೆಸುವ ಜೊತೆಯಲ್ಲಿಯೇ ಹುದಿಕೇರಿಯಲ್ಲಿ ತಮ್ಮ ಪಿತ್ರಾರ್ಜಿತ ಜಮೀನಿನ ಅಭಿವೃದ್ಧಿಯೆಡೆಗೆ ಗಮನ ಹರಿಸಿ ಕೃಷಿರಂಗದಲ್ಲಿ ತಮ್ಮ ಹಿರಿಯ ಪುತ್ರ ಕಾರ್ಯಪ್ಪ ಅವರೊಡನೆ ತೋಟಗಾರಿಕೆಯಲ್ಲಿ ತೊಡಗಿಸಿಕೊಂಡು ಯಶಸ್ವೀ ರೈತ ಎನಿಸಿದ್ದಾರೆ. ಇಂದಿಗೂ ತಮ್ಮ 84ರ ಹರಯದಲ್ಲೂ ಚಟುವಟಿಕೆಯಿಂದಿದ್ದು 24ರ ಯುವಕರನ್ನೂ ನಾಚಿಸುವಂತೆ ಉತ್ಸಾಹದ ಚಿಲುಮೆಯಾಗಿದ್ದಾರೆ.

# ತುರ್ತು ಪರಿಸ್ಥಿತಿಯಲ್ಲಿ ಜೈಲು

1975ರ ಜೂನ್ 26ರ ಮಧ್ಯ ರಾತ್ರಿ ದೇಶದಾದ್ಯಂತ ತುರ್ತುಸ್ಥಿತಿ ಘೋಷಣೆಗೊಂಡದ್ದು ನಮ್ಮ ರಾಷ್ಟ್ರದ ಸ್ವಾತಂತ್ರ್ಯ ಹರಣವಾದ ಎರಡನೇ ದೃಷ್ಟಾಂತ. ಜುಲೈ 28. 1975 ರಲ್ಲಿ ಶಾಸನ ಸಭೆಯನ್ನು ಕರೆಯಲಾಗಿತ್ತು. ಅದರ ಮುನ್ನಾದಿನ ಅಂದರೆ 27 ಜುಲೈ 1975 ರಂದು ಸುಬ್ಬಯ್ಯನವರು ಬಿಸಿನೆಸ್ ಅಡ್ವೈಸರಿ ಕಮಿಟಿಯಲ್ಲಿ ಭಾಗವಹಿಸಿ ಅಂದು ರಾತ್ರಿ ಸಭಾಪತಿಗಳ ಮನೆಯಲ್ಲಿ ಭೋಜನ ಮುಗಿಸಿ 28 ರಂದು ಸಭೆಯಲ್ಲಿ ಭಾಗವಹಿಸಲು ಸಭೆಗೆ ಪ್ರವೇಶಿಸಿದಾಗ ಅವರನ್ನು ಬಂಧಿಸಲಾಯಿತು.

ಈ ರೀತಿ ಮೀಸ ಕಾಯ್ದೆಯಡಿ ಬಂಧಿಸಲ್ಪಟ್ಟ ಮೊದಲ ರಾಜಕೀಯ ಖೈದಿಯಾಗಿದ್ದರು ಸುಬ್ಬಯ್ಯನವರು. ಸುಬ್ಬಯ್ಯನವರು ಬಂಧಿತರಾಗಿ ಮೊದಲ ಮೂರು ತಿಂಗಳು ಬಳ್ಳಾರಿ ಜೈಲಿನಲ್ಲಿದ್ದರು. ಇವರು ಜೈಲಿಗೆ ಹೋದ ಒಂದು ತಿಂಗಳ ನಂತರ ಬಳ್ಳಾರಿ ಜೈಲಿಗೆ ರಾಜಕೀಯ ಖೈದಿಯಾಗಿ ಜೆ.ಹೆಚ್. ಪಟೇಲರು ಬಂದರು. ಆ ಸಂದರ್ಭದಲ್ಲಿ ಅವರ ಆರೋಗ್ಯ ಸ್ಥಿತಿ ಸರಿ ಇಲ್ಲದಿದ್ದ ಕಾರಣ ಪಟೇಲರ ಪರವಾಗಿ ಹೈಕೋರ್ಟ್‌ಗೆ ರಿಟ್ ಪಿಟಿಷನ್ ಸಲ್ಲಿಸಿ ಅವರನ್ನು ಬೆಂಗಳೂರು ಜೈಲಿಗೆ ವರ್ಗಾಯಿಸುವಂತೆ ಮಾಡಿದರು. ಬಳ್ಳಾರಿ ಜೈಲಿನಲ್ಲಿ ಮೂರು ತಿಂಗಳು ಕಳೆದ ಮೇಲೆ ಸುಬ್ಬಯ್ಯನವರು ನಂತರ ಮೂರು ತಿಂಗಳ ಕಾಲ ಗುಲ್ಬರ್ಗ ಜೈಲಿನಲ್ಲಿಯೂ ನಂತರ ಒಂದು ವರ್ಷ ಬೆಂಗಳೂರು ಜೈಲಿನಲ್ಲಿಯೂ ಇದ್ದರು. ಒಟ್ಟು 19 ತಿಂಗಳ ಕಾಲ ಜಾರಿಯಲ್ಲಿದ್ದ ತುರ್ತು ಸ್ಥಿತಿಯಲ್ಲಿ 18 ತಿಂಗಳು ಜೈಲಿನಲ್ಲಿ ರಾಜಕೀಯ ಬಂಧಿಯಾಗಿದ್ದಾಗ, ಬೆಂಗಳೂರಿನ ಸೆಂಟ್ರಲ್ ಜೈಲಿನಲ್ಲಿ ಅವರೊಂದಿಗೆ ಸರ್ವಶ್ರೀಗಳಾದ ರಾಮಕೃಷ್ಣಹೆಗಡೆ, ಮಧು ದಂಡವತೆ, ಜೆ.ಹೆಚ್. ಪಟೇಲ್, ಎಲ್.ಕೆ. ಅಡ್ವಾನಿ, ಮಿಶ್ರಾ, ಹೆಚ್.ಡಿ. ದೇವೇಗೌಡ, ಎಸ್. ಮಲ್ಲಿಕಾರ್ಜುನಯ್ಯ, ಮಳ್ಳೂರು ಆನಂದರಾಯರು ಮುಂತಾದ ಘಟಾನುಘಟಿಗಳಿದ್ದರು. ಇವರೆಲ್ಲರನ್ನು "ಎ" ದರ್ಜೆಯ ಬ್ಯಾರಕ್ನಲ್ಲಿಡಲಾಗಿತ್ತು. ರಾಜಕೀಯ ಖೈದಿಗಳಾದ ಕಾರಣ ಟೇಬಲ್ ಟೆನ್ನಿಸ್, ಷಟಲ್‌ಕಾಕ್ ಕ್ರೀಡೆಗಳನ್ನಾಡಲು ಅವಕಾಶವಿದ್ದು, ಉತ್ತಮ ಆಹಾರ, ವೈದ್ಯಕೀಯ ಸೌಲಭ್ಯ, ಪುಸ್ತಕಗಳ ಸರಬರಾಜು ಹಾಗೂ ಸಂಬಂಧಿಕರ ಭೇಟಿಗೆ ಅವಕಾಶವಿತ್ತು. ಇದರ ಸದುಪಯೋಗ ಪಡೆದುಕೊಂಡ ಸುಬ್ಬಯ್ಯನವರು ಅನೇಕ ಉತ್ತಮ ಪುಸ್ತಕಗಳನ್ನು ಓದಿದರಲ್ಲದೇ ಯೋಗ ಕಲಿಕೆಗೆ ಅನುಕೂಲವಾಗುವಂತಹ ಅನೇಕ ಪುಸ್ತಕಗಳನ್ನು ಪರಾಮರ್ಶಿಸಿ ಯೋಗಾಸನಗಳನ್ನು ಕಲಿತರು. ಆದರೆ

ಇದೇ ಅವಧಿಯಲ್ಲಿ ಇತರೇ ಸಾಮಾನ್ಯ ಖೈದಿಗಳೊಂದಿಗೆ ಜೈಲಿನಲ್ಲಾಗುತ್ತಿದ್ದ ದೌರ್ಜನ್ಯಗಳು ಮಿತಿಮೀರಿದವುಗಳಾಗಿದ್ದು ರಾಕ್ಷಸೀತನದಿಂದ ಕೂಡಿದ್ದವು ಎಂದು ಸುಬ್ಬಯ್ಯನವರು ಬೇಸರಿಸುತ್ತಾರೆ.

## ಎಗ್ಗಿಲ್ಲದ ಹೋರಾಟದ ಹಾದಿಯಲ್ಲಿ

"ಕೆಲವರ ಜೀವನ ಗುಲಾಬಿ ಹೂವಿನಂತೆ ವಿಕಸಿಸುತ್ತದೆ. ತಮ್ಮ ಆದರ್ಶಗಳಿಗನುಗುಣವಾಗಿ, ಮತ್ತೆ ಕೆಲವರ ಜೀವನ ಎಡರು ತೊಡರುಗಳಿಂದ ಕೂಡಿದ್ದರೂ ತಮ್ಮ ಆದರ್ಶಗಳನ್ನು ವಾಸ್ತವ ಪರಿಸ್ಥಿತಿಗೆ ಅನುಗುಣವಾಗಿ ಬದಲಾಯಿಸಿಕೊಳ್ಳುವುದಿಲ್ಲ. ಎಷ್ಟೇ ನೋವಾದರೂ ಸರಿ, ತಮ್ಮ ವಾಸ್ತವ ಪರಿಸ್ಥಿತಿಗಳನ್ನೇ ತಮ್ಮ ಆದರ್ಶಗಳಿಗೆ ಅನುಗುಣವಾಗಿ ಮಾರ್ಪಡಿಸಿಕೊಳ್ಳುತ್ತಾರೆ". ಎಂಬ ಖ್ಯಾತ ಸಮಾಜವಾದಿ ಚಿಂತಕ ಡಾ॥ ರಾಮ ಮನೋಹರ ಲೋಹಿಯಾರ ಈ ಹೇಳಿಕೆಯು ಆದರ್ಶವಾದಿಗಳ ಮಟ್ಟಿಗೆ ಅಕ್ಷರಶಃ ನಿಜ. ಅಂತಹ ನಿಜವಾದ ಆದರ್ಶವಾದಿಗಳಲ್ಲಿ ಎ.ಕೆ. ಸುಬ್ಬಯ್ಯನವರು ಅಗ್ರಗಣ್ಯರು. ಆ ನಿಟ್ಟಿನಲ್ಲಿ ತಾವೇ ಕಟ್ಟಿ ಬೆಳೆಸಿದ, ರೂಪು ಕೊಟ್ಟು ಅಸ್ತಿತ್ವ ನೀಡಿದ ಸಂಘಗಳು ಮತ್ತು ಪಕ್ಷಗಳು ಅಡ್ಡಹಾದಿ ಹಿಡಿದು ತಮ್ಮ ಸಿದ್ಧಾಂತಗಳಿಗೆ ವಿರುದ್ಧವಾಗಿ ಬೆಳವಣಿಗೆ ಪಡೆಯತೊಡಗಿದಾಗ ಅವುಗಳಿಂದ ಸಿಡಿದು ಯಾವುದೇ ಮಮಕಾರ ಅಥವಾ ದಾಕ್ಷಿಣ್ಯಕ್ಕೊಳಪಡದೇ ಅವುಗಳಿಂದ ಹೊರ ನಡೆದರು. ತಮ್ಮ ಸಿದ್ಧಾಂತಗಳಿಗೆ ಹಾಗೂ ಆದರ್ಶಗಳಿಗೆ ತಕ್ಕ ನೆಲೆಯೆಂದು ತೋರಿದಾಗ ಇತರ ಸಂಘಟನೆಗಳೊಂದಿಗೆ ಕಾರ್ಯನಿರ್ವಹಿಸಲು ಯಾವುದೇ ಹಮ್ಮು-ಬಿಮ್ಮು ತೋರದೆ ತೊಡಗಿಕೊಂಡರು. ಅಂತೆಯೇ ವಾಸ್ತವದ ಅರಿವುಂಟಾದಾಗ ಅಷ್ಟೇ ನಿರ್ಭಾವುಕರಾಗಿ ಅವುಗಳಿಂದ ಹೊರ ನಡೆದವರು ಸುಬ್ಬಯ್ಯನವರೊಬ್ಬರೇ. ಈ ರೀತಿ ಪ್ರತಿ ಸಲ ತಮ್ಮ ಆದರ್ಶಗಳಿಗೆ ನಿಯತ್ತಾಗಿದ್ದುಕೊಂಡು, ತಾವಿದ್ದ ಪಕ್ಷದಲ್ಲಿನ ಸ್ಥಾನಮಾನ ಮನ್ನಣೆಗಳನ್ನು ತ್ಯಜಿಸಿ ಮತ್ತೊಂದು ಪಕ್ಷ ಸೇರಿದಾಗಲ್ಲೆಲ್ಲಾ ನಷ್ಟವುಂಟಾದದ್ದು ಸುಬ್ಬಯ್ಯನವರಿಗೆ. ಆ ರೀತಿ ಪಕ್ಷವನ್ನು ಬದಲಾಯಿಸುತ್ತಿದ್ದದ್ದು ಸಹ ತಮ್ಮ ಆದರ್ಶಗಳಿಗೆ ಕಟ್ಟು ಬಿದ್ದು, ಸಾಮಾಜಿಕ ಒಳಿತನ್ನುಂಟು ಮಾಡುವ ಸಲುವಾಗಿಯೇ ಹೊರತು ರಾಜಕೀಯ ಲಾಭದುದ್ದೇಶದಿಂದಲ್ಲ ಎಂಬುದು ಸರ್ವವಿಧಿತ.

# ವ್ಯಕ್ತಿತ್ವ

ಈ ದೇಶದ ಅನೇಕ 'ರಾಜಕಾರಣಿ' ಗಳಂತೆ ರಾಜಕೀಯವನ್ನೆಂದೂ ವ್ಯಾವಹಾರಿಕವಾಗಿ ಪರಿಗಣಿಸದೆ ಸಮಾಜಸೇವೆಯೆಂದು ಪರಿಗಣಿಸಿ ನಿಸ್ವಾರ್ಥ ಸೇವೆ ಸಲ್ಲಿಸಿದ ಕೆಲವೇ ನಾಯಕರಲ್ಲಿ ಎ.ಕೆ. ಸುಬ್ಬಯ್ಯನವರು ಅಗ್ರಗಣ್ಯರು.

ತಮ್ಮ ವೈಚಾರಿಕ ಪ್ರಜ್ಞೆಯನ್ನು ಪ್ರಯೋಗ ಶೀಲತೆಯಲ್ಲಿ ವಿಸ್ತರಿಸಿಕೊಂಡು ಬದುಕಿಗೆ ಮೌಲ್ಯ ತಂದುಕೊಂಡಿರುವ ಸುಬ್ಬಯ್ಯನವರದು ಅತ್ಯಂತ ಶಿಸ್ತು ಬದ್ಧ ನಡವಳಿಕೆ. ದಿನಚರಿಯ ಸಮಯ ಪರಿಪಾಲನೆಯಲ್ಲಿ ಸುಬ್ಬಯ್ಯನವರಿಗೆ ಸುಬ್ಬಯ್ಯನವರೇ ಸಾಟಿ.

ಸುಬ್ಬಯ್ಯನವರು ಮೂಲತಃ ಮಾನವತಾವಾದಿ. ಅಕ್ಷರಶಃ ಪ್ರಖಂಡ ವಿಚಾರವಾದಿ. ಅವರಲ್ಲಿನ ಈ ವೈಚಾರಿಕ ಮನೋಧರ್ಮವು ಅವರಿವರನ್ನು ನೋಡಿ ಬಂದಿದ್ದಲ್ಲ. ಕೊಡಗಿನ ಹುದಿಕೇರಿಯಂತಹ ಕುಗ್ರಾಮದಲ್ಲಿ ಹುಟ್ಟಿ, ಎಳವೆಯಲ್ಲೇ ಅನೇಕ ಕಷ್ಟ ಕೋಟಲೆಗಳನ್ನೆದುರಿಸಿಯೂ ಸ್ವಂತಿಕೆಯನ್ನು ರೂಢಿಸಿಕೊಂಡು ಸದೃಢವಾದ ಮೇರುವ್ಯಕ್ತಿತ್ವವನ್ನು ತಮ್ಮದಾಗಿಸಿಕೊಂಡಿರುವ ಕೆಚ್ಚು ಅವರಿಗೆ ಜನ್ಮಜಾತವಾಗಿ ಬಂದಿದೆ. ಇಂದಿಗೂ ಹದಿಹರೆಯದವರನ್ನೂ ನಾಚಿಸುವಂತಹ ಪಾದರಸದಂತಹ ನಡೆ–ನುಡಿ ಹಾಗೂ ವ್ಯಕ್ತಿತ್ವದಿಂದ ಸಾಮಾನ್ಯ ಜನರ ನೋವು–ನಲಿವುಗಳಿಗೆ ಸ್ಪಂದಿಸುತ್ತಾ ಜನರ ಮನಸ್ಸಿನಲ್ಲಿ ಅಜರಾಮರರಾಗಿರುವ, ಸಜ್ಜನ ಸುಬ್ಬಯ್ಯನವರದು ಸಾರ್ಥಕ ಬದುಕು.

## ಪರಿಚಯ

| | | |
|---|---|---|
| ಹೆಸರು | : | ಎ.ಕೆ. ಸುಬ್ಬಯ್ಯ (ಅಜ್ಜೀ ಕುಟ್ಟೀರ ಕಾರ್ಯಪ್ಪ ಸುಬ್ಬಯ್ಯ) |
| ಜನನ | : | 09, ಆಗಸ್ಟ್, 1934 |
| ಹುಟ್ಟೂರು | : | ಕೋಣಗೇರಿ ಗ್ರಾಮ, ಹುದಿಕೇರಿ ಅಂಚೆ,<br>ವಿರಾಜಪೇಟೆ ತಾಲ್ಲೂಕು,<br>ದಕ್ಷಿಣ ಕೊಡಗು. |
| ತಂದೆ | : | ಶ್ರೀ ಅಜ್ಜೀಕುಟ್ಟೀರ ಕಾರ್ಯಪ್ಪ |
| ತಾಯಿ | : | ಶ್ರೀಮತಿ ಚಿನ್ನಮ್ಮ |
| ವಿದ್ಯಾಭ್ಯಾಸ | : | ಪ್ರಾಥಮಿಕ ಶಿಕ್ಷಣ– ಹರಿಹರ<br>ಮಾಧ್ಯಮಿಕ ಮತ್ತು ಪ್ರೌಢಶಾಲಾ ಅಧ್ಯಯನ– ಹುದಿಕೇರಿ<br>ಇಂಟರ್ ಮೀಡಿಯೇಟ್ – ಮಡಿಕೇರಿ<br>ಬಿ.ಎಸ್ಸಿ ಮತ್ತು ಎಲ್.ಎಲ್.ಬಿ. – ಮೈಸೂರು |
| ವಿವಾಹ | : | 13, ಮೇ, 1964 |
| ಪತ್ನಿ | : | ಶ್ರೀಮತಿ ಪೊನ್ನಮ್ಮ (ಡಾಟಿ ಸುಬ್ಬಯ್ಯ) |

| ಕ್ರ. ಸಂ | ಪುತ್ರರು | ಸೊಸೆಯಂದಿರು | ಮೊಮ್ಮಕ್ಕಳು | ವೃತ್ತಿ | ವಾಸ |
|---|---|---|---|---|---|
| 1. | ಕಾರ್ಯಪ್ಪ | ಚಂದಲಾ | ಚರಿತ | ತೋಟಗಾರಿಕೆ | ಹುದಿಕೇರಿ |
| 2. | ಸೋಮಯ್ಯ | ನಯನ | – | ಇಂಜಿನಿಯರ್ | ಕೆನಡಾ |
| 3. | ಪೂವಪ್ಪ | ಸಂಗೀತ | ಸಮಿತ್ | ಇಂಜಿನಿಯರ್ | ಕೆನಡಾ |
| 4. | ಬಾಬಿ ಪೊನ್ನಣ್ಣ | ಕಾಂಚನ್ | ಹನಾ, ತಾಷಾ | ಅಡ್ವೋಕೇಟ್ | ಬೆಂಗಳೂರು |
| 5. | ಮುತ್ತಣ್ಣ | ಎಲಿಜಬೆತ್ | – | ಇಂಜಿನಿಯರ್ | ಕೆನಡಾ |

ಶ್ರೀ ಎ.ಕೆ. ಸುಬ್ಬಯ್ಯನವರ ಐವರು ಪುತ್ರರಲ್ಲಿ ಕಿರಿಯರಾದ ಬಾಬಿ ಪೊನ್ನಣ್ಣ ಮತ್ತು ಮುತ್ತಣ್ಣ ಅವಳಿ ಮಕ್ಕಳು.

ಪ್ರಸ್ತುತ ಸನ್ಮಾನ್ಯ ಎ.ಎಸ್. ಪೊನ್ನಣ್ಣನವರು (ಬಾಬಿ ಪೊನ್ನಣ್ಣ) ಕರ್ನಾಟಕ ಹೈಕೋರ್ಟ್‌ನ ಪ್ರಥಮ ದರ್ಜೆ ಅಡಿಷನಲ್ ಅಡ್ವೋಕೇಟ್ ಜನರಲ್–1 ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ.

## ಸಾರ್ವಜನಿಕರ ಹಣದ ದುರುಪಯೋಗ ಸಲ್ಲದು

**(ಮೂರನೇ ಕಂತಿನ ಉಪ ಮುಂಗಡ ಪತ್ರ 1968–69ಕ್ಕೆ ಪ್ರತಿಕ್ರಿಯೆ)**

**27ನೇ ಮಾರ್ಚ್ 1969**

**ಎ.ಕೆ. ಸುಬ್ಬಯ್ಯ :** ಈ ದಿವಸ ಸರ್ಕಾರದವರು ಸುಮಾರು 57 ಕೋಟಿ ರೂಪಾಯಿಗಳ ಒಂದು ಉಪ ಮುಂಗಡ ಪತ್ರವನ್ನು ಚರ್ಚೆಗೋಸ್ಕರ ನಮ್ಮ ಮುಂದೆ ಇಟ್ಟಿದ್ದಾರೆ. ಈ ಉಪ ಮುಂಗಡ ಪತ್ರವನ್ನು ಈ ಸದನದ ಮುಂದೆ ತಂದಿರತಕ್ಕಂಥ ವೈಖರಿಯನ್ನು ನೋಡಿದರೆ ಸರ್ಕಾರದವರು ಜನತೆಯ ಮುಂದೆ ನಮ್ಮ ದೇಶದ ಆರ್ಥಿಕ ಪರಿಸ್ಥಿತಿಯ ಸ್ಪಷ್ಟ ಚಿತ್ರವನ್ನು ಒಮ್ಮೆಗೆ ಇಡಲಿಕ್ಕೆ ತಯಾರು ಇಲ್ಲ, ಜನತೆಯನ್ನು ಯಾವಾಗಲೂ ಕತ್ತಲಿನಲ್ಲಿ ಇಟ್ಟು ಮೋಸಪಡಿಸುವ ದುರುದ್ದೇಶ ಈ ಸರ್ಕಾರಕ್ಕೆ ಇದೆ ಎನ್ನುವುದು ಇದರಿಂದ ನಮಗೆ ಗೊತ್ತಾಗುತ್ತದೆ. ಇದರಲ್ಲಿ ಮಂಡಿಸಿರತಕ್ಕಂಥ ಅನೇಕ ಬೇಡಿಕೆಗಳನ್ನು ನಾವು ನೋಡಿದರೆ ಕೆಲವು ಬೇಡಿಕೆಗಳನ್ನು ಮೂಲ ಮುಂಗಡ ಪತ್ರವನ್ನು ಮಂಡಿಸಿದಾಗಲೇ ಅಳವಡಿಸಬಹುದಾಗಿತ್ತು. ಉದಾಹರಣೆಗೆ ಹೇಳುವುದಾದರೆ ರಿಪೇರ್ ಚಾರ್ಜಸ್, ತುಟ್ಟಿಭತ್ಯದ ಖರ್ಚು, ಕಾರು ಕೊಂಡುಕೊಳ್ಳುವುದು ಇವನ್ನೆಲ್ಲಾ ಮೂಲ ಮುಂಗಡ ಪತ್ರದಲ್ಲಿಯೇ ಸೇರಿಸಿ ಜನತೆಯ ಮುಂದೆ ಆರ್ಥಿಕ ಪರಿಸ್ಥಿತಿಯ ಸ್ಪಷ್ಟವಾದ ಚಿತ್ರವನ್ನು ಇಡಲಿಕ್ಕೆ ಸಾಧ್ಯವಿತ್ತು. ಆದರೆ ಈಗ ಮೂರನೆಯ ಕಂತಿನ ಮುಂಗಡಪತ್ರವನ್ನು ಸಭೆಯ ಮುಂದೆ ತಂದಿದ್ದಾರೆ. ಈ ರೀತಿ ತಂದಿರುವುದು ಈ ಮಂತ್ರಿಮಂಡಲದ ದಿವಾಳಿಕೋರತನವನ್ನು ಪ್ರತಿಬಿಂಬಿಸುತ್ತದೆ ಎಂದು ಹೇಳಬೇಕಾಗುತ್ತದೆ. ಈ ಸಂದರ್ಭದಲ್ಲಿ ಈ ಪ್ರಕಾರ ಜನತೆಯನ್ನು ಮೋಸಪಡಿಸತಕ್ಕದ್ದು ಸರಿಯಲ್ಲ. ಇನ್ನು ಮುಂದೆಯಾದರೂ ಕೂಡ ನಮ್ಮ ಸರ್ಕಾರದವರು ಇಂತಹ ತತ್ವ ಮಾಡಬಾರದು. ಸಾಧ್ಯವಾದಷ್ಟು ಎಲ್ಲಾ ಖರ್ಚನ್ನು ಮೂಲ ಮುಂಗಡಪತ್ರದಲ್ಲಿಯೇ ಅಳವಡಿಸಬೇಕೆಂದು ಸೂಚನೆ ಕೊಡುವುದಕ್ಕೆ ಬಯಸುತ್ತೇನೆ. ಈ ಒಂದು ಉಪಮುಂಗಡ ಪತ್ರದ ಚಿತ್ರವನ್ನು ನೋಡಿದರೆ ದೇಶದ ಆರ್ಥಿಕ ಪರಿಸ್ಥಿತಿಯ ಮೇಲೆ ಗಂಭೀರವಾದ ಪರಿಣಾಮವನ್ನು ಉಂಟುಮಾಡಿದೆ ಎಂದು ಅರ್ಥವಾಗುತ್ತದೆ. ಇಂಟ್ರಡಕ್ಟರಿ ಮೆಮೊರ್ಯಾಂಡಮ್‌ನಲ್ಲಿ:

"The present Supplementary Estimates will not worsen the financial position already indicated to any appreciable extent."

ಎಂದು ಹೇಳಿದ್ದಾರೆ. That means it is going to worsen the financial condition of the State. ಈ ರೀತಿ ಸರ್ಕಾರದವರು ದೇಶದಲ್ಲಿರತಕ್ಕಂಥ ಆರ್ಥಿಕ ಪರಿಸ್ಥಿತಿಯನ್ನು ಸರಿಯಾಗಿ ಜನರ ಮುಂದೆ ಇಡದೆ ಜನತೆಯನ್ನು ಮೋಸ ಮಾಡತಕ್ಕ ಪರಿಸ್ಥಿತಿ ಉಂಟಾಗಿದೆಯೆಂದು ಇದರಿಂದ ಗೊತ್ತಾಗುತ್ತಿದೆ. ಇದು ನಿಜವಾಗಿಯೂ ಕೂಡ ಒಳ್ಳೆಯದಲ್ಲವೆಂದು ಈ ಸಂದರ್ಭದಲ್ಲಿ ಹೇಳಲಿಕ್ಕೆ ಬಯಸುತ್ತೇನೆ.

ಬೇಡಿಕೆ 17ರಲ್ಲಿ ಸೆಕೆಂಡರಿ ಮತ್ತು ಪ್ರಾಥಮಿಕ ಶಾಲೆಗಳಿಗೆ ಗ್ರಾಂಟ್ ಕೊಡತಕ್ಕ ವಿಚಾರವನ್ನು ಇಟ್ಟಿದ್ದಾರೆ. ಅನೇಕ ಖಾಸಗಿ ಸಂಸ್ಥೆಗಳಿಗೆ ಸಹಾಯಧನವನ್ನು ಸರ್ಕಾರ ಕೊಡುತ್ತಿದೆ. "ಪ್ರಾಥಮಿಕ ವಿದ್ಯಾಭ್ಯಾಸ ಮತ್ತು ಸೆಕೆಂಡರಿ ವಿದ್ಯಾಭ್ಯಾಸ ಉಚಿತವಾಗಿ ಕೊಡಲ್ಪಡುತ್ತದೆ" ಎನ್ನುವ ಕಲ್ಪನೆಯನ್ನು ಕೂಡ ಜನತೆಗೆ ನಾವು ಕೊಟ್ಟಿದ್ದೇವೆ. ಆದರೆ ಈವೊತ್ತಿನ ದಿವಸ ಅನೇಕ ಖಾಸಗಿ ಸಂಸ್ಥೆಗಳು ಸರ್ಕಾರದಿಂದ ಸಹಾಯಧನವನ್ನು ಪಡೆದು ಜನಸಾಮಾನ್ಯರ ಸುಲಿಗೆಯನ್ನು ವಿದ್ಯಾರ್ಥಿಗಳಿಂದ ಪ್ರತ್ಯೇಕ ಶುಲ್ಕ ವಸೂಲು ಮಾಡುವುದರ ಮೂಲಕ ಮಾಡುತ್ತಿವೆ. ಈ ರೀತಿಯಾಗಿ ಮಾಡುತ್ತಿರುವುದರಿಂದ ಯಥೇಷ್ಟವಾದ ಲಾಭವನ್ನು ವಿದ್ಯಾಕ್ಷೇತ್ರದಲ್ಲಿ ಅನೇಕ ಖಾಸಗಿ ಸಂಸ್ಥೆಗಳು ಮಾಡುತ್ತಿವೆ ಎಂದು ಅತ್ಯಂತ ದುಃಖದಿಂದ ಈ ಸಂದರ್ಭದಲ್ಲಿ ಹೇಳಬೇಕಾಗಿ ಬಂದಿದೆ. ಅನೇಕ ಖಾಸಗಿ ಸಂಸ್ಥೆಗಳು ವಿದ್ಯಾಭ್ಯಾಸವನ್ನು ಮಕ್ಕಳಿಗೆ ಕಲಿಸತಕ್ಕ ಸರಸ್ವತಿ ಕೇಂದ್ರಗಳಾಗಿ ಉಳಿದಿಲ್ಲ. ಅವು ಮೋಸಗಾರ ಸಂಸ್ಥೆಗಳು ಮತ್ತು ಹಗಲುದರೋಡೆ ಮಾಡತಕ್ಕ ಸಂಸ್ಥೆಗಳಾಗಿ ಉಳಿದಿವೆ. ಮಾನ್ಯ ಉಪಸಚಿವರು....

**Sri K.V. Shankare Gowda:** It would be better if the Hon'ble member avoids strong expressions.

ಎಲ್ಲರೂ ದರೋಡೆಕಾರರಲ್ಲ. ಇಂಥ ಪದಗಳನ್ನು ಉಪಯೋಗ ಮಾಡುವುದು ಸರಿಯಲ್ಲ ಎಂದು ನನ್ನ ಅಭಿಪ್ರಾಯ.

**ಶ್ರೀ ಎ.ಕೆ. ಸುಬ್ಬಯ್ಯ:** ನಿರ್ದಿಷ್ಟವಾದ ಉದಾಹರಣೆಯನ್ನು ನಾನು ಕೊಡಲಿಕ್ಕೆ ತಯಾರಿದ್ದೇನೆ. ಮಾನ್ಯ ಉಪವಿದ್ಯಾಮಂತ್ರಿಗಳು ಮೊನ್ನೆ ಮೈಸೂರಿನಲ್ಲಿ ಮಾತನಾಡುತ್ತ ಖಾಸಗಿ ಸಂಸ್ಥೆಗಳು ಸಾರ್ವಜನಿಕರಿಂದ ಚಂದಾ ಎತ್ತತಕ್ಕ ವಿಚಾರದಲ್ಲಿ "ಖಾಸಗಿ ಸಂಸ್ಥೆಗಳವರು ಮಾಡುವುದು ತಪ್ಪಲ್ಲ. ಅವರ ಲೆಕ್ಕಪತ್ರಗಳು ಆಡಿಟ್ ಆಗುತ್ತವೆ " ಎಂದು ಹೇಳಿದ್ದಾರೆ. "ಹಾಗಾದರೆ ಒಂದು ರೀತಿಯಿಂದ ಖಾಸಗಿ ಸಂಸ್ಥೆಗಳು ಸಾರ್ವಜನಿಕರನ್ನು ದರೋಡೆ ಮಾಡುವುದಕ್ಕೆ ಉತ್ತೇಜನ ಕೊಟ್ಟಿದ್ದೀರಾ? ಅವರಿಗೆ

ಲೈಸೆನ್ಸ್ ಕೊಟ್ಟಿದ್ದೀರಾ" ಎಂದು ಈ ಸಂದರ್ಭದಲ್ಲಿ ನಾನು ಕೇಳಲಿಕ್ಕೆ ಬಯಸುತ್ತೇನೆ. ಈ ರೀತಿಯಿಂದ ಖಾಸಗಿ ಸಂಸ್ಥೆಗಳು ಸರ್ಕಾರದವರು ಕೊಡುತ್ತಿರುವ ಹಣವನ್ನು ದುರುಪಯೋಗ ಮಾಡುವುದಲ್ಲದೆ, ಅವನ್ನು ವ್ಯಾಪಾರ ಸಂಸ್ಥೆಗಳನ್ನಾಗಿ ಮಾಡಿ ಹಣ ಸಂಪಾದನೆ ಮಾಡುತ್ತಿರುವ ವಿಚಾರಗಳನ್ನು ಅನೇಕ ಸಾರಿ ಸರ್ಕಾರದ ಗಮನಕ್ಕೆ ಅನೇಕ ಮೂಲೆಗಳಿಂದ ತಂದಿದ್ದಾಗ್ಯೂ ಸರ್ಕಾರದವರು ಯಾವ ಕ್ರಮವನ್ನೂ ತೆಗೆದುಕೊಳ್ಳುತ್ತಿಲ್ಲ. ಸರ್ಕಾರದವರು ಈ ರೀತಿ ಕಣ್ಣು ಮುಚ್ಚಿರುವುದನ್ನು ನೋಡಿ ಜನತೆ ವಿಧಿ ಇಲ್ಲದೆ ಚಂದಾ ಕೊಡುತ್ತಿದೆ. ಧೃತರಾಷ್ಟ್ರ ಹುಟ್ಟು ಕುರುಡನಾಗಿದ್ದುದರಿಂದ ಆತನ ಹೆಂಡತಿ ಗಾಂಧಾರಿ ತನಗೂ ಕಣ್ಣು ಕಾಣಿಸುವುದು ಬೇಡ ಎಂದು ಕಣ್ಣಿಗೆ ಬಟ್ಟೆಯನ್ನು ಕಟ್ಟಿಕೊಂಡಿದ್ದಳು. ಅದೇ ರೀತಿ ನಮ್ಮ ಸರ್ಕಾರ ಹುಟ್ಟು ಕುರುಡನಂತೆ ಕಣ್ಣು ಕಾಣದೆ ಇರುವಂಥ ಪರಿಸ್ಥಿತಿಯಲ್ಲಿ ಮತ್ತು ಸಾಮಾನ್ಯ ಜನತೆ ಕಣ್ಣಿದ್ದರೂ ಕೂಡ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಏನೆಲ್ಲಾ ಅನ್ಯಾಯಗಳು ನಡೆಯುತ್ತಿದ್ದರೂ ಅದನ್ನು ಸಹಿಸಿಕೊಂಡು ಬರತಕ್ಕಂಥ ಸ್ಥಿತಿ ನಮ್ಮ ರಾಜ್ಯದಲ್ಲಿದೆ.

ಮೈಸೂರಿನಲ್ಲಿ ರಾಯಲ್ ಇಂಗ್ಲಿಷ್ ಸ್ಕೂಲ್ಸ್ ಎನ್ನುವ ಒಂದು ಸಂಸ್ಥೆ ಅನೇಕ ಶಾಲೆಗಳನ್ನು ನಡೆಸುತ್ತಿದೆ. ಈ ಸಂಸ್ಥೆಗೆ ಸರ್ಕಾರ ಯಥೇಷ್ಟವಾದ ಹಣವನ್ನು ಸಹಾಯಧನವಾಗಿ ಕೊಡುತ್ತಿದೆ. ಈ ಖಾಸಗಿ ಸಂಸ್ಥೆ ಮೈಸೂರಿನಲ್ಲಿ ಅನೇಕ ಶಾಲೆಗಳನ್ನು ನಡೆಸುತ್ತಿದೆ. ಅದರಲ್ಲಿ ಒಂದು ರಾಯಲ್ ಇಂಗ್ಲಿಷ್ ಸ್ಕೂಲ್, ಎಕ್ಸಿಬಿಷನ್ ಕಟ್ಟಡದಲ್ಲಿದೆ. ಅದು ಸರ್ಕಾರಿ ಕಟ್ಟಡ. ಸರ್ಕಾರಿ ಕಟ್ಟಡದಲ್ಲಿ ಈ ಶಾಲೆಯನ್ನು ನಡೆಸಲಿಕ್ಕೆ ಸರ್ಕಾರದವರು ಅವಕಾಶ ಕೊಟ್ಟಿದ್ದಾರೆ. ನಜ಼ರಬಾದ್‌ನಲ್ಲಿ ಒಂದು, ಸರಸ್ವತಿಪುರಂನಲ್ಲಿ ಒಂದು, ಕಬೀರ್ ರಸ್ತೆಯಲ್ಲಿ ಒಂದು, ಜಯನಗರದಲ್ಲಿ ಒಂದು, ಹೀಗೆ ಈ ಸಂಸ್ಥೆ ನಡೆಸುತ್ತಿರತಕ್ಕ ಅನೇಕ ಶಾಲೆಗಳಲ್ಲಿ ಸುಮಾರು 2500 ವಿದ್ಯಾರ್ಥಿಗಳು ಓದುತ್ತಿದ್ದಾರೆ. ಅನೇಕ ಶಾಲೆಗಳು ಇನ್ನೂ ಕೂಡ ಸರ್ಕಾರದ ಮನ್ನಣೆಯನ್ನು ಪಡೆದಿಲ್ಲ. ಕೆಲವು ಮಾತ್ರ ಸರ್ಕಾರದ ಮನ್ನಣೆ ಪಡೆದಿವೆ. ಸರ್ಕಾರದ ಮನ್ನಣೆಯನ್ನು ಪಡೆಯದ ಶಾಲೆಗಳು ಕೂಡ ನಡೆಯುತ್ತಿವೆ. ಅವು ಸರ್ಕಾರದ ಮನ್ನಣೆ ಇರುವ ಹಾಗೆಯೇ ನಡೆಯುತ್ತಿವೆ. ಅದೂ ಕೂಡ ಸರ್ಕಾರದ ಗಮನಕ್ಕೆ ಬಂದಿದೆ. ಸರ್ಕಾರದವರು ಈ ಬಗ್ಗೆ ಕಣ್ಣು ಮುಚ್ಚಿ ಕುಳಿತುಕೊಂಡಿರುವುದು ತುಂಬಾ ವಿಷಾದದ ಸಂಗತಿ.

**ಶ್ರೀ ಕೆ.ವಿ. ಶಂಕರಗೌಡ:** ಇದರಲ್ಲಿ ಸಂಸ್ಥೆಗಳು ಬರುವುದಿಲ್ಲ. ಸರ್ಕಾರಿ ಪ್ರಾಥಮಿಕ ಶಾಲೆಗಳು ಮತ್ತು ಸ್ಥಳೀಯ ಸಂಸ್ಥೆಗಳಿಗೆ ಸೇರಿದ ಶಾಲೆಗಳು ಬರುತ್ತವೆ.

ಖಾಸಗಿ ಶಾಲೆಗಳಿಗೆ ಇದು ಅನ್ವಯವಾಗುವುದಿಲ್ಲವಾದ್ದರಿಂದ ಖಾಸಗಿ ಶಾಲೆಗಳ ವಿಷಯ ಇಲ್ಲಿ ಪ್ರಸ್ತಾಪ ಮಾಡುವುದಕ್ಕೆ ಬರುವುದಿಲ್ಲ.

**ಶ್ರೀ ಎ.ಕೆ. ಸುಬ್ಬಯ್ಯ:** ನಾನ್ ಗವರ್ನ್‌ಮೆಂಟ್ ಸ್ಕೂಲ್ಸ್ ಎಂದು ಇರುವುದರಿಂದ ನಾನು ಖಾಸಗಿ ಸಂಸ್ಥೆಗಳ ವಿಷಯವನ್ನು ಹೇಳುತ್ತಿದ್ದೇನೆ. ಸ್ಥಳೀಯ ಸಂಸ್ಥೆಗಳ ಶಾಲೆಗಳ ವಿಷಯ ಬೇರೆ ಇದೆ.

ರಾಯಲ್ ಇಂಗ್ಲಿಷ್ ಸ್ಕೂಲ್ಸ್ ಎಂಬ ಸಂಸ್ಥೆಯಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ಐದೈದು ರೂಪಾಯಿ, ಎರಡೆರಡು ರೂಪಾಯಿ ಹೀಗೆ ಶುಲ್ಕವನ್ನು ವಸೂಲು ಮಾಡುತ್ತಿದ್ದಾರೆ. ಇದು ಲೆಕ್ಕ ಪತ್ರಕ್ಕೆ ಸಿಕ್ಕುವುದಿಲ್ಲ. ಅಂಥಾ ಪರಿಸ್ಥಿತಿಯಲ್ಲಿ ನಡೆಸುತ್ತಿದ್ದಾರೆ. ನನ್ನ ಹತ್ತಿರ ಇದಕ್ಕೆ ಸಂಬಂಧಪಟ್ಟ ಕೆಲವು ರಸೀತಿಗಳಿವೆ. ಒಂದು ರಾಯಲ್ ಇಂಗ್ಲಿಷ್ ಸ್ಕೂಲ್ ಎಂದು ಇರುವುದು. ಒಂದು ರಾಯಲ್ ಎಜುಕೇಷನ್ ಸೊಸೈಟಿ ಎಂದು ಇರುವ ರಸೀತಿ. ಇದಕ್ಕೆ ನಂಬರ್ ಇಲ್ಲ. ತಾರೀಖು ಇಲ್ಲ. ಇದು ಲೆಕ್ಕಕ್ಕೆ ಸಿಕ್ಕತಕ್ಕ ರಸೀತಿಯಲ್ಲ. ಒಬ್ಬನೇ ವ್ಯಕ್ತಿಯಿಂದ, ಪುಟ್ಟಲಿಂಗಯ್ಯ ಎನ್ನುವವರಿಂದ ಕೊಡಲ್ಪಟ್ಟಿದೆ. ಮೂರನೆಯದಕ್ಕೆ ಸೀರಿಯಲ್ ನಂಬರ್ ಇದೆ. ರಾಯಲ್ ಇಂಗ್ಲೀಷ್ ನರ್ಸರಿ ಸ್ಕೂಲ್, ಕಬೀರ್ ರೋಡ್ ಮೈಸೂರು ಸಿಟಿ ಎಂದು ಅದರಲ್ಲಿದೆ. ಹೀಗೆ ಅನೇಕ ತರಹ ರಸೀತಿಗಳನ್ನು ಮಾಡಿಕೊಂಡಿದ್ದಾರೆ. ಅವುಗಳಿಗೆ ಕೌಂಟರ್ ಫೈಲ್ ಕೂಡ ಇರುವುದಿಲ್ಲ. ಇದಕ್ಕೆ ಡೂಪ್ಲಿಕೇಟ್ ನಂಬರ್ ಕೂಡ ಇಲ್ಲ. ಪ್ರತಿಯೊಬ್ಬ ವಿದ್ಯಾರ್ಥಿಯೂ ಕೂಡ ಕಡ್ಡಾಯವಾಗಿ ಪ್ರತಿ ತಿಂಗಳೂ ಈ ರೀತಿ ಶುಲ್ಕವನ್ನು ಕೊಡಲೇಬೇಕಾಗಿದೆ.

**ಶ್ರೀ ಕೆ.ವಿ. ಶಂಕರಗೌಡ:** ಇಂಗ್ಲಿಷ್ ಮಾಧ್ಯಮವಿರತಕ್ಕ ನರ್ಸರಿ ಶಾಲೆಗಳಿಗೆ ಸರ್ಕಾರದಿಂದ ಗ್ರಾಂಟ್ ಕೊಡುತ್ತಿಲ್ಲ.

**ಶ್ರೀ ಎ.ಕೆ. ಸುಬ್ಬಯ್ಯ:** ರಾಯಲ್ ಇಂಗ್ಲಿಷ್ ಸ್ಕೂಲ್ಸ್ ಎಂಬ ಸಂಸ್ಥೆಗೆ ಏನೂ ಗ್ರಾಂಟ್ ಕೊಡುತ್ತಿಲ್ಲವೇ ಎಂದು ಖಚಿತವಾಗಿ ಕೇಳುತ್ತಿದ್ದೇನೆ.

**ಶ್ರೀ ಕೆ.ವಿ. ಶಂಕರಗೌಡ:** ರಾಯಲ್ ಪ್ರೈಮರಿ ಇಂಗ್ಲಿಷ್ ಮಾಧ್ಯಮ ಇರುವ ಶಾಲೆಗಳಿಗೆ ಯಾವ ಗ್ರಾಂಟನ್ನು ಕೊಡುತ್ತಿಲ್ಲ.

**ಶ್ರೀ ಎ.ಕೆ. ಸುಬ್ಬಯ್ಯ:** ರಾಯಲ್ ಎಜುಕೇಷನ್ ಸೊಸೈಟಿ, ಮೈಸೂರು, ಇದರ ವಿಚಾರ ನಾನು ಮಾತನಾಡುತ್ತಿದ್ದೇನೆ. ಅದಕ್ಕೆ ಸರ್ಕಾರದವರು ಗ್ರಾಂಟ್

ಕೊಡುತ್ತ ಇದ್ದಾರೆಂದು ನನಗೆ ಗೊತ್ತಿದೆ. ಪ್ರತಿ ತಿಂಗಳೂ 20ನೇ ತಾರೀಖಿನ ಒಳಗಾಗಿ ಪ್ರತಿಯೊಬ್ಬ ವಿದ್ಯಾರ್ಥಿಯೂ ಕಡ್ಡಾಯಾಗಿ ಶುಲ್ಕವನ್ನು ಕೊಡಲೇಬೇಕು. ಇಲ್ಲದೆ ಇದ್ದರೆ ಶಾಲೆಗೆ ಕೂಡ ಸೇರಿಸುವುದಿಲ್ಲ ಎನ್ನುವುದನ್ನು ಅವರು ತಮ್ಮ ನಿಯಮಗಳಲ್ಲಿ ಹೇಳಿದ್ದಾರೆ. "The donation and subscription will be collected from the first day of admission to the class. The donation payable to the Institution should be remitted on or about the 20th of every month failing which the name will be removed from the Roll. There is nothing to show that the parents made voluntary contribution for P.W. but admits that they have received donation through boys, directly without contacting their parents. There are cases of collection where there are no consent letters by the parents for collection of donation from students at all. There are cases where some parents have not given their consent letters but have personally approached and offered to accept the donations. There are cases where some parents have neither sent letters nor personally contacted the management to pay donation but have only sent through the children. It follows therefore the management has accepted donation directly from children without even ascertaining from their parents whether they have sent the amount or whether the boys had pilfered the same from the parents pockets just to please the institutional management and to earn their smiles, and to avoid their frowns.

It is clear therefore the management or P.W. was too willing to accept moneys from children even without confirming from the parents whether it is donation. Donation therefore appears to have lost its meaning and the so called donation appears to be a forced levy from the children. This circumvents the notification of the Government which is anxious to provide free education upto higher secondary and this

attempt to collect really levy from student under the nomenclature of donation. It is a common knowledge of parents that such levies are being collected by many institutions and that is suffered in the interest of the small pupils to avoid frowns against them which may even lend to stiffle their mental growth. In the instance case, I am not prepared to believe P.W. Secretary at all, on the other hand the accused should be congratulated on his not having fallen a mute prey to the dishonest demand for the levy under the noble term "donation". Therefore the ingredients of section 94 of the Police Act 1963 are not established. I find the accused not guilty of the offence and acquit him acting under Section 245 CI. (1) C.P. of the offences under Section 94 of the Mysore Police Act, 1963." ಆ ಸೊಸೈಟಿಯವರು ಕಡ್ಡಾಯವಾಗಿ ಶುಲ್ಕ ವಸೂಲು ಮಾಡುತ್ತಿದ್ದಾರೆ. ಅದನ್ನು ಮೈಸೂರಿನ ಕೋರ್ಟಿನವರು 1967ರಲ್ಲಿ ತಿಳಿಸಿದ್ದಾರೆ. ಸರ್ಕಾರ ವಿದ್ಯಾ ಸಂಸ್ಥೆಗಳಿಗೆ ಸಹಾಯ ಮಾಡುವಾಗ ಫ್ರೀ ಎಜುಕೇಷನ್ ಎಂದು ಹೇಳುವಾಗ ಅನರ್ಥವಾಗಬಾರದು. ಈ ಸಂಸ್ಥೆ ಸ್ಥಾಪಿಸುವುದಕ್ಕೆ ಮುಂಚೆ ಅದರ ಆರ್ಥಿಕ ಸ್ಥಿತಿ ಬಹಳ ಹೀನವಾಗಿತ್ತು. ಇಂದು ಅದರ ಮ್ಯಾನೇಜ್‌ಮೆಂಟಿನವರು, ಕಾರ್ಯದರ್ಶಿಗಳು ಮತ್ತು ಉಪಕಾರ್ಯದರ್ಶಿಗಳು ಲಕ್ಷಾಂತರ ರೂಪಾಯಿಗಳ ಆಸ್ತಿ ಪಾಸ್ತಿ ಮಾಡಿಕೊಂಡಿದ್ದಾರೆ. ಕಾರುಗಳನ್ನು ಕೊಂಡಿದ್ದಾರೆ. ಆಡಂಬರದ ಜೀವನ ನಡೆಸುತ್ತಿದ್ದಾರೆ. ಇಂದು ಒಂದು ತಿಂಗಳಿಗೆ 12,500 ರೂಪಾಯಿಗಳನ್ನು ವಿದ್ಯಾರ್ಥಿಗಳಿಂದ ಶುಲ್ಕದ ರೂಪದಲ್ಲಿ ವಸೂಲು ಮಾಡುತ್ತಿದ್ದಾರೆ. 67ರಲ್ಲಿ ಈ ಸಂಸ್ಥೆಯ ಶಾಲೆಗೆ ಒಬ್ಬ ವಿದ್ಯಾರ್ಥಿಯನ್ನು ಸೇರಿಸಲು ನಂಜುಂಡಕುಮಾರ್ ಎನ್ನುವವರು ಹೋದಾಗ ಡೊನೇಷನ್ ಕೇಳಿದ್ದರು. ಅದನ್ನು ಕೊಡಲು ಸಾಧ್ಯವಿಲ್ಲವೆಂದು ಅವರು ಸಾಧಿಸಿದರು. ಅವರನ್ನು ಆಮೇಲೆ ಶಾಲೆಯ ಆವರಣದೊಳಕ್ಕೆ ಪ್ರವೇಶ ಮಾಡಲು ಬಿಡಲಿಲ್ಲ. ನಂತರ ಕೇಸ್ ಹಾಕಿದಾಗ ನ್ಯಾಯಾಧೀಶರು ಚೆನ್ನಾಗಿ ವಿವರಿಸಿ ಜಡ್ಜ್‌ಮೆಂಟ್ ಕೊಟ್ಟಿದ್ದಾರೆ. ಡೊನೇಷನ್ ತೆಗೆದುಕೊಳ್ಳಬಾರದೆಂದು ತಿಳಿಸಿದ್ದಾರೆ. ಈ ಬಗ್ಗೆ ಅನೇಕ ಪತ್ರಿಕೆಗಳಲ್ಲೂ ಉಲ್ಲೇಖ ಬಂದಿದೆ. ಡೆಕನ್ ಹೆರಾಲ್ಡ್‌ನಲ್ಲಿ ಬಂದಿದೆ. ಪ್ರಜಾವಾಣಿಯಲ್ಲಿ ಸಂಪಾದಕೀಯ ಬರೆದಿದ್ದಾರೆ. ಇದೊಂದು ಡೊನೇಷನ್ ಹೆಸರಿನಲ್ಲಿ ಆಗಿರುವ ಸುಲಿಗೆ ಎಂದು ತಿಳಿಸಿದ್ದಾರೆ. ಮೈಸೂರಿನಲ್ಲಿರುವ ಸಾಧ್ವಿ, ಸ್ವತಂತ್ರದರ್ಶಿ ಮುಂತಾದ ಪತ್ರಿಕೆಗಳವರೂ

ಈ ಸಂಬಂಧದಲ್ಲಿ ಟೀಕೆ ಮಾಡಿದ್ದಾರೆ. ಆದರೂ ಕೂಡ ಸರ್ಕಾರದವರು ಯಾವುದೇ ರೀತಿಯ ಕ್ರಮ ತೆಗೆದುಕೊಂಡಿಲ್ಲ. ವಿದ್ಯಾಕ್ಷೇತ್ರದಲ್ಲಿ ಹಸ್ತಕ್ಷೇಪ ಎನ್ನುವ ಶಿರೋನಾಮೆಯ ಕೆಳಗೆ ಕಾಂಗ್ರೆಸ್ ಪುಡಾರಿಗಳು ಇಲಾಖೆಯ ಅಂಗೀಕಾರ ಪಡೆಯದೆ ಶಾಲೆಗಳನ್ನು ತೆರೆದು ಮಕ್ಕಳನ್ನು ಸೇರಿಸಿಕೊಳ್ಳುತ್ತಿದ್ದಾರೆ, ಎಂದು ಸ್ವತಂತ್ರದರ್ಶಿಯಲ್ಲಿ ಬರೆದಿದ್ದಾರೆ. ಸರಕಾರದಿಂದ ಅಂಗೀಕಾರ ಪಡೆಯದ ಶಾಲೆಗೆ ಮಕ್ಕಳನ್ನು ಸೇರಿಸಬಾರದೆಂದು ಡಿ.ಡಿ.ಪಿ.ಐ. ಅವರು ಆದೇಶ ನೀಡಿದ್ದರೂ ಈ ಶಾಲೆ ಹೇಗೆ ಸ್ಥಾಪನೆಯಾಯಿತು. ಯಾವರೀತಿ ಜನರಿಂದ ಸುಲಿಗೆ ಮಾಡುತ್ತಿದೆ ಎಂದು ಸ್ಪಷ್ಟವಾಗಿ ಪತ್ರಿಕೆಯಲ್ಲಿ ಅಗ್ರಲೇಖನ ಬರೆದಿದ್ದಾರೆ. ಅನೇಕ ಸಂದರ್ಭಗಳಲ್ಲಿ ಸರಕಾರದ ಗಮನಕ್ಕೆ ಕೂಡ ಈ ವಿಚಾರ ತರಲಾಗಿದೆ. ಇಷ್ಟಾದರೂ ಕೂಡ ಇವತ್ತು ಸಹ ಈ ಶಾಲೆಯನ್ನು ರದ್ದು ಮಾಡುವ ವಿಚಾರವನ್ನು ಸರಕಾರ ಗಮನಿಸದಿರುವುದು ಬಹಳ ದುಃಖವನ್ನುಂಟು ಮಾಡಿದೆ. ಇಂಥ ಎಷ್ಟು ಶಾಲೆಗಳಿವೆಯೆಂಬುದನ್ನು ನೋಡಬೇಕು. ಖಾಸಗಿ ಸಂಸ್ಥೆಗಳಿಗೆ ಸಹಾಯಧನ ಕೊಡುವಾಗ ಅವು ಸರಿಯಾಗಿ ನ್ಯಾಯ ರೀತಿಯಲ್ಲಿ ಕೆಲಸ ಮಾಡುತ್ತಿವೆಯೇ. ಎಂದು ನೋಡಿಕೊಳ್ಳಬೇಕು. ಹಾಗೆ ಮಾಡದಿದ್ದರೆ ವಿದ್ಯಾಭ್ಯಾಸದಲ್ಲಿ ಕ್ವಾಲಿಟಿ ಸುಧಾರಣೆಯಾಗದೆ ನೀತಿನಿಯಮಗಳಿಗೆ ಲೋಪವುಂಟಾಗುವುದು. ಆದುದರಿಂದ ಈ ಶಾಲೆಗಳನ್ನು ನಡೆಸುವ ಧೋರಣೆಯ ಬಗ್ಗೆ ತನಿಖೆಯಾಗಬೇಕು. ನಾನು ಹೇಳಿದ ಶಾಲೆಯಲ್ಲಿ ಅಧ್ಯಾಪಕರಿಗೆ ಸರಿಯಾಗಿ ಸಂಬಳ ಕೊಡುವುದಿಲ್ಲ. ಸ್ವತಂತ್ರದರ್ಶಿ ಎಂಬ ಪತ್ರಿಕೆಯಲ್ಲಿ ಬರೆದಿರುವಂತೆ ಹೆಣ್ಣು ಮಕ್ಕಳನ್ನು ಮಾತ್ರ ಈ ಶಾಲೆಗೆ ಸೇರಿಸಿಕೊಳ್ಳುತ್ತಿದ್ದಾರೆ. ಆದುದರಿಂದ ಸೌಂದರ್ಯ ಮುಖ್ಯ, ಯೋಗ್ಯತೆ ಮುಖ್ಯವಲ್ಲ ಎಂದು ಪತ್ರಿಕೆ ತಿಳಿಸಿದೆ. ವಿದ್ಯಾರ್ಥಿಗಳನ್ನು ಪಿಕ್‌ನಿಕ್ಕಿಗೆ ಕರೆದುಕೊಂಡು ಹೋಗುತ್ತಾರೆ. ಹೆಣ್ಣು ಮಕ್ಕಳ ಶೀಲಕ್ಕೆ ಭಂಗತರುವ ಕೆಲಸ ಕೂಡ ನಡೆಯುತ್ತಿದೆ ಎಂಬ ದೂರಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿ ಕ್ರಮ ತೆಗೆದುಕೊಳ್ಳಬೇಕು. ಸಾರ್ವಜನಿಕರ ಹಣವನ್ನು ಹೀಗೆ ದುರುಪಯೋಗ ಮಾಡಿದರೆ ಮತ್ತು ಮಕ್ಕಳ ತಂದೆ ತಾಯಿಗಳನ್ನು ಸುಲಿಗೆ ಮಾಡಿದರೆ ವಿದ್ಯಾಭ್ಯಾಸ ಉತ್ತಮ ಮಟ್ಟದಲ್ಲಿ ನಡೆಯುವುದಿಲ್ಲ. ಹೀಗಾದರೆ ರಾಮಕೃಷ್ಣ ಪರಮಹಂಸರು, ಗಾಂಧೀಜಿಯವರು ಮುಂತಾದ ಮಹಾತ್ಮರಾಗುವಂತೆ ವಿದ್ಯಾರ್ಥಿಗಳನ್ನು ತಯಾರು ಮಾಡುವುದಕ್ಕೆ ಸಾಧ್ಯವಿಲ್ಲ. ಆದುದರಿಂದ ಸಹಾಯಧನ ಕೊಡುವಾಗ ಬಹಳ ಎಚ್ಚರಿಕೆಯಿಂದ ಜಾಗರೂಕತೆಯಿಂದ ಕೊಡಬೇಕು. ವಿದ್ಯಾ ಸಂಸ್ಥೆಗಳು ಸರಿಯಾಗಿ ಕೆಲಸ ಮಾಡುವಂತೆ ನೋಡಿಕೊಳ್ಳಬೇಕು.

# 1969-70ರ ಸಾಲಿನ ಹೆಚ್ಚುವರಿ ಬೇಡಿಕೆಗೆ ವಿರೋಧ

**28ನೇ ಮಾರ್ಚ್ 1970**

ಮಾನ್ಯ ಆರ್ಥಿಕ ಸಚಿವರು ನಮ್ಮ ಮುಂದಿಟ್ಟಿರುವ ಹೆಚ್ಚುವರಿ ಬೇಡಿಕೆಯ ವಿಚಾರದಲ್ಲಿ ನಾಲ್ಕು ಮಾತುಗಳನ್ನು ಹೇಳಲು ಇಷ್ಟಪಡುತ್ತೇನೆ. ಬೇಡಿಕೆ ನಂಬರು 2 ಲ್ಯಾಂಡ್ ರೆವೆನ್ಯೂ ಎಂದಿದೆ. ಇದರಲ್ಲಿ ಸರ್ವೆ ಸೆಟ್ಲ್‌ಮೆಂಟ್, ಲ್ಯಾಂಡ್ ರಿಕಾರ್ಡ್ ಆಪರೇಷನ್ಸ್, ಲ್ಯಾಂಡ್ ರಿಕಾರ್ಡ್ಸ್ ಇವಕ್ಕೆ ಸಂಬಂಧಪಟ್ಟ ವಿಚಾರವಿದೆ. 1964ರ ಮೈಸೂರು ಲ್ಯಾಂಡ್ ರೆವೆನ್ಯೂ ಆ್ಯಕ್ಟ್‌ಗೆ ತಿದ್ದುಪಡಿ ಮಾಡಿ 69 ರಿಂದ ತಿದ್ದುಪಡಿ ಮಾಡಿರುವುದರ ಆಧಾರದ ಮೇಲೆ ಪುನಃ ಲ್ಯಾಂಡ್ ರೆವೆನ್ಯೂ ರಿವಿಷನ್ಸ್ ಸೆಟ್ಲ್‌ಮೆಂಟ್ ಮಾಡಬೇಕಾಯ್ತು ಎಂದು ತಿಳಿಸಿದ್ದಾರೆ. ಅದಕ್ಕಾಗಿ ಹೆಚ್ಚುವರಿ ಬೇಡಿಕೆ ಇಡಬೇಕಾಗಿದೆ ಎಂಬ ವಿವರಣೆ ಇದೆ. ಈ ಸಂದರ್ಭದಲ್ಲಿ ನಾವು ನಮ್ಮ ಲ್ಯಾಂಡ್ ರೆವೆನ್ಯೂ ಆಕ್ಟ್ 64ಕ್ಕೆ ತಿದ್ದುಪಡಿ ತಂದ ಹಿನ್ನೆಲೆಯಲ್ಲಿ ಸ್ವಲ್ಪ ವಿಶ್ಲೇಷಣೆ ಮಾಡಬೇಕಾಗಿದೆ. ನಮ್ಮ ರಾಜ್ಯದ ಕೃಷಿಕರು, ರೈತರು, ಭೂ ಹಿಡುವಳಿದಾರರು ಭೂಕಂದಾಯ ಹೆಚ್ಚುವರಿಯಾಗಿರುವುದನ್ನು ವಿರೋಧಿಸಿ ಉಚ್ಛ ನ್ಯಾಯಾಲಯದಲ್ಲಿ ರಿಟ್ ಹಾಕಿದರು ಹಾಗೂ ಪ್ರತಿಭಟಿಸಿದರು. ಇದೇ ಸಂದರ್ಭದಲ್ಲಿ ಆಂಧ್ರ ಹೈಕೋರ್ಟ್ ಕೂಡ ಸಪ್ಲಿಮೆಂಟ್ ಆದಮೇಲೆ ಹೆಚ್ಚುವರಿ ಮಾಡಲು ನೋಟೀಸು ಕೊಡಬೇಕು. ಅದಕ್ಕೆ ಆಕ್ಷೇಪಣೆಗಳೇನಾದರೂ ಇದ್ದರೆ ತರಿಸಿಕೊಂಡು ತೀರ್ಮಾನಮಾಡಬೇಕು ಎಂದು ಹೆಚ್ಚುವರಿಯನ್ನು ರದ್ದು ಮಾಡಿತು. ಸುಪ್ರೀಂ ಕೋರ್ಟ್ ಕೂಡ ಆ ತೀರ್ಮಾನವನ್ನು ಒಪ್ಪಿದೆ. ನಮ್ಮ ನ್ಯಾಯಾಲಯ ಕೂಡ ನೋಟೀಸು ಕೊಟ್ಟು ಇತ್ಯರ್ಥ ಮಾಡಬೇಕು. ಅದುವರೆಗೆ ಹೊಸ ಕಂದಾಯ ವಸೂಲು ಮಾಡಬಾರದು ಎಂದು ತಿಳಿಸಿತು. ಅದರ ಮೇಲೆ ಕೆಲವು ತಿದ್ದುಪಡಿ ಬಂದು ಈ ಸಭೆಯಲ್ಲಿ ಚರ್ಚೆಯಾಯಿತು. ಈ ಸಭೆಯಲ್ಲಿ ರೆವೆನ್ಯೂ ಮಂತ್ರಿಗಳು ಒಂದು ಭರವಸೆ ಕೊಟ್ಟರು. "ಅನ್ಯಾಯವಾಗಿರುವುದನ್ನು ನೋಡಿ ಭೂಕಂದಾಯ ಎರಡರಷ್ಟಕ್ಕಿಂತ ಹೆಚ್ಚು ಆಗಿರುವ ಕಡೆ ರೀಸೆಟ್ಲ್‌ಮೆಂಟ್ ಮಾಡುತ್ತೇವೆ. ಪ್ರತಿಯೊಬ್ಬರಿಗೂ ನೋಟೀಸು ಕೊಟ್ಟು ಆಕ್ಷೇಪಣೆಗಳನ್ನು ನೋಡಿ ತೀರ್ಮಾನ ಮಾಡುತ್ತೇವೆ. ನಂತರ ಹೊಸ ದರದಲ್ಲಿ ಕಂದಾಯ ವಸೂಲು ಮಾಡುತ್ತೇವೆ. ಅಲ್ಲಿಯವರೆಗೆ 1964ರ ಪೂರ್ವದಲ್ಲಿದ್ದ ದರದಂತೆ ವಸೂಲುಮಾಡುತ್ತೇವೆ ಎಂದು ಹೇಳಿದ್ದರು. ಆದರೆ ಈಗ ಬಂದಿರುವ ಬೇಡಿಕೆ ಪ್ರಕಾರ ಹಲವಾರು ಕಡೆ, ಚಿಕ್ಕಮಗಳೂರು, ಹಾಸನ, ಬಿಜಾಪುರ ಮತ್ತು ಶಿವಮೊಗ್ಗ ಮುಂತಾದ ಕಡೆ ರಿವಿಷನ್ ಸೆಟ್ಲ್‌ಮೆಂಟ್, ರೀ ಸೆಟ್ಲಮೆಂಟ್‌ಗೆ ಆಜ್ಞೆ

ಮಾಡಬೇಕಾಗಿದೆ. ಬೇರೆ ಕಡೆ ರೀ ಸೆಟ್ಲ್‌ಮೆಂಟ್ ಆಜ್ಞೆ ಮಾಡದೆ ವ್ಯಕ್ತಿಶಃ ನೋಟೀಸು ಕೊಟ್ಟಿದ್ದಾರೆ. ಕೊಡಗು ಜಿಲ್ಲೆಯಲ್ಲಿ ಪ್ರತಿಯೊಬ್ಬ ಭೂಮಾಲೀಕರಿಗೆ ಮತ್ತು ರೈತರಿಗೆ ವ್ಯಕ್ತಿಶಃ ನೋಟೀಸು ಕೊಡುತ್ತಿದ್ದಾರೆ. ಆಕ್ಷೇಪಣೆಗಳು ಬರುತ್ತಿವೆ. ಜಮೀನು ಕಂದಾಯ ಹೆಚ್ಚಾಗಿದೆ. ಕ್ರಮವಾಗಿಲ್ಲ, ಕಾನೂನುಬಾಹಿರ ಆಗಿದೆ ಎಂದು ತಿಳಿಸಿದ್ದಾರೆ. ಆದರೆ ಹಾಗೆ ಮಾಡುವಾಗ ಹೊಸ ದರದಲ್ಲಿ ಕಂದಾಯದ ವಸೂಲಾತಿ ನಡೆದಿದೆ, ಕೊಡಗಿನಲ್ಲಿ ಹೀಗಾಗಿದೆ. ಬೇರೆ ಕಡೆಯೂ ಹೀಗೆಯೇ ನಡೆದಿರಬೇಕು. ಆಕ್ಷೇಪಣೆಗಳನ್ನು ಕಳಿಸಬಹುದು, ಆದರೆ ಸರಕಾರದ ಕಡೆಯಿಂದ ಆದೇಶ ಬಂದಿದೆ. ಅದರ ಪ್ರಕಾರ ಹೊಸ ದರದಂತೆ ವಸೂಲು ಮಾಡಲೂ ನೋಟೀಸು ಜಾರಿ ಮಾಡುತ್ತೇವೆ, ಎಂದು ಜಿಲ್ಲಾಧಿಕಾರಿಗಳು ಹೇಳುತ್ತಾರೆ. ಆಮೇಲೆ ಆಕ್ಷೇಪಣೆಗಳನ್ನು ವಿಲೇ ಮಾಡಿ ತೀರ್ಮಾನ ಮಾಡುತ್ತೇವೆ. ಹೆಚ್ಚು ಕಡಿಮೆಯಾದರೆ ಅಡ್‌ಜಸ್ಟ್‌ಮೆಂಟ್ ಮಾಡುತ್ತೇವೆ ಎಂದು ಡಿಸಿ ಹೇಳುತ್ತಾರೆ. ನಿಜವಾಗಿಯೂ ಹೀಗೆ ಮಾಡುವುದು ಸರಿಯಲ್ಲ, 64ರ ಲ್ಯಾಂಡ್ ರೆವೆನ್ಯೂ 120 (ಎ) ಎಂಬ ಹೊಸ ಸೆಕ್ಷನ್ ಸೇರಿಸಿದ್ದಾರೆ. ಅದರ ಪ್ರಕಾರ ನೋಟೀಸು ಕೊಡಬೇಕು ಆಕ್ಷೇಪಣೆಗಳನ್ನು ಕರೆಯಬೇಕು. ಅವನ್ನು ಡಿಸಿ ಪರಿಶೀಲಿಸಿ ತೀರ್ಮಾನ ಮಾಡಬೇಕು. ಅದರ ಮೇಲೆ ಡಿವಿಜನಲ್ ಕಮಿಷನರಿಗೆ ಅಪೀಲು ಮಾಡಬಹುದು. ಆದರೆ ಆಕ್ಷೇಪಣೆಗಳು ಸಾವಿರಗಟ್ಟಲೆ ಬಂದು ಡಿಸಿ ಆಫೀಸಿನಲ್ಲಿ ಕೊಳೆಯುತ್ತಿವೆಯೇ ಹೊರತು ಅವುಗಳನ್ನು ಪರಿಶೀಲಿಸಿ ತೀರ್ಮಾನ ಮಾಡಲು ಸಾಧ್ಯವಾಗಿಲ್ಲ. ಈಗ ಬಲಾತ್ಕಾರವಾಗಿ ಹೊಸ ಕಂದಾಯ ವಸೂಲು ಮಾಡುತ್ತಿದ್ದಾರೆ. ಈ ರೀತಿ ಸರಕಾರ ಮೋಸಮಾಡಬಾರದು. ಜನರಿಗೆ ಕೊಟ್ಟಿರುವ ಆಶ್ವಾಸನೆಗಳಿಗನುಗುಣವಾಗಿ ನಡೆದುಕೊಳ್ಳಬೇಕು ಎಂದು ಈ ಸಂದರ್ಭದಲ್ಲಿ ರೆವೆನ್ಯೂ ಸಚಿವರಿಗೆ ಸಲಹೆ ಮಾಡುತ್ತೇನೆ. ಹೊಸ ಕಂದಾಯವನ್ನು ವಸೂಲು ಮಾಡುವುದನ್ನು ನಿಲ್ಲಿಸಬೇಕು. ಅದಕ್ಕೆ ಬದಲಾಗಿ ಪ್ರತಿಯೊಬ್ಬ ರೈತರಿಂದಲೂ ಬರುವ ಆಕ್ಷೇಪಣೆಗಳನ್ನು ಪರಿಶೀಲನೆ ಮಾಡಿ ತೀರ್ಮಾನ ಮಾಡಬೇಕು, ಅಪೀಲು ಮಾಡಿದರೆ ಅದು ತೀರ್ಮಾನವಾದ ನಂತರ ಹೊಸ ಕಂದಾಯ ವಸೂಲು ಮಾಡಬೇಕು ಮತ್ತು ಅನುಷ್ಠಾನಕ್ಕೆ ತರಬೇಕು.

ಡಿಮಾಂಡ್ 5-ಸೇಲ್ಸ್ ಟ್ಯಾಕ್ಸ್‌ನಲ್ಲಿ ಭೂತಲಿಂಗಂ ವರದಿ ಬಂದ ಮೇಲೆ ಟ್ಯಾಕ್ಸ್‌ಬಿಲ್ ಲಿಮಿಟೆಡ್ ಏನಿದೆ ಅದನ್ನು 25 ಸಾವಿರ ರೂಪಾಯಿಗಳಿಗೆ ಏರಿಸಿದ್ದಾರೆ. ಹೋಟೆಲುಗಳಲ್ಲಿ ಹೋದರೆ ನಮಗೆ ಆಹಾರ ಸಾಮಗ್ರಿಗಳಾದ ಕಾಫಿ, ಟೀ, ಊಟ, ಅನ್ನ ಇತ್ಯಾದಿಗಳಿಗೆ ಸೇಲ್ಸ್ ಟ್ಯಾಕ್ಸ್ ವಿಧಿಸುತ್ತಿದ್ದಾರೆ. ಸಾಮಾನ್ಯ ಜನತೆ, ಹೊಟ್ಟೆಗೆ ಹಿಟ್ಟಿಲ್ಲದವರು ಹೋಟೆಲುಗಳಿಗೆ ಹೋಗಿ ಏನಾದರೂ ತೆಗೆದುಕೊಂಡರೆ ಅವರಿಂದ ಟ್ಯಾಕ್ಸ್ ಸಂಗ್ರಹಿಸಿ ಹೋಟೆಲು ಮಾಲೀಕರು ಸರ್ಕಾರಕ್ಕೆ ಕೊಡುತ್ತಾರೆ. ಅನೇಕ ಕಡೆ

ಜೀವನಕ್ಕೆ ಅತ್ಯಾವಶ್ಯಕವಾದ ಸಾಮಗ್ರಿಗಳ ಮೇಲೆ ಸೇಲ್ಸ್ ಟ್ಯಾಕ್ಸ್ ಇಲ್ಲ. ಅನ್ನ ಜೀವನಕ್ಕೆ ಅತ್ಯಾವಶ್ಯಕವಾಗಿ ಬೇಕಾದ ಸಾಮಗ್ರಿ ಆದ್ದರಿಂದ ಆಹಾರ ಸಾಮಗ್ರಿಗಳ ಮೇಲೆ ಎರಡು ರೂಪಾಯಿಗಳಿಗಿಂತ ಮೇಲ್ಪಟ್ಟು ಕೆಲವು ಕಡೆ ಒಂದೂವರೆ ರೂಪಾಯಿಗೆ ಮೇಲ್ಪಟ್ಟು ಒಂದೇ ಸಂದರ್ಭದಲ್ಲಿ ಕೊಂಡುಕೊಳ್ಳತಕ್ಕ ಸಾಮಗ್ರಿಗೆ ಮಾತ್ರ ಸೇಲ್ಸ್ ಟ್ಯಾಕ್ಸ್ ವಿಧಿಸಲಾಗುತ್ತಿದೆ. ಬಾಕಿ ಸಂದರ್ಭಗಳಲ್ಲಿ ಅಲ್ಪಸ್ವಲ್ಪ ಆಹಾರ ಸಾಮಗ್ರಿಗಳನ್ನು ಕೊಂಡುಕೊಳ್ಳುವ ಸಂದರ್ಭದಲ್ಲಿ ಒಂದು ರೂಪಾಯಿಗಿಂತ ಕಡಿಮೆ ಕೊಂಡುಕೊಳ್ಳುವ ಸಂದರ್ಭದಲ್ಲಿ ಸೇಲ್ಸ್ ಟ್ಯಾಕ್ಸ್ ವಿಧಿಸುತ್ತಿಲ್ಲ. ಆ ಒಂದು ನೀತಿಯನ್ನು ನಮ್ಮ ಸರ್ಕಾರವೂ ಅನುಸರಿಸುವುದು ಒಳ್ಳೆಯದು. ಆಹಾರ ಸಾಮಗ್ರಿ ಜೀವನಕ್ಕೆ ಅತ್ಯಾವಶ್ಯಕವಾಗಿ ಬೇಕಾದ ವಸ್ತು. ಅದಕ್ಕೆ ಸ್ಸೇಲ್ ಟ್ಯಾಕ್ಸ್ ಹಾಕದೆ ವಿನಾಯಿತಿ ಕೊಡಬೇಕಾಗಿದೆ.

25 ಸಾವಿರ ರೂಪಾಯಿ ಟರ್ನ್ ಓವರ್ ಟ್ಯಾಕ್ಸ್‌ಬಿಲ್ ಲಿಮಿಟೆಡ್ ಮಾಡಿದ್ದಾರೆ. ಇದು ಏನೇನೂ ಸಾಲದು. ಇನ್ನು 50 ಸಾವಿರ ರೂಪಾಯಿಗಳಾದರೂ ಏರಿಸಿದರೆ, ಒಳ್ಳೆಯದು ಹೆಚ್ಚು ತೊಂದರೆ ಇಲ್ಲದೆ, ಹೆಚ್ಚು ಖರ್ಚು ಇಲ್ಲದೆ ವಸೂಲು ಮಾಡುವುದಕ್ಕೆ ಅನುಕೂಲವಾಗುತ್ತದೆ. ಸರ್ಕಾರದವರೂ ಸೂಚನೆ ಮಾಡಿರುವಂತೆ 25 ಸಾವಿರ ರೂಪಾಯಿ ಟರ್ನ್‌ಓವರ್ ಎಂದು ಮಾಡಿದರೆ ವಸೂಲು ಮಾಡುವುದಕ್ಕೂ ಹೆಚ್ಚು ತೊಂದರೆಯಾಗುವುದಲ್ಲದೆ, ವಸೂಲು ಮಾಡುವ ಖರ್ಚು ಜಾಸ್ತಿ ಆಗುತ್ತದೆ. 25 ಸಾವಿರ ರೂಪಾಯಿ ಟರ್ನ್‌ಓವರ್ ಸೀಲಿಂಗ್ ಬಹಳ ಕಡಿಮೆ. ಈಗಿನ ಹಣದುಬ್ಬರದ ಪರಿಸ್ಥಿತಿಯಲ್ಲಿ ಒಂದು ಸಣ್ಣ ಅಂಗಡಿಯಲ್ಲಿ ಸಹಿತ 75 ಸಾವಿರ 80 ಸಾವಿರ ರೂಪಾಯಿ ಟರ್ನ್‌ಓವರ್ ಆಗುವುದು ವಿಶೇಷವಲ್ಲ. ಆದ್ದರಿಂದ ಈ ಮಿತಿಯನ್ನು 50 ಸಾವಿರ ರೂಪಾಯಿಗಳಿಗೆ ಏರಿಸಿದರೆ ವಸೂಲಾತಿ ಖರ್ಚು ಕಡಿಮೆಯಾಗಿ, ಆದಾಯವು ಹೆಚ್ಚು ಬರುತ್ತದೆ.

ಡಿಮಾಂಡ್ 7– ನಾನ್ ಜುಡಿಷಿಯಲ್ ಸ್ಟಾಂಪ್ಸ್ ಮತ್ತು ಕೋರ್ಟ್ ಸ್ಟಾಂಪ್‌ಗಳ ಬಗ್ಗೆ ಎರಡು ಮಾತು ಹೇಳಬೇಕಾಗಿದೆ. ನಮ್ಮ ಅನುಭವದಿಂದ ಹೇಳಬೇಕಾದರೆ, ಅನೇಕ ವೇಳೆ ಅವು ದೊರೆಯುವುದೇ ಇಲ್ಲ. ಅನೇಕ ಸಂದರ್ಭಗಳಲ್ಲಿ ಖಜಾನೆಯಲ್ಲಿ ಹೋಗಿ ಹಣವನ್ನು ಕಟ್ಟಿ ರಸೀತಿ ತೆಗೆದುಕೊಂಡು, ಬೇರೆ ಕಾಗದದಲ್ಲಿ ಬರೆದು ರಿಜಿಸ್ಟರ್ ಮಾಡಿಸಬೇಕಾಗಿದೆ. ವರ್ಷದಲ್ಲಿ ಅನೇಕ ಸಂದರ್ಭಗಳಲ್ಲಿ ನಮ್ಮ ರಾಜ್ಯದಲ್ಲಿ ಸ್ಟ್ಯಾಂಪ್ ಪೇಪರು ದೊರೆಯುವುದಿಲ್ಲ. ಸ್ಟ್ಯಾಂಪ್ ಪೇಪರ್ ಸಹಿತ ಪ್ರಿಂಟ್ ಮಾಡುವುದಕ್ಕೆ ಸಾಧ್ಯವಿಲ್ಲವೆಂದರೆ ಅದನ್ನು ಸಪ್ಲೈ ಮಾಡುವುದಕ್ಕೆ

ಸಾಧ್ಯವಿಲ್ಲವೆಂದರೆ, ಇದನ್ನು ಸರ್ಕಾರ ಎಂದು ಕರೆಯುವುದಕ್ಕೆ ಎಂದೆಂದಿಗೂ ಸಾಧ್ಯವಿಲ್ಲ. ಸ್ಟ್ಯಾಂಪ್ ಪೇಪರನ್ನು ಒದಗಿಸುವ ಕಡೆಗೆ ಸರ್ಕಾರ ತೀವ್ರ ಗಮನ ಕೊಡಬೇಕಾಗಿದೆ. ಕೆಲವರು ಸ್ಟ್ಯಾಂಪ್ ಪೇಪರನ್ನು ತೆಗೆದಿಟ್ಟು, ಬ್ಲಾಕ್ ಮಾರ್ಕೆಟ್ಟಿನಲ್ಲಿ ಒಂದಕ್ಕೆ ಎರಡರಷ್ಟು ಹಣ ತೆಗೆದುಕೊಂಡು ಮಾರಾಟ ಮಾಡುತ್ತಿದ್ದಾರೆ. ಕಳ್ಳತನ, ಮೋಸ ಜಾಸ್ತಿಯಾಗುತ್ತಿದೆ. ಸ್ಟ್ಯಾಂಪ್ ಪೇಪರ್ ಯಾವತ್ತಿಗೂ ಸಿಗುವಂತೆ ವ್ಯವಸ್ಥೆಯನ್ನು ನಮ್ಮ ಸರ್ಕಾರ ಮಾಡಬೇಕಾಗಿದೆ. ಯಾವ ಮುನಸೀಫ್ ಕೋರ್ಟ್‌ನಲ್ಲಿ ಯಾವ ಸ್ಟ್ಯಾಂಪ್‌ವೆಂಡರ್ ಹತ್ತಿರ, ಯಾವ ಟ್ರೆಜರಿಯಲ್ಲಿ ಬೇಕಾದರೂ ಸ್ಟ್ಯಾಂಪ್ ಪೇಪರ್ ದೊರೆಯುವಂತೆ ಸರ್ಕಾರ ವ್ಯವಸ್ಥೆ ಮಾಡಬೇಕು.

ಮಾನ್ಯ ಸದಸ್ಯರಾದ ಶ್ರೀ ಜಿ.ವಿ. ಗೌಡರು ಷೆಡ್ಯೂಲ್ ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ಸ್ ಬಗ್ಗೆ ಮತ್ತು ಸಮಾಜ ಕಲ್ಯಾಣದ ಬಗ್ಗೆ ಮಾತನಾಡುತ್ತ ಕೆಲವು ಉದಾಹರಣೆಗಳನ್ನು ಕೂಡ ಕೊಟ್ಟರು. ಅನೇಕ ಸಂದರ್ಭಗಳಲ್ಲಿ ಷೆಡ್ಯೂಲ್ ಕ್ಯಾಸ್ಟ್ ಮತ್ತು ಷೆಡ್ಯೂಲ್ ಟ್ರೈಬ್‌ಗೆ ಸೇರಿದವರು ಯಾರು ಎನ್ನುವುದರ ಬಗ್ಗೆ ಸ್ಪಷ್ಟವಾದ ಪಟ್ಟಿಯನ್ನು ಸರ್ಕಾರದವರು ತಯಾರಿಸಿಲ್ಲ ಎಂದು ಹೇಳಿದರು. ಈ ಆಪಾದನೆ ಸರಿಯಾಗಿದೆ. ನಮ್ಮ ಕಡೆ ಕೆಂಬಟ್ಟೆ ಎಂದು ವರ್ಗವಿದೆ. ಅವರು ಹರಿಜನರು, ಷೆಡ್ಯೂಲ್ ಕ್ಯಾಸ್ಟ್ ಪಟ್ಟಿಯಲ್ಲಿ ಅವರ ಹೆಸರು ಇರಬೇಕಾಗಿತ್ತು. ಅವರು ಬಹಳ ಹಿಂದುಳಿದ ವರ್ಗದವರು. ಆದರೆ 'ಕೆಂಬಟ್ಟೆ" ಎನ್ನುವ ಹೆಸರು ಷೆಡ್ಯೂಲ್ ಕ್ಯಾಸ್ಟ್ ಪಟ್ಟಿಯಲ್ಲಿ ಇಲ್ಲ. ಅದರಲ್ಲಿ 'ಹೊಲೆಯ' ಎಂದು ಇದೆ. ಕೆಂಬಟ್ಟೆ, ಪರಿಯ, ಮಾದಿಗ, ಹೀಗೆ ಅನೇಕ ಜಾತಿಗಳು ಹೊಲೆಯ ಶಬ್ದದಲ್ಲಿ ಬರುತ್ತವೆ. ಕೆಂಬಟ್ಟೆ ಎನ್ನುವ ಜಾತಿ ಷೆಡ್ಯೂಲ್ ಕ್ಯಾಸ್ಟಿಗೆ ಸೇರಿದ್ದರೂ ಹೆಸರು ಪಟ್ಟಿಯಲ್ಲಿ ಇಲ್ಲದೆ ಇರುವುದರಿಂದ, ಆ ಜಾತಿಗೆ ಸೇರಿದ ಒಬ್ಬ ಐ.ಎ.ಎಸ್. ಪರೀಕ್ಷೆಗೆ ಡೆಲ್ಲಿಗೆ ಹೋಗಿದ್ದು, ಷೆಡ್ಯೂಲ್ ಕ್ಯಾಸ್ಟ್ ಪಟ್ಟಿಯಲ್ಲಿ ಇಲ್ಲವೆನ್ನುವ ಕಾರಣಕ್ಕಾಗಿ ವಾಪಸು ಬಂದ, ಅಲ್ಲಿಂದೀಚೆಗೆ ಆ ಜಾತಿಯವರು "ಕೆಂಬಟ್ಟೆ" ಎಂದು ಹಾಕುವುದನ್ನು ಬಿಟ್ಟು ಹೊಲೆಯ ಎಂದು ಸರ್ಟಿಫಿಕೇಟನ್ನು ತೆಗೆದುಕೊಂಡು ಎಲ್ಲ ಸವಲತ್ತುಗಳನ್ನೂ ಪಡೆಯುತ್ತಿದ್ದಾರೆ. ಬೇರೆ ಎಲ್ಲರೂ ಕೂಡ ಹೊಲೆಯ ಎಂದೇ ಬರೆದು ಅವರಿಗೆ ಸಿಕ್ಕತಕ್ಕ ಸವಲತ್ತುಗಳನ್ನು ಪಡೆಯುತ್ತಿದ್ದಾರೆ. ಇದೇ ರೀತಿಯಲ್ಲಿ "ಎರವರು" ಎಂದು ಇದ್ದಾರೆ. ಇವರಲ್ಲಿ ಪಂಜರಿ ಎರವರು, ಪಣಿಯ ಎರವರು ಎಂಬ ಕೆಲವು ಭೇದಗಳಿವೆ, ಪಂಜರಿ ಎರವ ಎಂದರೆ ಷೆಡ್ಯೂಲ್ ಟ್ರೈಬ್‌ನಲ್ಲಿ ಆ ಹೆಸರು ಇಲ್ಲ. ಅದಕ್ಕಾಗಿ ಎಲ್ಲರೂ ಎರವರಂದೇ ಬರೆಯಬೇಕಾಗುತ್ತದೆ ಅದರಲ್ಲಿರುವ

ಒಳಪಂಗಡಗಳನ್ನು ಬರೆಯುವುದಿಲ್ಲ. ಅದೇ ರೀತಿ ಕುರುಬರು ಎನ್ನುವ ಜಾತಿ ಇದೆ. ನಾನು ಒಂದು ಪ್ರಶ್ನೆ ಕಳುಹಿಸಿದ್ದು, ಸಭೆಯಲ್ಲಿ ಕೇಳಿದಾಗ "ಹಾಲು ಕುರುಬರು" ಷೆಡ್ಯೂಲ್ ಕ್ಯಾಸ್ಟ್ ಪಟ್ಟಿಯಲ್ಲಿ ಸೇರುವುದಿಲ್ಲ ಎಂದು ಮಾನ್ಯ ಮಂತ್ರಿಗಳು ಉತ್ತರ ಕೊಟ್ಟರು. ಕೊಡಗಿನಲ್ಲಿರುವ ಹಾಲು ಕುರುಬರು "ಕುರುಬರು" ಎಂದು ಸರ್ಟಿಫಿಕೇಟನ್ನು ತೆಗೆದುಕೊಂಡು ಷೆಡ್ಯೂಲ್ ಟ್ರೈಬ್ಸ್‌ನವರಿಗೆ ಏನೇನು ಸವಲತ್ತು ಬೇಕೋ ಅದನ್ನೆಲ್ಲ ತೆಗೆದುಕೊಳ್ಳುತ್ತಿದ್ದಾರೆ. ಆದ್ದರಿಂದ ಸ್ಪಷ್ಟವಾದ ಪಟ್ಟಿಯನ್ನು ತಯಾರಿಸದೆ ಇರುವುದರಿಂದ ಅನೇಕ ರೀತಿಯ ಗೊಂದಲವೇರ್ಪಡುವುದಕ್ಕೆ ಅವಕಾಶವಾಗುತ್ತಿದೆ. ಇದನ್ನು ತಪ್ಪಿಸಿ, ಸ್ಪಷ್ಟವಾದ ಪಟ್ಟಿಯನ್ನು ಸರ್ಕಾರದವರು ತಯಾರಿಸಬೇಕು.

ಅಸ್ಪೃಶ್ಯತೆ ನಿವಾರಣೆ ಬಗ್ಗೆ ಹೇಳುವುದಾದರೆ, ನಾವೂ ಸರ್ಕಾರದವರೂ ಎಷ್ಟೇ ಕಳಕಳಿಯಿಂದ ಕೆಲಸ ಮಾಡಿದರೂ ಕೂಡ ಅಸ್ಪೃಶ್ಯತೆಯ ನಿವಾರಣೆ ಸಾಧ್ಯವಾಗಿಲ್ಲ. ನಿವಾರಣೆ ಮಾಡುವುದಕ್ಕೆ ಈ ಸಂದರ್ಭದಲ್ಲಿ ಒಂದು ದೊಡ್ಡ ಪ್ರಗತಿ ನಡೆದಿದೆ ಎಂದು ಹೇಳುವುದಕ್ಕೆ ಸಂತೋಷವಾಗುತ್ತದೆ. ನಾನು ಒಂದು ನಿರ್ಣಯ ಕೂಡ ಕಳುಹಿಸಿದ್ದೆ. ಪೇಜಾವರ ಶ್ರೀಗಳವರು ಹರಿಜನ ಕೇರಿಗೆ ಭೇಟಿ ನೀಡಿ, ಹರಿಜನರಿಗೆ ಮಂತ್ರೋಪದೇಶ ಮಾಡುವುದರ ಮೂಲಕ ಅಸ್ಪೃಶ್ಯತೆಯ ನಿವಾರಣೆ ಮಾಡತಕ್ಕ ಸ್ತುತ್ಯವಾದ ಕಾರ್ಯದಲ್ಲಿ ತೊಡಗಿದ್ದಾರೆ. ಚರಿತ್ರೆಯಲ್ಲಿ ಹಿಂದೆಂದೂ ನಡೆಯದೆ ಇರತಕ್ಕ ಸಾವಿರಾರು ವರ್ಷ ಕಾಲದ ನಮ್ಮ ಸಂಪ್ರದಾಯಕ್ಕೆ, ಕಟು ತತ್ವಗಳಿಗೆ ಬಲಿ ಬಿದ್ದಂಥ ಸಮಾಜದ ತತ್ವಕ್ಕೆ ವಿರೋಧವಾಗಿ, ಸಂಪ್ರದಾಯದ ವಾದದಲ್ಲಿನ ಅಡ್ಡಿ ಆತಂಕಗಳನ್ನು ತಪ್ಪಿಸಿ, ಪ್ರಗತಿಪರವಾದ ಕಾರ್ಯದಲ್ಲಿ ತೊಡಗಿದ್ದಾರೆ. ಅನೇಕ ಮಠಾಧಿಪತಿಗಳು ಅಸ್ಪೃಶ್ಯತೆಯನ್ನು ಬೋಧಿಸುತ್ತಿದ್ದಾರೆ. ಅದನ್ನು ಹೋಗಲಾಡಿಸುತ್ತಿಲ್ಲ. ಅಂಥ ಸಂದರ್ಭದಲ್ಲಿ ಅತ್ಯಂತ ಕರ್ಮ ಮಠದಲ್ಲೊಂದಾದ ಮಧ್ವ ಸಂಪ್ರದಾಯದ ಮಠಾಧಿಪತಿಗಳೊಬ್ಬರು ಇಂಥ ಪ್ರಗತಿರವಾದ ಕಾರ್ಯದಲ್ಲಿ ತೊಡಗಿ, ಇಡೀ ರಾಷ್ಟ್ರದ ಜನತೆಯ ಕಣ್ಣು ತೆರೆಸುತ್ತಿರುವುದು ಅತ್ಯಂತ ಘನತೆಯ ಸಂಕೇತ, ಅದಕೋಸ್ಕರ ಈ ಸಭೆಯಲ್ಲಿ ಅವರಿಗೆ ಅಭಿನಂದನೆ ಸಲ್ಲಿಸತಕ್ಕ ಒಂದು ನಿರ್ಣಯವನ್ನು ತೆಗೆದುಕೊಂಡು ಬಂದಿದ್ದೆ. ಅದಕ್ಕೆ ಮಾನ್ಯ ಸಭಾಪತಿಯವರು ಏಕೆ ಅವಕಾಶ ಕೊಡಲಿಲ್ಲವೊ ಅರ್ಥವಾಗುತ್ತಿಲ್ಲ ಇದು ಬಹಳ ಪ್ರಾಮುಖ್ಯವಾದ ವಿಚಾರ. ಕಳೆದ ವರ್ಷ ಪುರಿ ಜಗದ್ಗುರುಗಳು ಅಸ್ಪೃಶ್ಯತೆಯ ಬಗ್ಗೆ ಏನೋ ಹೇಳಿದರು ಎಂದು ಇಡೀ ದೇಶದಲ್ಲಿಯೇ ಗೊಂದಲವಾಯಿತು. ಎಲ್ಲ ರಾಜ್ಯ ವಿಧಾನ ಮಂಡಲಗಳಲ್ಲಿಯೂ ಖಂಡನೆಗಳಾದುವು. ಯಾವುದಾದರೂ ಕೆಟ್ಟುದನ್ನು ಮಾಡುವಾಗ ಖಂಡನೆ ಮಾಡಿದರೆ, ಒಳ್ಳೆಯದನ್ನು

ಮಾಡುವಾಗ ಅಭಿನಂದನೆ ಮಾಡುವುದಕ್ಕೆ ಕೂಡ ನಾವು ತಯಾರಾಗಿರಬೇಕಾಗಿದೆ. ಇಷ್ಟೊಂದು ಧೈರ್ಯದಿಂದ ಪೇಜಾವರ ಶ್ರೀಗಳವರು ಮಾಡುತ್ತಿರತಕ್ಕ ಒಳ್ಳೆಯ ಕಾರ್ಯಕ್ಕಾಗಿ ಈ ಸದನದ ಮುಖಾಂತರ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸಲು ಇಷ್ಟಪಡುತ್ತೇನೆ. ಅದೇ ಪ್ರಕಾರ ಇನ್ನೂ ಅನೇಕ ಸಂಪ್ರದಾಯವಾದಿಗಳು ಕೂಡ ಇರುವಂಥ ಈ ರಾಜ್ಯದಲ್ಲಿ ಅಸ್ಪೃಶ್ಯತೆಯನ್ನು ಪ್ರತಿಪಾದನೆ ಮಾಡತಕ್ಕವರಿದ್ದಾರೆ-ಅಂಥವರಿಗೆ ಒಂದು ಎಚ್ಚರಿಕೆಯನ್ನು ಈ ಸಂದರ್ಭದಲ್ಲಿ ಕೊಡಲಿಕ್ಕೆ ಬಯಸುತ್ತೇನೆ. ಪೇಜಾವರ ಶ್ರೀಗಳವರು ಮಾಡುತ್ತಿರುವಂತೆ ಇತರ ಮಠಾಧಿಪತಿಗಳೂ ಮಾಡುವುದಕ್ಕೆ ಮುಂದೆ ಬರಬೇಕಾಗಿದೆ; ತಪ್ಪಿದರೆ ಸಮಾಜದ ಆಕ್ರೋಶಕ್ಕೆ ಗುರಿಯಾಗಬೇಕಾಗುತ್ತದೆ. ಅಸ್ಪೃಶ್ಯತೆಯ ನಿವಾರಣೆ ಮಾಡುತ್ತೇವೆಂದು ಎಲ್ಲ ಮಠಾಧೀಶರೂ ಮುಂದೆ ಬಂದು ದೇಶಕ್ಕೆ ಬಡಿದಿರುವ ರೋಗವನ್ನು ನಿವಾರಣೆ ಮಾಡಿ ನಮ್ಮ ಸಮಾಜದ ಬಾಂಧವರು ಬಹಳ ಹಿಂದುಳಿದ ಜನರು ಯಾರಿದ್ದಾರೆ, ಅಂಥವರು ಮೇಲೆ ಬರಲು ಸಹಾಯ ಮಾಡಬೇಕು ಎಂದು ಈ ಸಂದರ್ಭದಲ್ಲಿ ಅಭಿಪ್ರಾಯ ಮಂಡಿಸಲು ಇಚ್ಛೆಪಡುತ್ತೇನೆ.

ಅರಣ್ಯ ಸಂಪತ್ತನ್ನು ರಕ್ಷಣೆ ಮಾಡುವುದಕ್ಕಾಗಿ ಆ್ಯಂಟಿ ಸ್ಮಗ್ಲಿಂಗ್ ಸ್ಕ್ವಾಡ್ ರಚಿಸಿ ಅದನ್ನು ಹೆಚ್ಚುವರಿ ಬೇಡಿಕೆಯಲ್ಲಿ ಮಂಡಿಸಿದ್ದಾರೆ. ಮಲೆನಾಡಿನಲ್ಲಿರುವವರಿಗೆ ಅರಣ್ಯ ಸಂಪತ್ತಿನ ಬಗ್ಗೆ ಹೆಚ್ಚು ಆಸಕ್ತಿ ಇದೆ. ಅರಣ್ಯ ನಾಶವಾಗದಂತೆ ನೋಡಿಕೊಳ್ಳಬೇಕಾಗುತ್ತದೆ. ಇದರ ಬಗ್ಗೆ ಕಾತುರತೆ ಅವರಿಗೆ ಇದೆ. ಮಲೆನಾಡಿನಲ್ಲಿ ನೀಲಗಿರಿ ಪ್ಲಾಂಟೇಷನ್ ನಾಶವಾಗುತ್ತಿದೆ. ಅರಣ್ಯ ನಾಶದಿಂದ ಕೊಡಗಿನ ಭಾಗಮಂಡಲ ರೇಂಜಿನಲ್ಲಿ ಮಳೆ ಬರುವ ಕಾಲ ಕೂಡ ವ್ಯತ್ಯಾಸವಾಗುತ್ತಿದೆ. ಇದರ ಪರಿಣಾಮ ಯಾಲಕ್ಕಿ ಕಾಫಿತೋಟದ ಮೇಲಾಗಿದೆ. ಕೊಡಗಿನಲ್ಲಿ ಜೇನು ಕೃಷಿ ದೊಡ್ಡ ಪ್ರಮಾಣದಲ್ಲಿ ಇದೆ. ಒಂದು ವರ್ಷಕ್ಕೆ ಎರಡು ಲಕ್ಷ ಕೆ.ಜಿ. ಜೇನುತುಪ್ಪ ಉತ್ಪಾದನೆಯಾಗುತ್ತದೆ, ಒಂದು ಕೆ.ಜಿ. ಜೇನುತುಪ್ಪಕ್ಕೆ ಐದು ರೂಪಾಯಿ ಬೆಲೆ ಇದೆ. ಆ್ಯಂಟಿ ಸ್ಮಗ್ಲಿಂಗ್ ಸ್ಕ್ವಾಡ್‌ನಿಂದ ಅರಣ್ಯ ನಾಶ ತಪ್ಪಿಸಲಿಕ್ಕೆ ಆಗುತ್ತಾ ಇಲ್ಲ. ಆದುದರಿಂದ ದಕ್ಷತೆಯಿಂದ ಕೆಲಸ ಮಾಡತಕ್ಕಂಥವರು ಇದರಲ್ಲಿ ಇರಬೇಕು. ಆದರೆ ಅವರು ಯಾರದೋ ಕೈ ಗೊಂಬೆಯಾಗಿ ಕೆಲಸ ಮಾಡುತ್ತಾರೆ. ನಮ್ಮಲ್ಲಿ ನಾಡಗೀರ ಎನ್ನುವ ಒಬ್ಬರು ಫಾರೆಸ್ಟ್ ಅಧಿಕಾರಿ ಇದ್ದಾರೆ. ಅವರಷ್ಟು ದಕ್ಷತೆಯಿಂದ ಕೆಲಸ ಮಾಡತಕ್ಕಂಥವರು ಇನ್ನೊಬ್ಬರು ಇಲ್ಲ. ಕಳೆದ ಒಂದು ವರ್ಷದಿಂದ ಅವರು ಕೊಡಗಿನಲ್ಲಿ ಇದ್ದಾರೆ. ಅವರ ಬಗ್ಗೆ ಜನ ಹಾಗೆ ಹೇಳುತ್ತಾರೆ. ಮರ ಕಳ್ಳತನ ಮಾಡುವವರಿಗೆ ಅವರು ಸಿಂಹಸ್ವಪ್ನವಾಗಿದ್ದಾರೆ. ಆ್ಯಂಟಿ ಕರಪ್ಷನ್ನವರು

ಅಂಥವರ ಮೇಲೆ ಏನಾದರೂ ಒಂದು ಆಪಾದನೆ ತಂದು ಅವರನ್ನು ಟ್ರ್ಯಾಪ್ ಮಾಡಲು ಪ್ರಯತ್ನಿಸಿದ್ದಾರೆ. ಲಂಚ ತಿನ್ನುವವರ ಹತ್ತಿರ ಆ್ಯಂಟಿಕರಪ್ಷನ್ ಅವರು ಬರುವುದಿಲ್ಲ. ಯಾರಾದರೂ ಒಳ್ಳೆಯವರು ಇದ್ದರೆ, ದಕ್ಷತೆಯಿಂದ ಕೆಲಸ ಮಾಡತಕ್ಕಂಥವರು ಇದ್ದರೆ ಅವರನ್ನು ತೊಂದರೆಗೆ ಗುರಿ ಮಾಡುವಂತಾದರೆ ಇದು ಸರ್ವ ನಾಶಕ್ಕೆ ನಾಂದಿಯಾಗುತ್ತದೆ. ದಕ್ಷತೆಯಿಂದ ಕೆಲಸ ನಿರ್ವಹಿಸತಕ್ಕಂಥವರಿಗೆ ಉತ್ತೇಜನ ಕೊಡಬೇಕು. ಫಾರೆಸ್ಟ್ ಇಲಾಖೆಯಲ್ಲಿ ಇರತಕ್ಕಂಥ ಅಧಿಕಾರಿಗಳು ಅರಣ್ಯ ನಾಶವಾದರೂ ಚಿಂತೆ ಇಲ್ಲಾ ಎನ್ನತಕ್ಕಂಥವರು ಇದ್ದಾರೆ. ಅರಣ್ಯ ಇಲಾಖೆಯ ಅಂಡರ್ ಸೆಕ್ರೆಟರಿಯವರ ಹತ್ತಿರ ಒಂದು ವಿಷಯ ತಿಳಿದುಕೊಳ್ಳುವುದಕ್ಕೆ ನಾನೂ ಹೋಗಿದ್ದೆ. ಅವರು ಬಹಳ ಚಿಕ್ಕ ವಿಚಾರ ಮಾತಾನಾಡಿದರು. ಅದನ್ನು ಕೇಳಿ ಅವರ ಕಪ್ಪಾಳಕ್ಕೆ ಹೊಡೆಯಬೇಕು ಎಂದು ನನಗೆ ಅನ್ನಿಸಿತು. ಅಯೋಗ್ಯ ರೀತಿಯಲ್ಲಿ ನನಗೆ ಮಾತಾನಾಡಿದರು. ಆಮೇಲೆ ಸೆಕ್ರೆಟರಿಯವರ ಹತ್ತಿರ ಹೋಗಿ ಮಾತನಾಡಿದೆ ಅವರು ಸರಿಯಾಗಿ ನನಗೆ ತಿಳಿಸಿ ಹೇಳಿದರು. ಚೆನ್ನಾಗಿ ಮಾತನಾಡಿದರು. ಅದು ಇರಿಗೇಷನ್ ಪಂಪಸೆಟ್ ವಿಚಾರದ ವಿಷಯ ಇದ್ದಿತು. ಇರಿಗೇಷನ್ ಪಂಪಸೆಟ್ ಸವಲತ್ತು ಕೊಡುತ್ತೇವೆ ಎಂದು ಹೇಳಿದರು. ಅದರ ವಿವರ ಏನು ಅಂದರೆ ಫಾರೆಸ್ಟ್‌ನಲ್ಲಿ ತೆಗೆದುಕೊಂಡು ಹೋಗಬೇಕು. ಅಷ್ಟು ಜಾಗವನ್ನು ಲೀಜ್ ಮೇಲೆ ತೆಗೆದುಕೊಳ್ಳಬೇಕು ಎಂದು ಅವರು ಮೊದಲು ಹೇಳಿದ್ದರು. ಇದಕ್ಕೆ ಪಿಬ್ಲ್ಯೂಡಿ ರಿಮಾರ್ಕ್ಸ್ ಆಗಬೇಕು, ಇದು ಸುಲಭವಾಗಿ ಆಗುವುದಿಲ್ಲ. ಇದಕ್ಕೆ ಆರು ತಿಂಗಳು ಕಾಲಾವಕಾಶ ಬೇಕು ಎಂದು ಆ ಅಂಡರ್ ಸೆಕ್ರೆಟರಿಯವರು ಹೇಳಿದ್ದರು. ಇಂಥ ಚಿಕ್ಕ ಕೆಲಸಕ್ಕೆ ಆರು ತಿಂಗಳು ಬೇಕಾಗುತ್ತದೆಯೇ? ಅದರೆ ಸೆಕ್ರೆಟರಿಯವರು ಅದನ್ನು ಮಾಡಿಸಿ ಕೊಡುತ್ತೇನೆ. ದಯವಿಟ್ಟು ಬೇಜಾರುಪಟ್ಟುಕೊಳ್ಳಬಾರದು ಎಂದು ಹೇಳಿದರು. ತಾವು ಎಂ ಎಲ್ ಎ ಇದ್ದೀರಿ ತಮ್ಮ ಕೂಡ ಮಾತಾನಾಡಲು ನಾನು ಸಿದ್ಧನಿಲ್ಲ ಎಂದು ಅವರು ಒರಟಾಗಿ ಹೇಳಿದ್ದರು. ಯೋಗ್ಯತೆ ಇಲ್ಲದ ಇಂಥ ಅಧಿಕಾರಿಗಳು ಮಿಶ್ಚೀಫ್ ಮಾಡುತ್ತಾರೆ ಎಂದು ಹೇಳುತ್ತೇನೆ. ಆದರೆ ಚೆನ್ನಾಗಿ ಕಾರ್ಯನಿರ್ವಹಣೆ ಮಾಡತಕ್ಕಂಥ ಅಧಿಕಾರಿಗಳೂ ಅನೇಕ ಜನ ಇದ್ದಾರೆ. ಆ್ಯಂಟೀ ಕರಪ್ಷನ್ನವರು ಒಳ್ಳೆಯ ಅಧಿಕಾರಿಗಳಿಗೆ ತೊಂದರೆ ಉಂಟು ಮಾಡುತ್ತಾರೆ. ಆದುದರಿಂದ ದಕ್ಷತೆಯಿಂದ ಆಡಳಿತ ಕೆಲಸ ಮಾಡುವ ಅಧಿಕಾರಿಗಳಿಗೆ ಅವಕಾಶ ಮಾಡಿ ಕೊಡಬೇಕು ಎಂದು ಇಷ್ಟು ಮಾತ್ರ ಹೇಳುತ್ತೇನೆ. ಈ ಸಮಯದಲ್ಲಿ ಇಷ್ಟು ಒತ್ತಾಯ ಮಾಡಿ ಹೆಚ್ಚುವರಿ ಬೇಡಿಕೆಗೆ ವಿರೋಧ ಮಾಡುತ್ತೇನೆ.

# 1977-78ರ ಸಾಲಿನ ಆಯ-ವ್ಯಯದ ಬಗ್ಗೆ ಚರ್ಚೆ

**20ನೇ ಮತ್ತು 21ನೇ ಏಪ್ರಿಲ್ 1977**

**ಎ.ಕೆ. ಸುಬ್ಬಯ್ಯ :** ನಮ್ಮ ರಾಜ್ಯದ ಅರ್ಥಸಚಿವರು 1977-78ನೇ ಸಾಲಿಗೆ ಸುಮಾರು 595.47 ಕೋಟಿ ರೂಪಾಯಿಗೆ ಆದಾಯದ ಒಂದು ಆಯವ್ಯಯವನ್ನು ಮಂಡನೆ ಮಾಡಿದ್ದಾರೆ. ರೆವಿನ್ಯೂ ಖರ್ಚು 570.78 ಕೋಟಿ ರೂಪಾಯಿ ಆದನಂತರವೂ ಕೂಡ ನಮ್ಮ ರಾಜ್ಯದ ಆರ್ಥಿಕ ಪರಿಸ್ಥಿತಿಯ ಸೂಕ್ಷ್ಮ ಪಕ್ಷಿನೋಟವನ್ನು ನೋಡಿದಾಗ 38.20 ಕೋಟಿ ರೂಪಾಯಿಗಳಷ್ಟು ಕೊರತೆಯ ಆಯವ್ಯಯವನ್ನು ನಾವು ನೋಡುತ್ತಾ ಇದ್ದೇವೆ. ಇದರ ಜೊತೆಗೆ ನಮ್ಮ ರಾಜ್ಯದ ಬಡಜನರ, ಹರಿಜನ-ಗಿರಿಜನ ಅಲ್ಪಸಂಖ್ಯಾತರ ಕಲ್ಯಾಣಕ್ಕೋಸ್ಕರ ಯಾವುದೇ ಒಂದು ನಿರ್ದಿಷ್ಟವಾದಂಥ ಕಾರ್ಯಕ್ರಮ ಇಲ್ಲದೆ, ಈ ಆಯವ್ಯಯದ ಅಂದಾಜನ್ನು ನೋಡಿದಾಗ ಇದು ತೀರ ಅಸ್ತಮಾನವಾದಂಥ ಕಾಲದಲ್ಲಿ ಅಂದರೆ ಸೂರ್ಯ ಅಸ್ತಮಾನವಾದಂಥ ಕಾಲದಲ್ಲಿ ಮಬ್ಬು ಕವಿದಿರುತ್ತದೆ. ಆ ರೀತಿ ಅಸ್ತಮಾನವಾಗುತ್ತಾ ಇರುವಂಥ ಸರ್ಕಾರದ ಮಂತ್ರಿಗಳು ಮಂಡಿಸಿರುವಂಥ ಆಯವ್ಯಯವೇನೋ ಎಂದು ನಿರ್ದಿಷ್ಟವಾಗಿ ಎಲ್ಲರೂ ಭಾವಿಸಬೇಕಾಗುತ್ತದೆ. ಅಷ್ಟೊಂದು ಸಪ್ಪೆಯಾಗಿ ನಿರಾಶಾದಾಯಕವಾಗಿ ಮುಂದಿನ ವರ್ಷದ ಅವಧಿಯಲ್ಲಿ ನಮ್ಮ ರಾಜ್ಯದ ಅಲ್ಪಸಂಖ್ಯಾತರ ಕಲ್ಯಾಣಕ್ಕೋಸ್ಕರ ಏನಾದರೂ ಒಂದು ಉತ್ತಮವಾದ ವ್ಯವಸ್ಥೆಯನ್ನು ನಿರೂಪಣೆ ಮಾಡುವುದನ್ನು ಬಿಟ್ಟು ಒಂದು ಸಾಧಾರಣ ಲೆಕ್ಕ ಪತ್ರ ವರದಿಯನ್ನು ಒಪ್ಪಿಸಬೇಕಲ್ಲ, ಆ ರೀತಿ ಒಂದು ಬಜೆಟ್‌ನ್ನು ಮಂಡನೆ ಮಾಡಿದ್ದಾರೆ. ಹೋದ ವರ್ಷ ಆಯವ್ಯಯ ಬಗ್ಗೆ ಭಾಷಣ ಮಾಡುವಂಥ ಕಾಲದಲ್ಲಿ ನಾನು ಸಭೆಗೆ ಬರಲಿಕ್ಕೆ ಆಗಲಿಲ್ಲ, ನಮ್ಮನ್ನು ಒಳಗೆ ಹಾಕಿದ್ದರು. ಆ ಸಂದರ್ಭದಲ್ಲಿ ಹೊರಗಡೆ ಆಗುತ್ತಿದ್ದ ಇವರ ಆರ್ಭಟ. ಅಬ್ಬರ, ಅಟ್ಟಹಾಸಗಳನ್ನು ನಾವು ಕೇಳುತ್ತಿದ್ದೆವು. ತುರ್ತು ಪರಿಸ್ಥಿತಿ ತಂದಿದ್ದು ಏಕೆ ಎಂದು ಹೇಳುತ್ತಿದ್ದರು. ನಮಗೆ ಬಹಳ ಸಂತೋಷವಾಯಿತು. ಜೊತೆಯಲ್ಲಿ ಮಾನ್ಯ ರಾಮಕೃಷ್ಣ ಹೆಗಡೆಯವರೂ ಇದ್ದರು. ದೇಶದ ಕಲ್ಯಾಣಕ್ಕೋಸ್ಕರ ನಾವು ದಸ್ತಗಿರಿಯಾಗಿದ್ದರೆ, ಅದರಿಂದ ದೇಶದ ಕಲ್ಯಾಣ ಆಗುವ ಹಾಗಿದ್ದರೆ ಮತ್ತೆ ನಾವು ಜೈಲಿಗೆ ಹೋಗುವುದಕ್ಕೆ ತಯಾರಾಗಿದ್ದೇವೆ. ಬಡಬಗ್ಗರ, ದೀನದಲಿತರ ಕಲ್ಯಾಣಕ್ಕೋಸ್ಕರ ಟೊಂಕ ಕಟ್ಟಿ ದುಡಿದವರು ನಾವು ಹೊರಗಡೆ ಇದ್ದರೆ ದೀನದಲಿತರ ಕಲ್ಯಾಣವಾಗುವುದಿಲ್ಲ; ನಾವು ಒಳಗೆ ಹೋದರೆ

ಅವರ ಕಲ್ಯಾಣವಾಗುತ್ತದೆ ಎಂದರೆ ಈಗಲೂ ನಾವು ಒಳಗೆ ಹೋಗುವುದಕ್ಕೆ ತಯಾರಿದ್ದೇವೆ. ಬಡಜನರ ಕಲ್ಯಾಣಕ್ಕೋಸ್ಕರ ಇವೆಲ್ಲ ಬಂದಿದೆ ಎಂದ ಮೇಲೆ 20 ತಿಂಗಳ ಕಾಲಾವಧಿಯಲ್ಲಿ ದೇಶದ ಅಭಿವೃದ್ಧಿ ಎಷ್ಟಾಗಿದೆ Gains of emergency ಏನು ಎನ್ನುವುದನ್ನು ಆಯವ್ಯಯ ಪತ್ರದಲ್ಲಿ ಹೇಳಬೇಕಾಗಿತ್ತು. ಅದು ಈ ಬಜೆಟ್‌ನಲ್ಲಿ ಪ್ರತಿಬಿಂಬಿತವಾಗುತ್ತದೆ ಎಂದು ಭಾವಿಸಿದೆವು. ಆದರೆ ಇವತ್ತು ಈ ಆಯವ್ಯಯ ಪತ್ರವನ್ನು ನೋಡಿದಾಗ Gains of emergency ಕಾಣುತ್ತಾ ಇಲ್ಲ. We are ever where seeing only the rains of emergency. There are no gains. ಈ ಒಂದು ಆಯವ್ಯಯ ಪತ್ರವನ್ನು ಸೂಕ್ಷ್ಮವಾಗಿ ಅವಲೋಕನೆ ಮಾಡಿ ನೋಡಿದಾಗ ಕಳೆದ 20 ತಿಂಗಳ ಅವಧಿಯಲ್ಲಿ ನಮ್ಮ ದೇಶದಲ್ಲಿ ಬೇರೆ ಬೇರೆ ಇಲಾಖೆಯವರು ಯಾವರೀತಿ ಕೆಲಸಮಾಡಿದ್ದಾರೆ ಎಂದು ನನಗೆ ಗೊತ್ತಾಗುತ್ತದೆ. ಈ 20 ತಿಂಗಳ ಅವಧಿಯಲ್ಲಿ ಬೆಳೆದ ಭ್ರಷ್ಟಾಚಾರ, ಲಂಚಗುಳಿತನ ಕಳೆದ 30 ವರ್ಷಗಳಲ್ಲಿ ಇಷ್ಟು ಬೆಳೆದಿರಲಿಲ್ಲ ಅಷ್ಟು ಬೆಳೆದಿದೆ. 20 ತಿಂಗಳ ಅವಧಿಯಲ್ಲಿ ದೇಶದಲ್ಲಿ ದುರಾಡಳಿತ ಬೆಳೆಯಿತು. ಅನಾಚಾರ ಬೆಳೆಯಿತು. ಮಾನ್ಯ ನರಸಿಂಹಮೂರ್ತಿ ಸಾಹೇಬರು ಸಭೆಯಿಂದ ಹೋಗಿಬಿಟ್ಟರು ಅವರು ಬಹಳ ಗಂಭೀರವಾಗಿ ದೊಡ್ಡ ಪ್ರಲಾಪ ಮಾಡಿಕೊಂಡರು. ಅವರು ಮಾತನಾಡತಕ್ಕ ಕಾಲದಲ್ಲಿ ಕೇಂದ್ರದಲ್ಲಿ ಅಧಿಕಾರ ಕಳೆದುಕೊಂಡಿದ್ದೇವೆ ಎನ್ನುವ ಉದ್ವೇಗ ಎದ್ದು ಕಾಣುತ್ತಿತ್ತು. ಕಳ್ಳಸಾಗಾಣಿಕೆಗಾರರನ್ನು ಅರೆಸ್ಟ್ ಮಾಡಿ ಹೊರಗಡೆ ಬಿಟ್ಟಾಗ ಜನ ಮೆರವಣಿಗೆ ಮಾಡಿಕೊಂಡು ಹೋದರು ಎಂದು ಹೇಳಿದರು. ನನಗೂ ಮಾನ್ಯ ಹೆಗಡೆಯವರಿಗೂ, ವೈ.ಎಸ್. ಪಾಟೀಲರಿಗೂ ಅದು ಅನ್ವಯವಾಗುತ್ತದೆ. ನಮಗೂ ಬೇರೆಯವರಿಗೂ ವಿಂಗಡಣೆ ಮಾಡಬಹುದು. ಒಟ್ಟಿನಲ್ಲಿ ಜನ ಮೆರವಣಿಗೆ ಮಾಡಿದ್ದು ಕಳ್ಳಸಾಗಾಣಿಕೆಗಾರರನ್ನು ಎಂದು ಹೇಳಿ ತಮ್ಮ ದುಃಖವನ್ನು ತೋಡಿಕೊಂಡರು. ಮೆರವಣಿಗೆಯಲ್ಲಿ ಹೀರೋ ಮಾಡಿದರು ಎಂದು ಮನಸ್ಸಿನಲ್ಲಿರುವ ಆತಂಕವನ್ನು ವ್ಯಕ್ತಮಾಡಿದರು. ನಮ್ಮನ್ನು 20 ತಿಂಗಳ ಕಾಲಾವಧಿಯಲ್ಲಿ ಜೈಲಿನಲ್ಲಿ ಇಟ್ಟಂಥಾದ್ದು ಹೀರೋ ಮಾಡುವ ಉದ್ದೇಶ ಅಲ್ಲ, ಜೀರೋ ಮಾಡಬೇಕು ಎಂಬ ಉದ್ದೇಶದಿಂದ ಜೈಲಿನಲ್ಲಿಟ್ಟಿದ್ದರು ಆ ರೀತಿ ಆಗದೇ ನಾವು ಹೀರೋ ಆಗಿ ಬಂದೆವು. ಅದು ನಮ್ಮ ಅಂತಃಶಕ್ತಿಯ ಪ್ರತೀಕ. ನಮ್ಮಲ್ಲಿರತಕ್ಕ ತಾಕತ್ತು, ಯೋಗ್ಯತೆಯ ಫಲದಿಂದ 20 ತಿಂಗಳ ಕಾಲ ಜೈಲಿನಲ್ಲಿ ಕುಳಿತು ಮಾನಸಿಕವಾಗಿ ಮತ್ತೆ ದೇಶದ ಹಾಗೂ ಜನತೆಯ ಕಲ್ಯಾಣಕ್ಕೋಸ್ಕರ ದುಡಿಯುವುದಕ್ಕೆ ಒಂದು ದಿಟ್ಟ ಹೆಜ್ಜೆಯನ್ನು ಇಟ್ಟುಕೊಂಡು ಬಂದುದರಿಂದ ನಮ್ಮನ್ನು ಜನ ಮೆರವಣಿಗೆ

ಮಾಡಿದ್ದಾರೆ. ಹೂವಿನ ಹಾರಗಳನ್ನು ಅರ್ಪಣೆ ಮಾಡಿದ್ದಾರೆ. ಇವತ್ತು ಕೆಲವು ಕಳ್ಳ ಸಾಗಾಣಿಕೆದಾರರನ್ನು ಅರೆಸ್ಟ್ ಮಾಡಿ ಪೊಲೀಸರ ಹತೋಟಿಯಲ್ಲಿಟ್ಟಿದ್ದಾರೆ. ತುರ್ತುಪರಿಸ್ಥಿತಿಯಲ್ಲಿ ಆಹಾರ ಸಾಮಗ್ರಿಗಳ ಬೆಲೆಯೇರಿಕೆ ಜಾಸ್ತಿ ಆಯಿತು. ನಾವು ಜೈಲಿನಲ್ಲಿದ್ದುಕೊಂಡೇ ಪ್ರತಿ ದಿವಸ ಪತ್ರಿಕೆಗಳಲ್ಲಿ ಈ ವಿಚಾರಗಳನ್ನೆಲ್ಲಾ ನೋಡುತ್ತಿದ್ದೆವು. ಅನೇಕ ವಿಷಯಗಳನ್ನು ತಿಳಿಯುತ್ತಿದ್ದೆವು. ಆದರೆ, ಜೀವನಾವಶ್ಯಕವಾದಂಥ ವಸ್ತುವಿನ ಬೆಲೆ ಏರಿವೆಯೇ ಹೊರತು ಇಳಿಯಲಿಲ್ಲ. ಇವತ್ತು ತುರ್ತು ಪರಿಸ್ಥಿತಿಯಲ್ಲಿ ಬೆಲೆಗಳು ಇಳಿಯಲಿಲ್ಲವೆಂಬುದನ್ನು ನಾವು ಎಲ್ಲಾ ಕಡೆಗಳಲ್ಲಿಯೂ ನೋಡಿದ್ದೇವೆ. ಶಿಸ್ತು ಮತ್ತು ದಕ್ಷತೆ ಎಂದು ಹೇಳಿದ್ದಾರೆ, ನಾವು ಜೈಲಿನಲ್ಲಿದ್ದಾಗ್ಗೆ ಶಿಸ್ತು ಮತ್ತು ದಕ್ಷತೆ ಬಗ್ಗೆ ನಮ್ಮ ಮಿತ್ರರಾದ ಶ್ರೀ ವಿ.ಎಸ್. ಆಚಾರ್ಯ, ಅಧ್ಯಕ್ಷರು, ಉಡುಪಿ ಮುನಿಸಿಪಾಲಿಟಿ ಅವರ ಮಗನಿಗೆ ಕಾಯಿಲೆಯೆಂದು ಪೆರೋಲ್ ಮೇಲೆ ಜೈಲಿನಿಂದ ಹೋದರು. ಪುನಃ ಮಾರನೆಯ ದಿವಸ ಇವರ ಪೆರೋಲ್ ಈಸ್ ರಿಜೆಕ್ಟೆಡ್ ಎಂದು ಬಂತು, ಅಷ್ಟರಲ್ಲಿ ಅವರು ಮನೆಗೆ ಹೋಗಿದ್ದರು. ಇದು ಎಮರ್ಜೆನ್ಸಿಯಲ್ಲಿ ನಡೆದಂಥ ದಕ್ಷತೆ ಅದು ಯಾವ ರೀತಿ ಆಗಿದೆ ಎಂದರೆ ಬಡವರ ಕಲ್ಯಾಣ ಮಾಡುತ್ತೇವೆ ಎಂದು ಹೇಳಿ ಓಟನ್ನು ತೆಗೆದುಕೊಂಡು ಅಧಿಕಾರದಲ್ಲಿ ಕುಳಿತು ಬಡವರನ್ನು ಭೂಗತ ಮಾಡತಕ್ಕ ಕಾರ್ಯಕ್ರಮಗಳು ಸರ್ಕಾರದವತಿಯಿಂದ ನಡೆದಿವೆ. ಈಗ ನಮ್ಮ ಕಾಂಗ್ರೆಸ್ಸಿಗರು ಕಟ್ಟಿಸಿರತಕ್ಕ ಜನತಾ ಮನೆಗಳ ಬಗ್ಗೆ ಹೇಳಬೇಕು ಎಂದರೆ ಅದರ ಹೆಸರನ್ನು ಕೆಡಿಸುವುದಕ್ಕೆ ಆ ರೀತಿ ಮನೆಗಳನ್ನು ಕಟ್ಟಿಸುತ್ತಿದ್ದಾರೆ ಅದಕ್ಕೋಸ್ಕರ ಕಾಂಗ್ರೆಸ್ ಮನೆಗಳು ಎಂದು ಹೆಸರನ್ನು ಇಟ್ಟರೆ ಒಳ್ಳೆಯದು ನಮ್ಮ ಕೊಡಗಿನ ಜಿಲ್ಲೆಯಲ್ಲಿ ಮನೆಗಳನ್ನು ಕಟ್ಟಿದ್ದರ ಬಗ್ಗೆ ಪ್ರಸ್ತಾಪ ಮಾಡಿದ್ದೆ, ಈಗ ಆ ಮನೆಗಳನ್ನು ಕಟ್ಟುವ ಮಂತ್ರಿಗಳು ಇಲ್ಲೇ ಇದ್ದಾರೆ. ಕೊಡಗಿನ ಗಂಡು ಶ್ರೀ ಗುಂಡೂರಾಯರು, ಅವರಿಗೆ ಆ ಮನೆಗಳು ಏನಾಗಿವೆ ಎಂದು ಗೊತ್ತಿಲ್ಲ. ಕಳೆದ ವರ್ಷ ಮಳೆ ಸ್ವಲ್ಪ ಕಡಿಮೆಯಾದ್ದರಿಂದ ಕಟ್ಟಿಸಿರತಕ್ಕ ಮನೆಗಳಲ್ಲಿ ಅರ್ಧ ಮನೆಗಳು ಹಾಗೆಯೇ ಉಳಿದುಕೊಂಡಿವೆ. ಆದರೆ ಈ ವರ್ಷದ ಬಿರುಗಾಳಿಯಲ್ಲಿ ಯಾವ ಮನೆಗಳೂ ಉಳಿಯುವುದಿಲ್ಲ. ಅದಕ್ಕೆ ಮೊದಲು ಕಟ್ಟಿಸಿದಂತಹ ಮನೆಗಳು ಯಾವೂ ಜೀವಂತ ಉಳಿದಿಲ್ಲ. ಆದ್ದರಿಂದ ಅನೇಕರು ಆ ಮನೆಗಳಿಗೆ ಹೋಗಿ ಸೇರಿಕೊಳ್ಳುವುದಕ್ಕಾಗಲಿಲ್ಲ. ಇವೊತ್ತು 2,500 ರೂಪಾಯಿ ಖರ್ಚುಮಾಡಿ ಕಟ್ಟಿಸಿರತಕ್ಕ ಮನೆಯನ್ನು ನೋಡಿದರೆ, ಅದಕ್ಕೆ ಒಂದು ಸಾವಿರ ರೂಪಾಯಿ ಕೂಡ ಬೆಲೆ ಆಗುವುದಿಲ್ಲ. ಆ ಬಗ್ಗೆ ಹಣ

ಎಲ್ಲಿ ಹೋಗುತ್ತದೆ ಎಂದು ನೋಡಿದರೆ ಆ ಮನೆಗಳನ್ನು ಕಟ್ಟಿಸಲಿಕ್ಕೆ ಯಾರು ಜವಾಬ್ದಾರಿ ವಹಿಸಿಕೊಂಡಿರುತ್ತಾರೋ ಆ ಮಧ್ಯವರ್ತಿ ಜನಗಳ ಪಾಲಿಗೆ ಹೋಗುತ್ತದೆ. ಈ ದಿವಸ ಆ ಹಣ ಯೂತ್ ಕಾಂಗ್ರೇಸ್‌ನವರಿಗೆ, ಪ್ರಾಯಕ್ಕೆ ಬಂದಂತ ಕಾಂಗ್ರೆಸ್‌ನವರ ಪಾಲಿಗೆ ಹೋಗುತ್ತದೆ. ಇವೊತ್ತು ಬಡ ಜನತೆಗೆ ಮನೆಗಳನ್ನು ಕಟ್ಟಿಸಿಕೊಡುತ್ತೇವೆ ಎನ್ನುವುದನ್ನು ಪದೇ ಪದೇ ಹೇಳಿಕೊಂಡು ಇವರು ಮಾಡುತ್ತಾ ಇರುವುದು ಮೋಸ. ಈ ಮೋಸ, ಎನ್ನತಕ್ಕದ್ದು ಜನತಾ ಮನೆಗಳ ಹೆಸರಿನಲ್ಲಿ ನಡೆಯುತ್ತಾ ಇದೆ. ನೆನ್ನೆ ದಿವಸ ಈ ಮಿಸಾ ಬಗ್ಗೆ ಮಾತನಾಡಿದ್ದೇನೆ. ಇವೊತ್ತು ಜನತಾ ಮನೆಗಳ ಬಗ್ಗೆ ಮಾತನಾಡಬೇಕಾಗಿದೆ.

ಈ ಮನೆಗಳಿಂದ ಲಾಭ ಪಡೆಯಬೇಕು ಎಂದು ಹೇಳತಕ್ಕ ಜನರು ವಂಚಕರಾಗುತ್ತಿದ್ದಾರೆ. ಇವೊತ್ತು ಈ ವಂಚನೆ ಮಾಡುತ್ತಾ ಇರತಕ್ಕ ಜನರು ಯಾರು ಎಂದು ಪತ್ತೆ ಮಾಡಬೇಕಾಗುತ್ತದೆ. ಈ ಕೆಲಸದಲ್ಲಿ ಕೆಲವು ಮಧ್ಯಮವರ್ತಿಗಳು ಸೇರಿಕೊಂಡಿದ್ದಾರೆ. ಇವೊತ್ತು ಸೈಟುಗಳನ್ನು ಹಂಚಿರತಕ್ಕ ಅನೇಕ ಕಡೆಗಳಲ್ಲಿ ಹೌಸ್ ಸೈಟುಗಳು ಎಲ್ಲಿದೆ ಎಂದು ಸೈಟುಗಳನ್ನು ಕೊಟ್ಟವರಿಗೂ ಗೊತ್ತಿಲ್ಲ, ಅದನ್ನು ತೆಗೆದುಕೊಂಡವರಿಗೂ ಗೊತ್ತಿಲ್ಲ. ಆದರೆ ಪೇಪರ್‌ಗಳಲ್ಲಿ ಮಾತ್ರ ಲಕ್ಷಾವಧಿ ಸೈಟುಗಳನ್ನು ಹಂಚಿದ್ದೇವೆ ಎಂದು ಹೇಳಿರತಕ್ಕದ್ದು ಬಂದಿದೆ. ಬಡ ಜನರಿಗೆ ನಿವೇಶನಗಳನ್ನು ಹಂಚಿದ್ದೇವೆ ಎಂದು ಕಾಗದದಲ್ಲಿ ಮಾತ್ರ ದಾಖಲೆ ಕೊಟ್ಟಿದ್ದಾರೆ. ಆದರೆ ಅವರುಗಳಿಗೆ ಆ ಸೈಟು ಎಲ್ಲಿ ಇದೆ ಎಂದು ಗೊತ್ತಿಲ್ಲ. ಅವರು ಕೊಟ್ಟಿರತಕ್ಕ ಪೇಪರ್ ಮೇಲೆಯೇ ತಮ್ಮ ಮನೆಗಳನ್ನು ಕಟ್ಟಿಕೊಳ್ಳಬೇಕಾಗಿದೆ. ಇನ್ನು ನಮ್ಮ ವಿರಾಜಪೇಟೆಯ ಬಗ್ಗೆ ಹೇಳಬೇಕು ಎಂದಲ್ಲಿ ಅಲ್ಲಿ ಕಳೆದ ವರ್ಷ ಕಟ್ಟಿದಂತಹ ಮನೆಗಳು ಒಂದೂ ಇಲ್ಲ. ಅಲ್ಲಿ ಯಾರು, ಒಬ್ಬರು ಏಜೆಂಟರು ಇದ್ದಾರೆ ಅವರ ಮನೆ ನೋಡಬಹುದು.

**ಶ್ರೀ ಆರ್. ಗುಂಡೂರಾವ್:** ಮಾನ್ಯ ಸುಬ್ಬಯ್ಯನವರಿಗೆ ಮನೆಗಳು ಎಲ್ಲಿ ಇವೆ ಎಂದು ಗೊತ್ತಿಲ್ಲ, ಅವರು ನನ್ನ ಜೊತೆಯಲ್ಲಿ ಬಂದರೆ ಮನೆಗಳು ಎಲ್ಲಿ ಇವೆ ಎಂದು ತೋರಿಸುತ್ತೇನೆ.

**ಶ್ರೀ ಎ.ಕೆ. ಸುಬ್ಬಯ್ಯ:** ಸ್ವಾಮಿ, ನಾವು ಕೆಲವು ಪ್ರಕರಣಗಳನ್ನು ಬೆಳಕಿಗೆ ತಂದಾಗ ಅದನ್ನು ಸ್ಫೂರ್ತಿಯಾಗಿ ಸ್ವೀಕಾರ ಮಾಡಿ, ಅಲ್ಲಿ ಆಗಿರತಕ್ಕಂತಹ ತಪ್ಪುಗಳನ್ನು ತಿದ್ದುವುದಕ್ಕೆ ಪ್ರಯತ್ನ ಮಾಡಬೇಕು. ನಾವು ಇದನ್ನು ಹೇಳುವುದು ತಪ್ಪು ಎಂದು ಹೇಳುವುದಾದರೆ ಅದರಲ್ಲಿ ಅವರು ಪಾಲುದಾರರು ಎಂದು ಅಭಿಪ್ರಾಯಕ್ಕೆ

ಬರಬೇಕಾಗುತ್ತದೆ. ನಮ್ಮ ಪುತ್ತೂರು ತಾಲೋಕಿನಲ್ಲಿ ಚುನಾವಣೆ ನಡೆಯುತ್ತಿದ್ದಾಗ ಒಂದು ಪ್ರಕರಣ ಬೆಳಕಿಗೆ ಬಂತು. ಅಲ್ಲಿ ಹರಿಜನರಿಗೆ ಸಾಲ ಕೊಡುವಾಗ ಅವರ ಹೆಬ್ಬೆಟ್ಟಿನ ಗುರುತನ್ನು ಪಡೆದು ಬೇರೆ ಯಾರೋ ಹಣನ್ನು ಪಡೆದಿದ್ದಾರೆ. ಇವೊತ್ತು ಓಲ್ಡ್ ಏಜ್ ಪೆನ್‌ಷನ್ ಪಡೆಯುವಾಗ ಹರಿಜನರ ಹೆಬ್ಬೆಟ್ಟಿನ ಗುರುತನ್ನು ಪಡೆದು ಆ ಹಣವನ್ನು ಬೇರೆ ಯಾರೋ ತೆಗೆದುಕೊಳ್ಳುತ್ತಿದ್ದಾರೆ. 500 ವರ್ಷಗಳ ಹಿಂದೆ ಹರಿಜನರು, ಯಾವ ಸ್ಥಿತಿಯಲ್ಲಿ ವಾಸ ಮಾಡುತ್ತಿದ್ದರೋ ಇವೊತ್ತು ಅದೇ ಸ್ಥಿತಿಯಲ್ಲಿ ವಾಸ ಮಾಡುತ್ತಿದ್ದಾರೆ. ಅವರು ಇವೊತ್ತಿಗೂ ಅದೇ ಸ್ಥಿತಿಯಲ್ಲಿ ಇರುವುದರಿಂದಲೇ ನಿಮಗೆ ಓಟು ಕೊಟ್ಟಿರುವುದು. ನಮ್ಮ ಪುತ್ತೂರು ತಾಲೋಕಿನಲ್ಲಿ ನಡೆದಿರತಕ್ಕದ್ದನ್ನು ವೆರಿಫೈ ಮಾಡಿದರೆ ತಮಗೆ ಅರ್ಥವಾಗುತ್ತದೆ. ಅಲ್ಲಿ ಕೆಲವು ಜನರು "ನಮ್ಮ ಹೆಬ್ಬೆಟ್ಟು ಗುರುತನು" ತೆಗೆದುಕೊಂಡು ಬೇರೆ ಯಾರೋ ಹಣ ತೆಗೆದುಕೊಂಡು ಹೋಗಿದ್ದಾರೆ ಎಂದು ಕೋರ್ಟಿನಲ್ಲಿ ದಾವಾಹಾಕಿದ್ದಾರೆ ಮನೆ ಕಟ್ಟಿಸುವ ಹೆಸರಿನಲ್ಲಿ, ಸಾಲ ಕೊಡುವ ಹೆಸರಿನಲ್ಲಿ, ಚುನಾವಣೆಯಲ್ಲಿ ಓಟನ್ನು ಪಡೆದುಕೊಳ್ಳುವುದಕ್ಕೋಸ್ಕರ "ದೊಂಬರಾಟ" ಮಾಡಿ ದುಡ್ಡನ್ನು ಮಾಡಿದ್ದಾರೆ. ನಿಜವಾಗಿ ಯಾರಿಗೆ ಆ ಹಣ ತಲುಪುಬೇಕಾಗಿತ್ತೋ ಅದು ತಲುಪಿತು. ಇಷ್ಟು ಮಾತ್ರ ಖಂಡಿತ.

# 150 ದಿನಗಳ ನಂತರ ಬಜೆಟ್ ಚರ್ಚೆ ಮಾಡುವುದೆಂದರೆ ಅದರ ಶವ ಸಂಸ್ಕಾರ ಮಾಡಿದಂತೆ

**3ನೇ ಜುಲೈ 1980**

**ಶ್ರೀ ಎ.ಕೆ. ಸುಬ್ಬಯ್ಯ (ಪದವೀಧರ ಕ್ಷೇತ್ರ):** ಮಾನ್ಯ ಸಭಾಧ್ಯಕ್ಷಿಣಿಯವರೆ, 1980–81ನೇ ಸಾಲಿನ ಆಯವ್ಯಯದ ಬಗ್ಗೆ ನಾವು ಚರ್ಚೆ ಮಾಡುತ್ತಿದ್ದೇವೆ. ಈ ಆಯವ್ಯಯದ ಮಂಡನೆ ಕಳೆದ ಮಾರ್ಚ್ ತಿಂಗಳಿನಲ್ಲಿ 10ನೇ ತಾರೀಖು ಆಯಿತು. ಈಗ ಜುಲೈ ತಿಂಗಳು ಬಂದಿದೆ. ಜುಲೈ ತಿಂಗಳಲ್ಲಿ ಇದರ ಬಗ್ಗೆ ನಾವು ಚರ್ಚೆ ಮಾಡುತ್ತಿದ್ದೇವೆ. ಆದುದರಿಂದ ಇದನ್ನು ಆಯವ್ಯಯ ಚರ್ಚೆ ಎಂದು ಹೇಳುವುದರ ಬದಲು ಎಲ್ಲಾ ವರ್ಷದ ಆಯವ್ಯಯದ ಶವ ಸಂಸ್ಕಾರವನ್ನು ನಾವು ಈ ಸದನದಲ್ಲಿ ಮಾಡುತ್ತಿದ್ದೇವೆ ಎನ್ನುವ ಮಾತು ಬಹಳ ಅರ್ಥಪೂರ್ಣವಾಗಿರುತ್ತದೆ. ಈಗ ಚರ್ಚೆ ಮಾಡುವುದು ಅರ್ಥಹೀನ. ಈ ಸದನಕ್ಕೇ ಅಲ್ಲ ನಮ್ಮ ರಾಜ್ಯದ ಶಾಸನಸಭೆಯನ್ನೇ ಒಂದು ಅರ್ಥಹೀನವನ್ನಾಗಿ ಸರ್ಕಾರದವರು ಪರಿವರ್ತನೆ ಮಾಡಿದ್ದಾರೆ. ನಾಲ್ಕನೇ ಬಾರಿ ನಾವು ಇಲ್ಲಿ ಸೇರುತ್ತಿದ್ದೇವೆ. ಈ ಹಿಂದೆ 3 ಬಾರಿ ಸಭೆ ಸೇರಿದ್ದೆವು. ಕಳೆದ ಮೂರು ಬಾರಿಯೂ ನಾವು ಸಂತಾಪ ಸೂಚಕಗಳನ್ನು ಮಾಡುವುದಕ್ಕಾಗಿಯೇ ಸಭೆ ಸೇರಿದ್ದೆವು. ನಮ್ಮ ಸಂತಾಪಗಳನ್ನು ಸೂಚಿಸಿದೆವು. ಆ ನಂತರ ಸಭೆಯು ಮುಗಿಯುತ್ತಿತ್ತು. ಸಾರ್ವಜನಿಕರ ಸಮಸ್ಯೆಗಳ ಬಗ್ಗೆ, ಪೊಲೀಸರ ಬೆತ್ತದೇಟಿನಿಂದ ಕೈಕಾಲು ಮುರಿಸಿಕೊಂಡ ಪ್ರಜೆಗಳ ಬಗ್ಗೆ, ಹರಿಜನರು ದೌರ್ಜನ್ಯಕ್ಕೆ ಒಳಗಾದುದರ ಬಗ್ಗೆ, ದುರ್ಬಲ ವರ್ಗದವರ ಶೋಷಣೆ ಬಗ್ಗೆ, ಹರಿಜನ ಮಹಿಳೆಯ ಮಾನಾಪಹರಣ ಮಾಡಿದ ಬಗ್ಗೆ ಇಂತಹ ಅನೇಕ ಸಮಸ್ಯೆಗಳ ಬಗ್ಗೆ ಈ ವರ್ಷ ಈ ಸದನದಲ್ಲಿ ಮಾತನಾಡುವುದಕ್ಕೆ ಅವಕಾಶ ಸಿಗಲಿಲ್ಲ. ದುರ್ಬಲವರ್ಗದವರ ಸಮಸ್ಯೆಯನ್ನು ಹೋಗಲಾಡಿಸಲು ಅವರ ಲೀಡರ್‌ಗಳು ಹೋರಾಟ ಮಾಡುವ ಶಕ್ತಿಯನ್ನು ಕಳೆದುಕೊಂಡಿರುತ್ತಾರೆ. ಅವರು ಹೋರಾಟ ಮಾಡಲು ಶಕ್ತಿ ಇಲ್ಲದಂತಾಗಿದೆ. ಆದ್ದರಿಂದ ಶಾಸನ ಸಭೆಗಳ ಬಗ್ಗೆ, ಸದಸ್ಯರ ಬಗ್ಗೆ, ಜನಗಳಿಗೆ ವಿಶ್ವಾಸ ಹೋಗಿಬಿಟ್ಟಿದೆ. ಶಾಸನ ಸಭೆಗಳು ಏನು ಕೆಲಸವನ್ನು ಮಾಡಬೇಕಾಗಿತ್ತೋ ಆ ಕೆಲಸಗಳನ್ನು ಪತ್ರಿಕೆಗಳವರು ಮಾಡುತ್ತಿದ್ದಾರೆ. ಪೊಲೀಸಿನವರು ಒಬ್ಬ ಬಾಲಕನನ್ನು ಅನ್ಯಾಯವಾಗಿ ಹಿಡಿದುಕೊಂಡು ಹೋಗಿ ಚಿತ್ರಹಿಂಸೆಯನ್ನು ಕೊಟ್ಟಿದ್ದು, ಒಬ್ಬ ಹೆಣ್ಣುಮಗಳಿಗೆ ಆ್ಯಸಿಡ್ ಸುರಿದು ಕೊಂದು ಹಾಕಿದ್ದು, ಒಬ್ಬರಿಗೆ ಗುಂಡು ಹಾಕಿದ್ದು, ಭದ್ರಾವತಿಯಲ್ಲಿ

ಕೃಷ್ಣನನ್ನು ಕೊಲೆ ಮಾಡಿದ್ದು, ಮನುಷ್ಯನ ಮೂಳೆಹೋಗಿ ದನದ ಮೂಳೆಯಾದದ್ದು ಇವೆಲ್ಲವೂ ಪತ್ರಿಕೆಯಲ್ಲಿ ಬಂದಿರುವುದನ್ನು ನೋಡಿಕೊಂಡು ನಾವು ಈ ಸದನದಲ್ಲಿ ಪ್ರಸ್ತಾಪ ಮಾಡುವುದೆಂದರೆ ಜೀವನದಲ್ಲಿ ನಾವು ಎಷ್ಟರಮಟ್ಟಿಗೆ ಹೀನಾಯವಾದ ಪರಿಸ್ಥಿತಿಯಲ್ಲಿದ್ದೇವೆಂಬುದನ್ನು ಹೇಳಬೇಕಾಗುತ್ತದೆ. ಈ ಸಮಸ್ಯೆಗಳನ್ನು ಶಾಸಕರಾದ ನಮ್ಮ ಹತ್ತಿರ ಜನತೆ ತರಬೇಕಾಗಿತ್ತು. ಅದನ್ನು ನಾವು ಪ್ರಸ್ತಾಪ ಮಾಡಬೇಕಾಗಿತ್ತು. ಆನಂತರ ಅವು ಪತ್ರಿಕೆಗಳಿಗೆ ಹೋಗಬೇಕಾಗಿತ್ತು. ಆ ರೀತಿಯಾಗುತ್ತಿಲ್ಲ. ಜನರಿಗೂ ತಿಳಿಯುತ್ತದೆ. ಅವರಿಂದ ಯಾವ ಪರಿಹಾರವೂ ದೊರಕುವುದಿಲ್ಲ ಎನ್ನುವ ಭಾವನೆ ಉಂಟಾಗಿರುವುದರಿಂದ ಆಗುತ್ತಿರುವ ಅನ್ಯಾಯ, ಅಕ್ರಮ ಅನಾಹುತಗಳನ್ನು ಜನರು ಹೇಳಿಕೊಳ್ಳಲು ನೇರವಾಗಿ ಪ್ರಜಾವಾಣಿ, ಕನ್ನಡಪ್ರಭಾ ಕಾರ್ಯಾಲಯಗಳಿಗೆ ಹೋಗುತ್ತಿದ್ದಾರೆ. ಪೆರುಮಾಳ್, ಎ.ಕೆ. ಸುಬ್ಬಯ್ಯ ಇವರ ಹತ್ತಿರ ಬರುವುದೇ ಇಲ್ಲ. ಮೂರು ನಾಲ್ಕು ಜನರು ಸತ್ತರು ಎಂದು ಸಂತಾಪ ಸೂಚಿಸುವುದು ಮತ್ತೆ ಅಲ್ಲಿಂದ ಎದ್ದು ಹೋಗುವುದು, ಭಸ್ಮ ವಿಸರ್ಜನೆ ಮಾಡುವುದು ಮತ್ತೆ ಸೇರುವುದು ಇದು ಈ ಪದ್ಧತಿ ಇಲ್ಲಿದೆ. ವಿಧಾನಸಭೆಗೆ, ವಿಧಾನಪರಿಷತ್ತಿಗೆ ಹೊಸ ಸರ್ಕಾರ ಬಂದಮೇಲೆ ನಾವು ಈ ಚರ್ಚೆಗೆ ಸೇರುತ್ತಿರುವುದೇ ಬಹಳ ಅಪರಾಧ. ಶಾಸನ ಸಭಾ ಸದಸ್ಯರು ಸ್ವಲ್ಪ ಅರ್ಥಪೂರ್ಣವಾಗಿ ಕೆಲಸ ಮಾಡುವ ಹಾಗೆ ಆಗಬೇಕು. ಶಾಸನಸಭೆಯಲ್ಲಿ ದಿನನಿತ್ಯ ಸಾರ್ವಜನಿಕರ ಸಮಸ್ಯೆಗಳನ್ನೇ ಬಗೆಹರಿಸುವತ್ತ ಪ್ರಭಾವಿಯುತವಾಗಿ ಕೆಲಸ ಮಾಡುವುದಾದರೆ ಸಾರ್ವಜನಿಕರಿಗೆ ಆಗುವ ಅನೇಕ ಕಷ್ಟನಷ್ಟಗಳನ್ನು ನಿವಾರಣೆ ಮಾಡಲು ಸಾಧ್ಯವಾಗುತ್ತದೆ. ಕೊನೇಪಕ್ಷ ಶಾಸನ ಸಭೆ ನಡೆಯುವಾಗಲಾದರೂ ಅಕ್ರಮಗಳು ಅನಾಹುತಗಳು ನಡೆಯುವುದಾದರೂ ನಿಲ್ಲುತ್ತದೆ. ರಾಜಸ್ಥಾನದಲ್ಲಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್‌ನವರು ಇತ್ತೀಚೆಗೆ ಪೊಲೀಸ್ ಅಧಿಕಾರಿಗಳ ಸಭೆಯೊಂದನ್ನು ಕರೆದಿದ್ದರು. ಆ ಸಂದರ್ಭದಲ್ಲಿ ಭಾಷಣವನ್ನು ಮಾಡಿದರು. ಅದರ ಹಿನ್ನೆಲೆ ಏನು ಎಂದರೆ ರಾಜಸ್ಥಾನದ ಒಂದು ಪೊಲೀಸ್ ಠಾಣೆಯಲ್ಲಿ ಪೊಲೀಸ್ ಪೇದೆಗಳು ಒಬ್ಬ ಮಹಿಳೆಯ ಮಾನಭಂಗಮಾಡಿದ್ದರು. ಆಗ ಅಧಿವೇಶನ ನಡೆಯುತ್ತಿತ್ತು. ಇದು ಮಹಿಳೆಯ ಮಾನಭಂಗವಾದದ್ದರಿಂದ ವಿಧಾನಸಭೆಯಲ್ಲಿ ಪ್ರಸ್ತಾಪಕ್ಕೆ ಬಂದಿತ್ತು. ಅದಕ್ಕೆ ರಾಜಸ್ಥಾನದ ಪೊಲೀಸ್ ಅಧಿಕಾರಿಗಳಾದ ಐ.ಜಿ.ಪಿ. ಯವರು ದಯವಿಟ್ಟು ಇನ್ನು ಮೇಲೆ ವಿಧಾನ ಸಭೆಯು ನಡೆಯುವಾಗ ಮಹಿಳೆಯರ ಮಾನಭಂಗ ಪೊಲೀಸ್ ಸ್ಟೇಷನ್‌ನಲ್ಲಿ ಮಾಡಬೇಡಿ ಎಂದು ಹೇಳಿದರಂತೆ. ಅಂದರೆ ವಿಧಾನ ಸಭೆ ನಡೆಯುವಾಗಲಾದರೂ ರಕ್ಷಣೆ

ಕೊಡುವುದಾದರೆ ಅಷ್ಟಾದರೂ ಸಾರ್ವಜನಿಕರಿಗೆ ಸಾಕು. ಅದಕ್ಕೋಸ್ಕರ ವಿಧಾನಸಭೆಗಳು ನಡೆಯುವಾಗ ಅರ್ಥಪೂರ್ಣವಾಗಿ ನಡೆಯುವಂಥ ವ್ಯವಸ್ಥೆಯಾಗಬೇಕು. ಈಗ ರಾಜಕೀಯ ವಾತಾವರಣ ಬದಲಾವಣೆಯಾಗುತ್ತಿದೆ. ಅರ್ಥ ಪೂರ್ಣವಾಗಿ ಕೆಲಸ ಮಾಡುವ ಆಸೆ ಕಣ್ಣಿಗೆ ಎದ್ದು ಕಾಣುತ್ತಿದೆ. ಅದಕ್ಕಾಗಿ ಒಂದು ಸಂತೋಷವಾದ ಸಂಗತಿ ಎಂದರೆ ಇಷ್ಟೊಂದು ಕಾಲ, ಹಣ ಇಷ್ಟೊಂದು ಅರ್ಥಹೀನವಾದಂಥ ಸಭೆಗಳನ್ನು ನಡೆಸುವುದು ವ್ಯರ್ಥ. ಅದರ ಬದಲು ಇಂಥ ಸಭೆಗಳನ್ನು ನಿಲ್ಲಿಸುವುದೇ ಒಳ್ಳೆಯದು. 150 ದಿವಸಗಳ ನಂತರ ನಾವು ಬಜೆಟ್ ಚರ್ಚೆ ಮಾಡುವುದು ಎಂದರೆ ಅದರ ಶವ ಸಂಸ್ಕಾರ ಮಾಡಿದ ಹಾಗೆ ಆಗಿದೆ. ನಮ್ಮ ಆಯವ್ಯಯ ಶವ ಸಂಸ್ಕಾರದ ಪೂರ್ವ ವಿಧಿಯನ್ನು ಪ್ರಾರಂಭ ಮಾಡುತ್ತಿದ್ದೇವೆ. ಮಾನ್ಯ ಅರ್ಥಸಚಿವರು ಎಲ್ಲಿ ಭಾಷಣ ಮಾಡುತ್ತಿದ್ದಾರೆಂದು ಇಲ್ಲಿ ಕೇಳಿದರೆ ಕೆಳಮನೆಯಲ್ಲಿ ಎಂದು ಹೇಳುವುದು, ಅಲ್ಲಿ ಕೇಳಿದರೆ ಮೇಲ್‌ಮನೆಯಲ್ಲಿ ಭಾಷಣ ಮಾಡುತ್ತಿದ್ದಾರೆಂದು ಹೇಳುತ್ತಾರೆ. ಆದರೆ ಅವರು ನಿಜವಾಗಿಯೂ ಇರುವುದು ನಡುಮನೆಯಲ್ಲಿ.......

**ಶ್ರೀ ಟಿ.ಎ. ರೆಡ್ಡಿ:** ಅವರು ಅಲ್ಲಿಯೂ ಇಲ್ಲದೆ ವಾಕ್‌ಔಟ್ ಆಯಿತು.

**ಶ್ರೀ ಎ.ಕೆ. ಸುಬ್ಬಯ್ಯ:** ಈ ಭಾಷಣದ 2ನೇ ಪ್ಯಾರದಲ್ಲಿ ಈ ರೀತಿ ಹೇಳಿದ್ದಾರೆ.

"ಶ್ರೀಮತಿ ಇಂದಿರಾಗಾಂಧಿ ಅವರ ನೇತೃತ್ವದಲ್ಲಿ ನಮ್ಮ ಪಕ್ಷವು ಭಾರಿ ಬಹುಮತದಿಂದ ಜಯಗಳಿಸಿದ ಆನಂತರ, ಹೊಸ ಸರ್ಕಾರವು ಇತ್ತೀಚೆಗೆ ಅಧಿಕಾರ ವಹಿಸಿಕೊಂಡಿದೆ".

ಅಂದರೆ ಇದು ಯಾವ ಸರ್ಕಾರ, ಹೊಸ ಸರ್ಕಾರ ಡೆಲ್ಲಿಯಲ್ಲಿದೆಯೋ, ಅಥವಾ ಇಲ್ಲಿದೆಯೋ ಯಾವುದೂ ಸ್ಪಷ್ಟವಾಗಿ ಗೊತ್ತಾಗುತ್ತಿಲ್ಲ. ಅಲ್ಲಿ ಇಂದಿರಾಗಾಂಧಿಯವರು ಗೆದ್ದಿದ್ದರಿಂದ ಇಲ್ಲಿ ಹೊಸ ಸರ್ಕಾರ ವಹಿಸಿಕೊಂಡಿದೆ ಎಂದು ಯಾವ ಲಜ್ಜೆಗೂ ಆಸ್ಪದ ಇಲ್ಲದೆ ಹೇಳಿಕೊಂಡಿದ್ದಾರೆ. ಲೋಕಸಭೆಯಲ್ಲಿ ಚುನಾವಣೆ ನಡೆದರೆ ಇಲ್ಲಿ ಏತಕ್ಕೆ ಹೊಸ ಸರ್ಕಾರ ಅಧಿಕಾರ ವಹಿಸಿಕೊಳ್ಳಬೇಕು? ಚುನಾವಣೆ ಆದುದು ಲೋಕಸಭೆಗೆ. ಇಲ್ಲಿ ಹೊಸ ಸರ್ಕಾರ ಅಧಿಕಾರ ವಹಿಸಿಕೊಂಡಿದೆ ಎಂದು ಏತಕ್ಕೆ ಹೇಳಬೇಕು? ಏತಕ್ಕೆ ಹೊಸ ಸರ್ಕಾರ? ಯಾರೋ ಮಹಿಳೆಯೊಬ್ಬರು ಮಂತ್ರಿಯಾಗಿದ್ದಾಗ ಪ್ರಮಾಣವಚನ ಸ್ವೀಕಾರ ತೆಗೆದುಕೊಳ್ಳಲಿಕ್ಕೆ ಗಂಡ ರಾಜಭವನಕ್ಕೆ

ಹೋಗಿದ್ದರಂತೆ, ಮಂತ್ರಿಯಾದುದು ಹೆಂಡತಿ ಆದರೆ ಪ್ರಮಾಣ ವಚನ ತೆಗೆದುಕೊಳ್ಳುವುದಕ್ಕೆ ಗಂಡ ಹೋಗುವುದು. ಒಬ್ಬ ಅಭ್ಯರ್ಥಿ ಇಂಟರ್‌ವ್ಯೂಗೆ ಹೋಗಿದ್ದನಂತೆ, ಆಗ ನಿನ್ನ ಕ್ವಾಲಿಫಿಕೇಶನ್ ಏನು ಎಂದು ಕೇಳಿದ್ದಕ್ಕೆ ನನ್ನ ಹೆಂಡತಿಯ ಕ್ವಾಲಿಫಿಕೇಶನ್ ಬಿ.ಎ. ಎಂದು ಹೇಳಿದನಂತೆ. ಇದು ಈ ರೀತಿಯಾಗಿದೆ. ಶ್ರೀಮತಿ ಇಂದಿರಾಗಾಂಧಿಯವರ ನೇತೃತ್ವದಲ್ಲಿ ಹೊಸ ಸರ್ಕಾರ ಅಧಿಕಾರಕ್ಕೆ ಬಂದಿದೆ ಎಂದು ಇದರಲ್ಲಿ ಹೇಳಿದ್ದಾರೆ. ಇದರಿಂದ ಏನಾಗಿದೆ ಎಂದರೆ ರಾಜಕಾರಣಿಗಳನ್ನು ಕಸಕ್ಕಿಂತ ಕಡೆಯಾಗಿ ಕಾಣುವಂಥ ಪರಿಸ್ಥಿತಿ ಈ ರಾಜ್ಯದಲ್ಲಿ ಉಂಟಾಗಿರುವುದು ಹೆಮ್ಮೆಯ ಸಂಗತಿಯೇ? ಲೋಕಸಭೆಯ ಚುನಾವಣೆ ಫಲಿತಾಂಶ ಹೊರಬಿದ್ದ ಮೇಲೆ ಏನಾಯಿತು ಎಂಬುದನ್ನು ತಾವು ತಿಳಿದುಕೊಳ್ಳಬೇಕು. ಮೊದಲು ದೇವರಾಜ ಅರಸ್‌ರವರ ಸರ್ಕಾರ ಇತ್ತು. ಆಗ ಶ್ರೀ ದೇವರಾಜ ಅರಸ್‌ರವರನ್ನು ಇಂದ್ರ-ಚಂದ್ರ ಎಂದು ಹೊಗಳುತ್ತಿದ್ದ ಭಟ್ಟಂಗಿಗಳು ಫಲಿತಾಂಶ ಹೊರಬಿದ್ದ ತಕ್ಷಣವೇ ಎಲ್ಲಾ ಕ್ಯೂನಲ್ಲಿ ನಿಂತು ಧೋತಿ ಪಂಚೆ ಸರಿ ಮಾಡಿಕೊಂಡು ನಾಮುಂದು, ನೀಮುಂದು, ಎಂದು ಶ್ರೀಮತಿ ಇಂದಿರಾಗಾಂಧಿಯವರ ಪಕ್ಷಕ್ಕೆ ಸೇರಿದರು. ರಾಜಕೀಯದಲ್ಲಿ ಭ್ರಷ್ಟಾಚಾರ, ಅನೀತಿ, ಅವ್ಯವಹಾರಗಳಿಂದ ಸರ್ಕಾರವನ್ನು ರಚಿಸಿದರು. ಈ ಸರ್ಕಾರವು ಪಕ್ಷಾಂತರಗಳಿಂದ, ಪಕ್ಷಾಂತರಿಗಳನ್ನು ಸೇರಿಸಿಕೊಂಡು ರಾಜಕೀಯದಲ್ಲಿ ಹೊಸ ಅಧ್ಯಾಯವನ್ನು ತೆರೆದು ಮಾನ ಮರ್ಯಾದೆ ಉಳ್ಳವರು ರಾಜಕೀಯದಲ್ಲಿ ಉಳಿಯಬಾರದು ಎನ್ನುವ ಸ್ಥಿತಿಗೆ ತಂದಿದ್ದಾರೆ. ಇದೇ ಹೊಸ ಸರ್ಕಾರದ ನಿರ್ಮಾಣ. ಈಗ ಏನಾಗಿದೆ ಎಂದರೆ ಪ್ರಾರಂಭವೇ ಅನೀತಿಯಿಂದ ಆಗಿದೆ. ಈ ಸರ್ಕಾರದ ಅಡಿಪಾಯವೇ ಅನೀತಿ. "ನಿಮ್ಮದು ಕೈ, ಕೈ ಕೈ ಹಿಡಿದುಕೊಂಡು "ತಕತೈ" ಎಂದು ಕುಣಿಯೋಣ" ಎನ್ನುವ ರೀತಿಯಲ್ಲಿ ಆಗಿದೆ. 1978ನೇ ಇಸವಿಯಲ್ಲಿ ವಿಧಾನಸಭೆಗೆ ಚುನಾವಣೆ ನಡೆಯಿತು. ಆಗ ನಾನು ಒಬ್ಬ ಅಭ್ಯರ್ಥಿ, ಈಗಿನ ಮುಖ್ಯಮಂತ್ರಿಗಳಾದ ಶ್ರೀಮಾನ್ ಗುಂಡೂರಾಯರು ಸೋಮವಾರ ಪೇಟೆಯಿಂದ ನಿಂತಿದ್ದರು. ಅಲ್ಲಿ ಆಗ ಬಟ್ಟೆಯಲ್ಲಿ, ವಾಲಪೋಸ್ಟರ್ಸ್‌ನಲ್ಲಿ, ಬ್ಯಾನರ್ಸ್‌ನಲ್ಲಿ ಏನು ಬರೆದಿದ್ದರು : ಮಡಿಕೇರಿ ಕ್ಷೇತ್ರದಲ್ಲಿ ನಾನು ನಿಂತಿದ್ದೆ. ಶ್ರೀಮಾನ್ ನಾಣಯ್ಯನವರು ನನ್ನ ವಿರುದ್ಧವಾಗಿ ಇಂದಿರಾ-ಅರಸ್ ಕಾಂಗ್ರೆಸ್ ಅಭ್ಯರ್ಥಿಯಾಗಿ ನಿಂತಿದ್ದರು. ಎಲ್ಲಾ ಬೀದಿಗಳಲ್ಲೂ ಪೋಸ್ಟರ್‌ಗಳಲ್ಲೂ ಏನು ಬರೆದಿದ್ದರು ಎಂದರೆ ಇಂದಿರಾ ಅರಸ್ ಕಾಂಗ್ರೆಸ್ ಅಭ್ಯರ್ಥಿ ಶ್ರೀಮಾನ್ ಗುಂಡೂರಾವ್ ಎಂದು ಬರೆದಿದ್ದರು. ಒಂದು ಭಾಷಣದಲ್ಲಿ ಇಬ್ಬರೂ ಅಭ್ಯರ್ಥಿಗಳು ಭಾಷಣ ಮಾಡಿದೆವು. ಆ ಭಾಷಣದಲ್ಲಿ

ಇಂದಿರಾ ಅರಸ್ ಕಾಂಗ್ರೆಸ್ ಅಭ್ಯರ್ಥಿ ನಾಣಯ್ಯನವರೆ ಎಂದು ಸಂಬೋಧನೆ ಮಾಡಿದ್ದೆವು.

**ಶ್ರೀ ಟಿ.ಎ. ರೆಡ್ಡಿ:** ಇಂದಿರಾ ಅರಸ್ ಕಾಂಗ್ರೆಸ್ ಕಥೆ ಇದರಲ್ಲಿ ಏತಕ್ಕೆ? ನಾವೂ ಅಲ್ಲಿಗೆ ಹೋಗಬೇಕೆಂದು ಹೇಳುತ್ತಿದ್ದೀರಾ?

**ಶ್ರೀ ಎ.ಕೆ. ಸುಬ್ಬಯ್ಯ:** ನೀವು ಅಲ್ಲೂ ಇರಬಾರದು, ಇಲ್ಲೂ ಇರಬಾರದು. ಈ ಕಾಂಗ್ರೆಸ್ (ಐ) ಪಕ್ಷ ಹೇಗಿದೆ ಅಂದರೆ ನೆಟ್ಟಗಿದ್ದರೆ (ಐ) ಬಗ್ಗಿಸಿದರೆ (ಯು) ಇದ್ದಂತೆ. ಮಾನ್ಯ ದೇವರಾಜ ಅರಸ್‌ರವರ ಸರ್ಕಾರ ಬಿದ್ದುಹೋಯಿತು. ಅನಂತರ ನೀವು ಯಾರ್‍ಯಾರನ್ನೋ ನಮ್ಮ ಪಕ್ಷಕ್ಕೆ ಸೇರಿಸಿಕೊಂಡು ಮಂತ್ರಿಗಳನ್ನಾಗಿ ಮಾಡಿದಿರಿ. ಈ ರೀತಿ ನಿಮ್ಮ ಸರ್ಕಾರವನ್ನು ರಚನೆ ಮಾಡಿದ ನಂತರ ನಾವು ಬಹಳ ಜನಪ್ರಿಯರು ಎಂದು ಹೇಳಿಕೊಳ್ಳುತ್ತಿದ್ದೀರಿ. ಅಷ್ಟೊಂದು ಜನಪ್ರಿಯತೆ ನಿಮಗೆ ಇದ್ದರೆ ಈ ವಿಧಾನ ಸೌಧಕ್ಕೆ ಏತಕ್ಕೆ ಬೇಲಿ ಕಟ್ಟಿಸುತ್ತಿದ್ದೀರಿ? ನಿಮ್ಮ ಸಭಾ ನಾಯಕರು ಇಲ್ಲಿ ಇದ್ದಿದ್ದರೆ ಹೇಳುತ್ತಿದ್ದೆ. ನಿನ್ನೆಯ ದಿವಸ ಅವರು ಸಂಸ್ಕೃತದ ಬಗ್ಗೆ ಬಹಳ ದೊಡ್ಡ ವ್ಯಾಖ್ಯಾನವನ್ನು ಮಾಡಿದ್ದಾರೆ. ಸಂಸ್ಕೃತವನ್ನು ಅರಮನೆಯಲ್ಲಿ ಕಟ್ಟಿ ಹಾಕಿದ್ದಾರೆಂದು ಹೇಳಿದರು. ಹಾಗಾದರೆ ನೀವು ವಿಧಾನ ಸೌಧಕ್ಕೆ ಏತಕ್ಕೆ ಬೇಲಿ ಹಾಕುತ್ತಿದ್ದೀರಿ? ನಿಮ್ಮ ವಿಧಾನ ಸೌಧದ ಸ್ಥಿತಿಗತಿಗಳನ್ನು ಇಲ್ಲಿ ನಡೆಯತಕ್ಕ ವ್ಯವಹಾರವನ್ನು ನೋಡುವುದಕ್ಕೆ ಜನಸಾಮಾನ್ಯರು ಬರಬಾರದೆ? ಹಿಂದೆ ಕುರುಡರು, ಕುಂಟರು, ದೀನದಲಿತರು ಈ ವಿಧಾನಸೌಧದ 3ನೇ ಅಂತಸ್ತಿಗೆ ಹೋಗಿ ಸಚಿವರುಗಳನ್ನು ಭೇಟಿ ಮಾಡಿ ತಮ್ಮ ಕುಂದುಕೊರತೆಗಳನ್ನು ಹೇಳಿಕೊಳ್ಳಲು ಅವಕಾಶವಿತ್ತು. ಅದನ್ನು ನಾವು ಮೇಲೆ ನಿಂತು ನೋಡುವುದಕ್ಕೆ ಒಂದು ಸಂತೋಷವಾಗುತ್ತಿತ್ತು. ಚಿಂದಿ ಬಟ್ಟೆ ಉಟ್ಟ ಬಡವರು ನಮ್ಮ ವಿಧಾನ ಸೌಧಕ್ಕೆ ಬರಬಾರದೆ? ಈ ವಿಧಾನ ಸೌಧಕ್ಕೆ ಯಾರು ಯಜಮಾನರು ಎಂಬುದು ತಮಗೆ ಗೊತ್ತೆ? ಶ್ರೀ ಕೆ. ಹನುಮಂತಯ್ಯನವರಾಗಲಿ, ನಿಜಲಿಂಗಪ್ಪನವರಾಗಲಿ, ದೇವರಾಜ ಅರಸ್‌ರವರಾಗಲಿ, ಗುಂಡೂರಾಯರಾಗಲಿ ಅಥವಾ ಶಾಸಕರಾಗಲಿ ಯಜಮಾನರಲ್ಲ; ತಮಗೆ ತಹಸೀಲ್ದಾರರಿಂದ ತೊಂದರೆಯಾಗುತ್ತದೆ, ಸ್ಕೂಲ್‌ನಲ್ಲಿ ನಮ್ಮ ಮಕ್ಕಳಿಗೆ ಸೀಟು ಸಿಕ್ಕುತ್ತಿಲ್ಲ ಗೂಂಡಾಗಳಿಂದ ನಮಗೆ ತೊಂದರೆಯಾಗುತ್ತದೆಂಬುದನ್ನು ಹೇಳಿಕೊಳ್ಳಲು ಬರತಕ್ಕ ದೀನದಲಿತರು, ಚಿಂದಿ ಉಟ್ಟ ಬಡಜನರು ಈ ವಿಧಾನ ಸೌಧದ ನಿಜವಾದ ಒಡೆಯರು. ನೀವು ಚುನಾವಣೆಯಲ್ಲಿ ಗೆದ್ದು ಬಂದಿರುವುದು ನಾನು ಆಗಲೇ

ಹೇಳಿದಂತೆ "ಮೈ ವೈಫ್ ಈಸ್ ಬಿ.ಎ." ಅನ್ನುವಂತೆ, ಪಾರ್ಲಿಮೆಂಟ್ ಚುನಾವಣೆಯಾದುದಕ್ಕೆ ಇಲ್ಲಿ ನೀವು ಅಧಿಕಾರಕ್ಕೆ ಬಂದಿರಿ. ಅವರ ಹೆಸರಿನ ಮೇಲೆ ನೀವು ಆಡಳಿತಕ್ಕೆ ಬಂದಿದ್ದೀರಿ. ಈಗ ಜನರಿಗೆ ಮುಖ ತೋರಿಸುವುದಕ್ಕೆ ನಾಚಿಕೆಯಾಗಿ ಜನರು ಒಳಗೆ ಬರುವುದನ್ನು ತಡೆಯುವುದಕ್ಕಾಗಿ ವಿಧಾನ ಸೌಧದ ಸುತ್ತಲೂ ಬೇಲಿ ಕಟ್ಟಿಸುತ್ತಿದ್ದೀರಾ? ನೀವು ಯಾವುದೇ ಕಾರಣದಿಂದಲೂ ಈ ವಿಧಾನ ಸೌಧದ ಬಾಗಿಲನ್ನು ಮುಚ್ಚಕೂಡದು, ಲಿಫ್ಟ್ ಮೂಲಕ ದೀನದಲಿತರು, ಕುರುಡರು, ಕುಂಟರು, ಅಂಗವಿಕಲರು ಈ ದೇಶದಲ್ಲಿ ಶೋಷಣೆಗೆ ಒಳಗಾದವರು ನೇರವಾಗಿ ವಿಧಾನ ಸೌಧಕ್ಕೆ ಬಂದು ಸಚಿವರನ್ನು ನೋಡುವುದಕ್ಕೆ ಅವಕಾಶವಿರಬೇಕು. ಆಗಲೇ ಇದು ನಿಜವಾದ ಪ್ರಜಾಪ್ರಭುತ್ವದ ರಾಜ್ಯವಾಗುವುದು.

# ಕನ್ನಡ ಚಿತ್ರಗಳಿಗೆ ತೆರಿಗೆ ವಿನಾಯಿತಿ ಕೊಡಬೇಕು

**3ನೇ ಜುಲೈ 1980**

**ಎ.ಕೆ. ಸುಬ್ಬಯ್ಯ :** 1980–81 ಆಯವ್ಯಯ ಪಟ್ಟಿಯಲ್ಲಿ ರಾಜಸ್ವ ಅಂದರೆ ರೆವಿನ್ಯೂ ಆದಾಯದ 912.44 ಕೋಟಿ ರೂಪಾಯಿ ಎಂದು ಲೆಕ್ಕ ಕೊಟ್ಟಿದ್ದಾರೆ, ಹೋದ ವರ್ಷದ್ದು 838.92 ಎಂದು ರಾಜಸ್ವ ಲೆಕ್ಕದಲ್ಲಿ ಕೊಟ್ಟಿದ್ದಾರೆ. ಇದು ಹೇಗೆ ಇದೆ ಎಂದರೆ ಅಂಗಡಿ ಲೆಕ್ಕ ಇದ್ದ ಹಾಗಿದೆ. ಇದು ಬಡ್ಜೆಟ್ ಅಲ್ಲ, ಆ ವಕೀಲಿ ಘಾರಂನಲ್ಲಿ ಎಲ್ಲ ಫೀ ಅನ್ನು ಲೆಕ್ಕ ಮಾಡಿ ಮತ್ತು ಇನ್‌ಕಂ ಟ್ಯಾಕ್ಸ್ ಎಲ್ಲವನ್ನು ಸೇರಿಸಿ ಅಂಗಡಿಯವರು ಬರೆದಂತೆ ಇದೆ. ಅಭಿವೃದ್ಧಿ ಕೆಲಸಕಾರ್ಯಗಳ ಬಗ್ಗೆ ಒಂದು ಚಕಾರವೂ ಇಲ್ಲ, ಆತುರದಲ್ಲಿ ಮೂರೂ ಜನ ಮಂತ್ರಿಗಳು ಸೇರಿ ಬರೆದು ಬಿಟ್ಟರೇನೋ? ಯಾವುದರಲ್ಲಿ ಕೊರತೆ ಬಂದಿದೆ ಎಂದೂ ಹೇಳಿಲ್ಲ. ಭಾರತ ಸರ್ಕಾರದವರು ವಿಶೇಷವಾದ ನೆರವು ಒಂದು ಕೋಟಿ ರೂಪಾಯಿಯನ್ನು ಕೊಡುತ್ತಾರೆಂದು ಹೇಳಿದ್ದಾರೆ ಅಷ್ಟೆ.

ಇನ್ನು ಉತ್ಪತ್ತಿ ಬಗ್ಗೆ ಹೇಳುವುದಾದರೆ 'ಎ' ಚಿತ್ರಗಳಿಗೆ ತೆರಿಗೆಯನ್ನು ಹಾಕಿದ್ದಾರೆ. ನಮ್ಮ ರಾಜ್ಯದ ಮುಖ್ಯಮಂತ್ರಿಗಳನ್ನು ಸಿನಿಮಾ ತಯಾರಕರು ಕರೆಸಿ ಒಂದು ಹೂಮಾಲೆಯನ್ನು ಹಾಕಿದಾಗ ಅಲ್ಲಿ ಈ ಬಗ್ಗೆ ಏನು ಹೇಳಿದರು ಎಂದರೆ 'ಎ' ಸರ್ಟಿಫಿಕೇಟ್ ಪಡೆದ ಚಿತ್ರಕ್ಕೆಲ್ಲಾ ತೆರಿಗೆಯನ್ನು ತೆಗೆದು ಹಾಕುತ್ತೇವೆಂದು ಹೇಳಿದ್ದಾರೆ. ಬಡ್ಜೆಟ್‌ನಲ್ಲಿ ಏನು ಖೋತಾ ಇದೆ, ಜನರಿಗೆ ಇದರಿಂದ ಏನು ತೊಂದರೆ ಇದೆ ಇದು ಒಂದೂ ನಮ್ಮ ಮುಖ್ಯಮಂತ್ರಿಗೆ ಬೇಕಾಗಿಲ್ಲ. ಯಾರು ಕರೆಸಿ ಹೂವಿನ ಮಾಲೆ ಹಾಕುತ್ತಾರೋ ಅವರಿಗೆ ಅಲ್ಲಿ ಒಂದು ಆಶ್ವಾಸನೆ ಕೊಡುವುದೇ ಒಂದು ಉದ್ಯೋಗವಾಗಿದೆ.

ಈ 'ಎ' ಚಿತ್ರಕ್ಕೆ ತೆರಿಗೆಯನ್ನು ಹಾಕುವಾಗ ಈ ಮನೆಯಲ್ಲಿ ಸಾಕಷ್ಟು ಚರ್ಚೆಯಾಗಿ ಆಗಿನ ಹಣಕಾಸಿನ ಸಚಿವರಾಗಿದ್ದ ಶ್ರೀಮಾನ್ ಯಾಹ್ಯಾ ಅವರು ಸೂಕ್ತವಾದ ತೆರಿಗೆ ಎಂದು ಪರಿಗಣಿಸಿ ಇದನ್ನು ಹಾಕಿದರು. ಕರ್ನಾಟಕದಲ್ಲಿ 'ಎ' ಚಿತ್ರವನ್ನು ತಯಾರು ಮಾಡುವಂತಾದ್ದು ಹೆಚ್ಚಿಗೆ ಇಲ್ಲ. ಸಾಮಾನ್ಯವಾಗಿ ಚಿತ್ರವನ್ನು ಹೆಚ್ಚಿಗೆ ತಯಾರು ಮಾಡುವವರು ಕೇರಳ, ತಮಿಳುನಾಡಿನವರು. ಅವರನ್ನು ಬಿಟ್ಟರೆ ಆಂಧ್ರದವರು, ಹಿಂದಿಯವರು. ಇಂತಹವರ ಮೇಲೆ ಹೆಚ್ಚುವರಿ ತೆರಿಗೆ ಹಾಕಿದರೆ ಹೆಚ್ಚು ಉತ್ಪತ್ತಿ ಕರ್ನಾಟಕಕ್ಕೆ ಬರುತ್ತದೆ. 'ಅವನ ರಾತ್ರಿ' 'ಅವಳ ರಾತ್ರಿ' ಇವಕ್ಕೆ

ತೆರಿಗೆ ಹಾಕುವುದನ್ನು ತೆಗೆಯುತ್ತೇವೆಂದು ಹೇಳುವುದಾದರೆ ನಮ್ಮ ಕರ್ನಾಟಕಕ್ಕೆ ಆಗುವ ಲಾಭವಾದರೂ ಏನು? ಸಾಮಾನ್ಯವಾಗಿ ಕರ್ನಾಟಕದಲ್ಲಿ ತೆಗೆಯುವ ಕನ್ನಡ ಚಿತ್ರಗಳಿಗೆ ಬೆಂಗಳೂರು ಮತ್ತು ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಬಿಟ್ಟರೆ ಉಳಿದ ಯಾವ ಸ್ಟೇಟ್‌ನಲ್ಲಿಯೂ ಅಷ್ಟಾಗಿ ಮಾನ್ಯತೆ ಕೊಡುವುದಿಲ್ಲ. ಎಲ್ಲಿ ನೋಡಿದರೂ ಗೋಡೆಗಳ ಮೇಲೆ "ಅವನ ರಾತ್ರಿ", "ಅವಳ ರಾತ್ರಿ" ಇವೇ ನಗರದಲ್ಲಿ ಆಗಿವೆ. ಅಂತಹ 'ಎ' ಸರ್ಟಿಫಿಕೇಟ್ ಪಡೆದ ಚಿತ್ರಗಳು ಸ್ವಲ್ಪ ಎಜುಕೇಟೀವ್ ರೀತಿ ಇದ್ದರೆ, ಅದು ಬೇರೆ ವಿಚಾರ. ಆದುದರಿಂದ ಇಂತಹ ಚಿತ್ರಗಳಿಗೆ ನೀವು ಹಾಕಿರತಕ್ಕಂಥಾ ಏನು ತೆರಿಗೆ ಇದೆ ಅದನ್ನು ತೆಗೆಯಬಾರದು ಎಂದು ಹೇಳುತ್ತೇನೆ. ನಿನ್ನೆ ದಿವಸ ನಮ್ಮ ಸಭಾ ನಾಯಕರು ಕನ್ನಡವನ್ನು ಹಾಗೆ ಮಾಡುವುದಕ್ಕೆ ಬಿಡುವುದಿಲ್ಲ. ಹೀಗೆ ಮಾಡುವುದಕ್ಕೆ ಬಿಡುವುದಿಲ್ಲ ಎಂದರು. ಅಚ್ಚ ಕನ್ನಡ, ತಿಳಿಗನ್ನಡ, ಕನ್ನಡ ಪೀತಾಂಬರ, ಸೀತಾಂಬರ ಇವಕ್ಕೆ ಏನಾದರೂ ಧಕ್ಕೆ ಬಂದರೆ ನಾವು ಯಾರೂ ಸುಮ್ಮನೆ ಕೂಡುವುದಿಲ್ಲ ಹಾಗೆ, ಹೀಗೆ ಎಂದು ಅವರು ಭಾಷಣ ಬಿಗಿದಿದ್ದೇ ಬಿಗಿದಿದ್ದು. ಮತ್ತು "ಕನ್ನಡದಲ್ಲಿ ಚಿತ್ರವನ್ನು ತಯಾರು ಮಾಡುವವರಿಗೆ ಆ ಕನ್ನಡ ಚಿತ್ರವನ್ನು ಚಿತ್ರಮಂದಿರಗಳಲ್ಲಿ ಕನಿಷ್ಠ 12 ವಾರ ಕಡ್ಡಾಯವಾಗಿ ಓಡಿಸುವ ಹಾಗೆ ಮಾಡುತ್ತೇನೆ" ಎಂದು ಏನೇನೋ ಹೇಳಿದರು. ಆದರೆ ಈಗ ನೋಡಿದರೆ ಕನ್ನಡ ಚಿತ್ರವನ್ನು ತಯಾರು ಮಾಡುವವರ ಸ್ಥಿತಿ ಹೇಳತೀರದು, ಅದರಲ್ಲೂ ನಟ ಸಾರ್ವಭೌಮ ರಾಜ್‌ಕುಮಾರ್ ತಯಾರು ಮಾಡಿದ ಸಿನಿಮಾಗಳೇ ನರಳುತ್ತಿವೆ ಎಂದ ಮೇಲೆ ಇನ್ನು ಉಳಿದವರ ಪಾಡೇನು ಎನ್ನುವ ಹಾಗೆ ಆಗಿದೆ. ನಾನು ಇದನ್ನು ಏತಕ್ಕೆ ಹೇಳುತ್ತಿದ್ದೇನೆಂದರೆ ಈಗ ಕನ್ನಡ ಚಿತ್ರವನ್ನು ತೆಗೆದವರಿಗೆ ಯಾರಿಗೂ ಲಾಭ ಸಿಕ್ಕುತ್ತಿಲ್ಲ, ನಮ್ಮ ಕರ್ನಾಟಕ ಬಿಟ್ಟರೆ ಬೇರೆ ಇದಕ್ಕೆ ಎಲ್ಲಾದರೂ ಮಾರ್ಕೆಟ್ ಇದ್ದರೆ ತೋರಿಸಲಿ. ಈಗ ಏನಾಗಿದೆ ಎಂದರೆ ಮಾನ್ಯ ಮುಖ್ಯ ಮಂತ್ರಿಗಳು ಎಲ್ಲೇ ಹೋಗಲಿ ಅಲ್ಲಿ ಹೂವಿನ ಹಾರ ಹಾಕಿದರೆ ತಕ್ಷಣ ಒಂದು ಆಶ್ವಾಸನೆ ಇದ್ದೇ ಇರುತ್ತದೆ. ಈಗ ಈ ರೀತಿ ನಡೆಯುತ್ತಿದೆ. ನಮ್ಮ ರಾಜ್ಯ ಸರ್ಕಾರ ನನಗೆ ತಿಳಿದ ಮಟ್ಟಿಗೆ ಈಗ 'ಎ' ಚಿತ್ರಗಳಿಗೆ ಹಾಕಿರುವ ತೆರಿಗೆಯನ್ನು ತೆಗೆದ ಹಾಗೆ ಕಾಣುವುದಿಲ್ಲ, ಆದ್ದರಿಂದ ದಯಮಾಡಿ ಯಾವ ಕಾರಣಕ್ಕೂ ತೆಗೆಯಬಾರದು. ಅದರ ಬದಲಿಗೆ ಕನ್ನಡದಲ್ಲಿ ಯಾರು ಚಿತ್ರವನ್ನು ತಯಾರುಮಾಡುತ್ತಾರೋ ಅವರಿಗೆ ಪೂರ್ಣ ತೆರಿಗೆಯನ್ನು ರದ್ದು ಮಾಡಬೇಕು. ಅದು ಬೆಳಗಾಂನಲ್ಲಿ ನಡೆಯಲಿ, ಶಿವಮೊಗ್ಗದಲ್ಲಿ ನಡೆಯಲಿ, ಬೆಂಗಳೂರಿನಲ್ಲಿ ನಡೆಯಲಿ, ಓಡಲಿ ಅವಕ್ಕೆ ತೆರಿಗೆ

ಹಾಕಬಾರದು. ಕನ್ನಡ ಚಿತ್ರಕ್ಕೆ ಉತ್ತೇಜನ ಕೊಡಬೇಕು. ಈಗ ಇದಕ್ಕೆ ಏನು ಸಬ್ಸಿಡಿ ಕೊಡುತ್ತಿದ್ದಾರೆ ಅದನ್ನು ತೆಗೆದುಕೊಳ್ಳಲಿಕ್ಕೆ ಅವರು ಎಷ್ಟೋ ಸಾರಿ ವಿಧಾನಸೌಧಕ್ಕೆ ತಿರುಗಬೇಕಾಗಿದೆ ಮತ್ತು ಎಷ್ಟೋ ಹಣವನ್ನು ಖರ್ಚುಮಾಡಬೇಕಾಗಿದೆ. ಒಂದು ಲಕ್ಷ ಸಬ್ಸಿಡಿ ತೆಗೆದುಕೊಳ್ಳಬೇಕಾದರೆ 40 ಸಾವಿರ ಖರ್ಚು ಮಾಡಬೇಕೆಂದು ಹೇಳುತ್ತಾರೆ. ಒಂದೂವರೆ ಲಕ್ಷ ಸಬ್ಸಿಡಿ ತೆಗೆದುಕೊಳ್ಳಬೇಕಾದರೆ 80 ಸಾವಿರ ಖರ್ಚು ಮಾಡಬೇಕಾಗುತ್ತದೆ ಎಂದು ಹೇಳುತ್ತಾರೆ. ಆದುದರಿಂದ ಇದಕ್ಕೆ ಸಬ್ಸಿಡಿ ಕೊಡುವ ಪದ್ಧತಿಯನ್ನು ನಿಲ್ಲಿಸಿ. ಅದರಲ್ಲಿ ಅರ್ಥವಿಲ್ಲ. ಇದರಿಂದ ಹೆಚ್ಚಿನ ಅವ್ಯವಹಾರ ಜಾಸ್ತಿಯಾಗುತ್ತದೆ ಎಂದು ಹೇಳುತ್ತೇನೆ.

ಇದಕ್ಕೆ ಸಬ್ಸಿಡಿ ಕೊಡುವುದನ್ನು ತೆಗೆದು ಹಾಕಿ ಎಲ್ಲಾ ಸಿನಿಮಾಗಳಿಗೂ ಟ್ಯಾಕ್ಸ್ ಫ್ರೀ ಮಾಡಿ. ಆ ರೀತಿ ಮಾಡಿದರೆ ಕನ್ನಡ ಚಿತ್ರಗಳು ಓಡುತ್ತವೆ. ಈಗ ಕೆಲವು ಕನ್ನಡ ಚಿತ್ರಗಳಿಗೆ ಅವಾರ್ಡ್ ಕೊಡುತ್ತಾರೆ. ಇವರು 1979ನೇ ಇಸವಿಯಲ್ಲಿ ಅವಾರ್ಡ್ ಕೊಟ್ಟರೆ 1981ನೇ ಇಸವಿಗೆ ಅವಾರ್ಡ್ ಸಿಕ್ಕುತ್ತದೆ. ಈಗ ಇರತಕ್ಕಂಥ ಅಭಿರುಚಿ ಮೂರು ವರ್ಷಗಳ ನಂತರ ಇರುವುದಿಲ್ಲ. ಆದ್ದರಿಂದ ಮೂರು ವರ್ಷಗಳ ಹಿಂದಿನ ಚಿತ್ರಕ್ಕೆ ಈಗ ಅವಾರ್ಡ್ ಬಂದರೆ ಅಷ್ಟೇನು ಪ್ರಯೋಜನವಾಗುವುದಿಲ್ಲ. ಆದ್ದರಿಂದ ಅವಾರ್ಡ್ ಕೊಡುವುದಾದರೆ ಚಿತ್ರವನ್ನು ತಯಾರಿಸಿದ ಕೂಡಲೇ ಕೊಟ್ಟರೆ ಸ್ವಲ್ಪ ಪ್ರಚಾರವಾಗುತ್ತದೆ. ಅದು ಸ್ವಲ್ಪ ದಿವಸಗಳು ಓಡುತ್ತದೆ. ಆದ್ದರಿಂದ ಕನ್ನಡ ಚಿತ್ರಗಳಿಗೆ ಅವಾರ್ಡ್ ಕೊಡುವಾಗ ಯಾವ ವರ್ಷ ಚಿತ್ರವನ್ನು ತಯಾರು ಮಾಡುತ್ತಾರೆಯೋ ಆ ವರ್ಷವೇ ಅವಾರ್ಡ್ ಕೊಡುವುದಕ್ಕೆ ವ್ಯವಸ್ಥೆ ಮಾಡಬೇಕು, ಮತ್ತು ಎಲ್ಲಾ ಕನ್ನಡ ಚಿತ್ರಕ್ಕೂ ತೆರಿಗೆ ವಿನಾಯಿತಿಯನ್ನು ಕೊಡಬೇಕು. (ಎ) ಕ್ಲಾಸ್ ಚಿತ್ರಕ್ಕೆ ತೆರಿಗೆ ವಿನಾಯಿತಿ ಕೊಟ್ಟರೆ ಆ ಚಿತ್ರಗಳು ಚೆನ್ನಾಗಿ ಓಡುತ್ತವೆ ಎಂದು ಬಹಳ ಜನ ಆ ಚಿತ್ರಗಳನ್ನೇ ತಯಾರು ಮಾಡುತ್ತಾರೆ. ಅಂಥಾ (ಎ) ಚಿತ್ರಗಳಿಗೆ ತೆರಿಗೆ ಸಬ್ಸಿಡಿ ಕೊಡುವುದು ಉಪಯೋಗವಿಲ್ಲ. ಎಲ್ಲಾ ಕನ್ನಡ ಚಿತ್ರಗಳಿಗೂ ತೆರಿಗೆ ವಿನಾಯಿತಿ ಕೊಡಬೇಕು. ಚಿತ್ರಗಳಿಗೆ ಅವಾರ್ಡ್ ಕೊಡುವಾಗ ಶೀಘ್ರವಾಗಿ ಕೊಡಬೇಕೆಂದು ನಾನು ಹೇಳುತ್ತೇನೆ.

## ಸಮಸ್ಯೆ ಅರ್ಥಮಾಡಿಕೊಳ್ಳುವಂತಹ ಸರ್ಕಾರಬೇಕು

### (1980-81ರ ಆಯವ್ಯಯ ಕುರಿತು)

### 3ನೇ ಜುಲೈ 1980

**ಎ.ಕೆ. ಸುಬ್ಬಯ್ಯ :** ನಿರುದ್ಯೋಗದ ಸಮಸ್ಯೆ ಬಗ್ಗೆ ಹೇಳುವುದಾದರೆ ಇಂದು ಅದು ಬೃಹದಾಕಾರವಾಗಿ ಬೆಳೆದಿದೆ. ಅದನ್ನು ಪರಿಹಾರ ಮಾಡುವುದಕ್ಕೆ ಈ ಬಡ್ಜೆಟ್ಟಿನಲ್ಲಿ ಏನು ಇದೆ ಹೇಳಿ. ಅವರು ಏನು ಹೇಳಿದ್ದಾರೆ ಎಂದರೆ ಕೇಂದ್ರದಲ್ಲಿ ಇಂದಿರಾಗಾಂಧಿ ಪಕ್ಷದವರು ಸರ್ಕಾರ ನಡೆಸುತ್ತಿದ್ದಾರೆ, ನಾವು ಇಲ್ಲಿ ಸರ್ಕಾರ ನಡೆಸುತ್ತಿದ್ದೇವೆ ಎಂದು. ಬಹುಮತ ಇದ್ದುದರಿಂದ ನೀವು ಅಧಿಕಾರಕ್ಕೆ ಬಂದಿದ್ದೀರಿ ಅಷ್ಟೆ. ಇಷ್ಟಾದರೂ ಕೂಡ ನಿಮ್ಮ ಮಂಡಲವನ್ನು ಇನ್ನೂ ಪೂರ್ಣವಾಗಿ ರಚನೆ ಮಾಡಲಿಕ್ಕೆ ಆಗಿಲ್ಲಾ. ಏತಕ್ಕೆ ಇನ್ನೂ ಪೂರ್ಣ ಮಾಡಿಲ್ಲಾ? ನೀವು ಮಂತ್ರಿಮಂಡಲವನ್ನು ಪೂರ್ಣ ಮಾಡದೇ ಹೋದರೆ ಆಡಳಿತ ಹೇಗಾಗಬೇಕು? ಭ್ರಷ್ಟಾಚಾರ ಹೇಗೆ ನಿಲ್ಲಬೇಕು? ನಿರುದ್ಯೋಗ ಪರಿಹಾರದ ಬಗ್ಗೆ ಯಾರು ಕೆಲಸ ಮಾಡಬೇಕು? ಹೇಳಿ. ನಿಮಗೆ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಒಂದು ವಿಚಾರ ಹೇಳುವುದಾದರೆ ನಮ್ಮ ಜಿಲ್ಲೆ ಒಂದರಲ್ಲೇ ಸುಮಾರು 750 ಅಧ್ಯಾಪಕರ ಹುದ್ದೆಗಳು ಮೂರು ವರ್ಷಗಳಿಂದಲೂ ಖಾಲಿ ಇವೆ. ವಿದ್ಯಾವಂತರಿಗೆ ಉದ್ಯೋಗವಿಲ್ಲಾ. ಶಾಲೆಯಲ್ಲಿ ಓದುತ್ತಾ ಇರತಕ್ಕಂಥಾ ಮಕ್ಕಳಿಗೆ ಉಪಾಧ್ಯಾಯರಿಲ್ಲಾ, ಹಾಗಾಗಿದೆ. ಆದ್ದರಿಂದ ಈವೊತ್ತಿನ ದಿವಸ ವಿದ್ಯಾವಂತರು ಬೀದಿಬೀದಿಯಲ್ಲಿ ತಿರುಗಾಡುತ್ತಾ ಇರತಕ್ಕಂಥಾ ಪರಿಸ್ಥಿತಿ ಬಂದಿದೆ. ನಮ್ಮ ಒಂದು ಜಿಲ್ಲೆಯಲ್ಲಿ 700-800 ಹುದ್ದೆಗಳು ಖಾಲಿ ಇರುವುದಾದರೆ, ಇನ್ನೂ ಕರ್ನಾಟಕ ರಾಜ್ಯದಲ್ಲಿರುವ ಎಲ್ಲಾ ಜಿಲ್ಲೆಗಳನ್ನೂ ಲೆಕ್ಕಕ್ಕೆ ತೆಗೆದುಕೊಂಡರೆ ಎಷ್ಟೋ ಸಾವಿರಗಟ್ಟಲೆ ಹುದ್ದೆಗಳು ಖಾಲಿ ಇವೆ ಎಂದು ಹೇಳಬಹುದು. ಇದನ್ನು ಅಲ್ಲಲ್ಲಿ ಏತಕ್ಕೆ ಭರ್ತಿ ಮಾಡುವುದಿಲ್ಲಾ? ಇದರ ಜೊತೆಗೆ ಇನ್ನೇನು ಮಾಡುತ್ತಾರೆ ಪ್ರತಿ ಇಲಾಖೆಯಲ್ಲೂ ಕೂಡ ಏನು ಇಂಟರ್‌ವ್ಯೂ ಕರೆಯುತ್ತಾರೆ, ಅದರಲ್ಲಿ ಸೆಲೆಕ್ಷನ್ ಆದ ಕ್ಯಾಂಡಿಡೇಟ್ಸನ್ನು ಬೇಗನೆ ಭರ್ತಿ ಮಾಡುವುದಿಲ್ಲ, ನಂತರ ಮತ್ತೆ ಹೊಸದಾಗಿ ಕರೆಯುತ್ತಾರೆ. ಜೊತೆಗೆ ಆ ಹುದ್ದೆಗಳೂ ಸಹ ಹಾಗೆಯೇ ಉಳಿಯುತ್ತವೆ. ಇದರಿಂದ ನಿರುದ್ಯೋಗಿಯಾದವರಿಗೆ ಇನ್ನೂ ಕೆಲಸ ಸಿಕ್ಕದಂತಾಗಿದೆ. ಇವರು ಬೀದಿಬೀದಿಯಲ್ಲಿ ಅಲೆದಾಡುವ ಪರಿಸ್ಥಿತಿ ಬಂದಿದೆ. ತಮಗೆ ಹೇಳಬೇಕಾದರೆ ಯಾವ ಯಾವ ಇಲಾಖೆಯಲ್ಲಿ ಎಷ್ಟೆಷ್ಟು ಸಂಖ್ಯೆಯಲ್ಲಿ

ಹುದ್ದೆಗಳು ಖಾಲಿ ಇವೆ? ಮತ್ತು ಎಷ್ಟು ಭರ್ತಿ ಮಾಡಿದ್ದಾರೆ ಅವುಗಳಲ್ಲಿ ಎನ್ನುವುದನ್ನು ತರಿಸಿಕೊಂಡು ನೋಡಿದರೆ ಗೊತ್ತಾಗುತ್ತದೆ. ಯಾರೇ ಆಗಲಿ ಮೊದಲು ಇಂಟರ್‌ವ್ಯೂ ನಡೆದಾಗ ಏನು ಸೆಲೆಕ್ಷನ್ ಮಾಡಿಕೊಳ್ಳಬೇಕೋ ಅದು ಮಾಡಿಕೊಳ್ಳುವುದಿಲ್ಲ. ಏನಾದರೂ ಒಂದು ನೆಪ ಹೇಳಿ ಬೇರೆ ಹೊಸದಾಗಿ ಕರೆಯುತ್ತಾರೆ. ಇದರಿಂದ ನಮಗೆ ಏನು ಗೊತ್ತಾಗುತ್ತದೆ ಎಂದರೆ ಇವರಿಗೆ ಈ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲಿಕ್ಕೆ ಮನಸ್ಸಿಲ್ಲ ಅನ್ನುವುದು ಗೊತ್ತಾಗುತ್ತದೆ. ಹಾಗಾದರೆ There is no Government which wants to do something which has got the will to do, ಕೆಲಸ ಮಾಡಬೇಕು ಎನ್ನುವ ಮನಸ್ಸು ಇರತಕ್ಕಂಥಾ ಸರ್ಕಾರ ನಮಗೆ ಬೇಕಾಗಿಲ್ಲಾ. 'ಈ ಬಗ್ಗೆ ನೀವು ಏನು ಬೇಕಾದರೂ ಮಾಡಿಕೊಳ್ಳಿ, ನಮ್ಮ ಕಸಬೇ ಇದು, ಅನ್ನುವುದನ್ನು ಬಿಟ್ಟು ಈ ಆಡಳಿತದಲ್ಲಿ ಒಂದು ಹತೋಟಿಯನ್ನು ಇಟ್ಟುಕೊಳ್ಳಬೇಕು ಎಂದು ಹೇಳುತ್ತೇನೆ. ತಮಗೆ ಹೇಳಬೇಕಾದರೆ ನಾನು ಮತ್ತೆ ಈ ಸದನಕ್ಕೆ ಬಂದು 13ನೇ ವರ್ಷಕ್ಕೆ ಕಾಲಿಟ್ಟಿದ್ದೇನೆ. 12 ವರ್ಷಗಳಿಂದಲೂ ಯಾವ ಯಾವ ಸರ್ಕಾರಗಳು ಬಂದು ಏನೇನು ಕೆಲಸ ಮಾಡಿವೆ ಅನ್ನುವುದನ್ನು ನೋಡಿದ್ದೇನೆ. ಮೊದಲು ವೀರೇಂದ್ರಪಾಟೀಲರ ಸರ್ಕಾರ ಇತ್ತು ನಂತರ ದೇವರಾಜ ಅರಸರ ಸರ್ಕಾರ ಬಂತು. ಇನ್ನು ನಾನು ಹೋಗುವುದರೊಳಗೆ ಇನ್ನೆಷ್ಟು ಸರ್ಕಾರಗಳು ಬಂದು ಹೋಗುತ್ತದೋ? ನಾನೂ ಕೂಡ ಬಹಳ ಸರ್ಕಾರಗಳನ್ನು ನೋಡಿದ್ದೇನೆ. ವೀರೇಂದ್ರಪಾಟೀಲರ ಸರ್ಕಾರ ಇದ್ದಾಗ ನಾನು ಉಗ್ರವಾಗಿ ಟೀಕೆ ಮಾಡಿ ಬಹಳ ಹುಳುಕುಗಳನ್ನು ತೆಗೆಯುತ್ತಾ ಇದ್ದೆ. 'ವೀರೇಂದ್ರಪಾಟೀರು, ರಾಮಕೃಷ್ಣ ಹೆಗಡೆಯವರು ಲೂಟಿ ಮಾಡುತ್ತಿದ್ದಾರೆ' ಅಂತ ಆಗಿನ ಸರ್ಕಾರದ ಮೇಲೆ ಬಹಳ ಟೀಕೆ ಮಾಡುತ್ತಿದ್ದೆ. ನಂತರ ದೇವರಾಜ ಅರಸರ ಸರ್ಕಾರ ಬಂತು, ಅವರ ಸರ್ಕಾರ ನೋಡಿ ಮೊದಲು ಇದ್ದಂಥಾ ವೀರೇಂದ್ರ ಪಾಟೀಲರ ಸರ್ಕಾರವೇ ಸ್ವಲ್ಪ ಚೆನ್ನಾಗಿತ್ತು ಅನಿಸಿತು. ಈಗ ನಮಗೆ ಏನು ಅನಿಸಿದೆ ಎಂದರೆ ಈಗ ಗುಂಡೂರಾಯರ ಸರ್ಕಾರ ಏನು ಇದೆ ಆ ಸರ್ಕಾರದ ಆಡಳಿತದ ವೈಖರಿ ನೋಡಿಬಿಟ್ಟು ಹಿಂದೆ ಇದ್ದ ದೇವರಾಜ ಅರಸ್ ಸರ್ಕಾರವೇ ಇದ್ದಿದ್ದರೆ ಚೆನ್ನಾಗಿತ್ತು ಎಂದು ಅನಿಸುತ್ತದೆ. ಅರಸ್‌ರವರ ಸರ್ಕಾರ ಇದ್ದಾಗ ಅವರು ಭ್ರಷ್ಟಾಚಾರವನ್ನು ಬೆಳೆಸಿದ್ದರು. ಆದರೆ ಅವರಲ್ಲಿ ಒಂದು ಬುದ್ಧಿ ಇತ್ತು. ಯಾವುದೆಂದರೆ ಕರ್ನಾಟಕ ದೇಶದ ಸಮಸ್ಯೆಯನ್ನು ಚೆನ್ನಾಗಿ ಅರಿತುಕೊಳ್ಳತಕ್ಕಂಥಾ ಒಂದು ಬುದ್ಧಿ ಇತ್ತು. ಅದನ್ನು ಅರಿತುಕೊಂಡು ಅದಕ್ಕೆ ಏನು ಪರಿಹಾರ ಮಾಡಬೇಕು ಅನ್ನುವ ಒಂದು ಬುದ್ಧಿಯೂ ಸಹ ಅವರಲ್ಲಿತ್ತು.

ಆ ಸಮಸ್ಯೆಗಳ ಬಗ್ಗೆ ಏನಾದರೂ ಪರಿಹಾರ ಮಾಡುವುದು ಇದ್ದಿದ್ದರೆ ತಕ್ಷಣ ಮಾಡುತ್ತಾ ಇದ್ದರು. ಈಗ ಇರುವವರಿಗೆ ಆ ಸಮಸ್ಯೆಗಳೇ ಅರ್ಥವಾಗುವುದಿಲ್ಲ. ಆದ್ದರಿಂದ ಅವರಿಗೆ ಈ ಬಗ್ಗೆ ಪರಿಹಾರ ಹುಡುಕುವಂಥಾ ಯೋಚನೆಯೇ ಇಲ್ಲ. ಯಾವ ಸಮಸ್ಯೆಯನ್ನೇ ಆಗಲಿ ಅರ್ಥ ಮಾಡಿಕೊಳ್ಳದಂಥಾ ಸರ್ಕಾರ ಈವೊತ್ತು ಇರುವುದರಿಂದ, ಈವೊತ್ತು ಈ ರೀತಿ ಮುಷ್ಕರಗಳು ಆಗುತ್ತಾ ಇವೆ. ಈ ಬಗ್ಗೆ ಅಲ್ಲಿಗೆ ಹೋಗಿ ಕೇಳಿದರೆ, ಶ್ರೀಮಾನ್ ಟಿ.ಎ. ರೆಡ್ಡಿಯವರೇ ಆಗಲಿ, ಶ್ರೀಮಾನ್ ಚೆನ್ನ ಬಸವಯ್ಯನವರೇ ಆಗಲಿ ಹೋಗಿ ಏನಾದರೂ ಕೇಳಿದರೆ ಅವರನ್ನು ಅರೆಸ್ಟ್ ಮಾಡಿ ಒಳಕ್ಕೆ ಹಾಕುತ್ತಾರೆ. ಹೀಗಿರುವುದರಿಂದ ಈವೊತ್ತಿನ ದಿವಸ ವಿದ್ಯಾರ್ಥಿಗಳ ಮುಷ್ಕರವೂ ಹೀಗಾಗುತ್ತಾ ಇದೆ.

# ಕೋಟಿ ಹಣ ಖರ್ಚಾದ ನಂತರ ಸಭೆಯ ಅನುಮತಿ

## 31ನೇ ಜುಲೈ 1980

**ಶ್ರೀ ಎ.ಕೆ. ಸುಬ್ಬಯ್ಯ** (ಪದವೀಧರರ ಕ್ಷೇತ್ರ): ಇವತ್ತು ಸರ್ಕಾರದವರು 1612 ಕೋಟಿ ರೂಪಾಯಿಗಳಿಗೂ ಹೆಚ್ಚು ಹಣವನ್ನು ಖರ್ಚುಮಾಡಿ ಅದಕ್ಕೆ ಈಗ ಸಭೆಯ ಅನುಮತಿ ಕೇಳುತ್ತಿದ್ದಾರೆ. ಹಣ ಯಾವ ರೀತಿ ಸಾರ್ವಜನಿಕರ ಉಪಯೋಗಕ್ಕೆ ಬರುತ್ತದೆಂದು ಹೇಳುವುದರ ಬಗ್ಗೆ ನಮಗೆ ಅನುಮಾನವಿದೆ. 4 ತಿಂಗಳಿಗೂ ಓಟ್ ಆನ್ ಅಕೌಂಟ್ ತೆಗೆದುಕೊಂಡು ಇಲ್ಲಿಯವರೆಗೂ ಖರ್ಚು ಮಾಡಿರುವುದನ್ನು ನೋಡುವಾಗ ಇದು ಈ ರೀತಿ ಮುಂದುವರಿಯುವುದಾದರೆ, ಅದಕ್ಕೆ ಮಂಜೂರಾತಿ ಕೊಡುವುದಾದರೆ ಅದು ದೊಡ್ಡ ಅಪಕಾರವೆಂದು ಕಂಡುಬರುತ್ತದೆ. ಹೇಗೂ ಇಲ್ಲಿ ಅವರು ಮಂಜೂರಾತಿ ಕೇಳುತ್ತಿದ್ದಾರೆ. ಈ ಸಂದರ್ಭದಲ್ಲಿ ನಾವು ಕೆಲವೊಂದು ಬೇಡಿಕೆಗಳನ್ನು ಹಾಗೂ ಸಲಹೆಗಳನ್ನು ಸರ್ಕಾರದ ಮುಂದಿಡುವುದು ಸಮಯೋಚಿತವೆಂದು ನಾನು ಭಾವಿಸುತ್ತೇನೆ. ಈಗ ಸಮಯದ ಕೊರತೆಯಿಂದಾಗಿ ನಾನು ಹೆಚ್ಚಾಗಿ ಹೇಳುವುದಕ್ಕೆ ಇಷ್ಟಪಡುವುದಿಲ್ಲ. ಈಗ ನಮ್ಮ ಮುಂದೆ ಒಂದು ಬಹಳ ಗಂಭೀರವಾದಂತಹ ಸಮಸ್ಯೆ ಇದೆ. ಅದು ರೇಷ್ಮೆ ಬೆಳೆಗಾರರ ಸಮಸ್ಯೆ. ಅದು ಪತ್ರಿಕೆಗಳಲ್ಲೂ ಕೂಡ ಬಂದಿದೆ. ರೇಷ್ಮೆ ವೃತ್ತಿ ಒಳ್ಳೆಯ ವೃತ್ತಿ, ಬಹಳ ಸೂಕ್ಷ್ಮವಾದುದು ಹಾಗೂ ಅದು ಮೊಟ್ಟೆ ಹೊಡೆದು ಬಟ್ಟೆಯವರೆಗೆ ಬಹಳ ಮುಖ್ಯವಾದುದು. ರೇಷ್ಮೆ ಬೆಳೆಯನ್ನು ತೆಗೆಯುವಲ್ಲಿ ಅನೇಕ ತೊಂದರೆಗಳಿವೆ. ಇವತ್ತು ರಾಜ್ಯದ ಹಲವು ಭಾಗಗಳಲ್ಲಿ ಈ ರೇಷ್ಮೆ ಉದ್ಯಮವನ್ನು ಅನೇಕರು ನಡೆಸಿಕೊಂಡು ಬಂದಿದ್ದಾರೆ. ಮೊಟ್ಟೆಯನ್ನು ತಯಾರು ಮಾಡುವುದಕ್ಕೆ ಖಾಸಗಿಯವರಿಗೆ ಅಧಿಕಾರವಿದ್ದರೂ ಸಹ ಅಧಿಕಾರಿಗಳ ಕಿರುಕುಳದಿಂದ, ಮೊಟ್ಟೆ ತಯಾರು ಮಾಡತಕ್ಕವರು ಈ ವೃತ್ತಿಯನ್ನು ಬಿಟ್ಟು ತೊಂದರೆ ಅನುಭವಿಸುವ ಮಟ್ಟಕ್ಕೆ ಬಂದಿದ್ದಾರೆಂದು ಪತ್ರಿಕೆಗಳಲ್ಲೂ ಕೂಡ ವರದಿ ಬಂದಿದೆ. ಇದರ ಬಗ್ಗೆ ಕೆಲವರು ಹಸ್ತಪತ್ರಿಕೆಗಳನ್ನು ಕೂಡ ಹೊರಡಿಸಿದ್ದಾರೆ. ರೇಷ್ಮೆ ಬೆಳೆಗಾರರ ಸಮಸ್ಯೆಗಳ ಬಗ್ಗೆ ಮಾನ್ಯ ಮಂತ್ರಿಗಳು ತಮ್ಮ ಗಮನಹರಿಸಿ ಈ ರೇಷ್ಮೆ ಬೆಳೆಗಾರರ ಜೊತೆಗೆ ಮಾತುಕತೆ ನಡೆಸಿ ಅವರ ಸಮಸ್ಯೆಗಳನ್ನು ಅರಿತುಕೊಂಡು ಅವರ ಕಷ್ಟಗಳಿಗೆ ಪರಿಹಾರ ಸೂಚನೆ ಮಾಡಬೇಕೆಂದು ನಾನು ಸಲಹೆ ಮಾಡುತ್ತೇನೆ. ಇನ್ನೊಂದು ವಿಷಯವೇನೆಂದರೆ ರೇಷ್ಮೆ ಬೆಳೆಗೆ ಊಜಿ ನೊಣ ಬಂದಿದೆ. ಇಲಾಖೆಯವರು ಅದರ ಬಗ್ಗೆ ಹೆಚ್ಚು ಗಮನಹರಿಸುತ್ತಿಲ್ಲ. ಇದರ ಬಗ್ಗೆ ಸರ್ಕಾರದವರು ಗಮನ ಕೊಡದೆಹೋದರೆ ರೇಷ್ಮೆ ಬೆಳೆ ಹಾಳಾಗುತ್ತದೆ. ಈ ಊಜಿ ನೊಣವನ್ನು ಹೋಗಲಾಡಿಸುವುದಕ್ಕೆ

ಸರ್ಕಾರದವರು ಏನಾದರೂ ಒಂದು ಕ್ರಮವನ್ನು ತೆಗೆದುಕೊಳ್ಳಬೇಕು. ರೇಷ್ಮೆ ಮೊಟ್ಟೆಯನ್ನು ತಯಾರು ಮಾಡತಕ್ಕವರಿಗೆ ಅಧಿಕಾರಿಗಳು ಏನು ಕಿರುಕುಳ ಕೊಡುತ್ತಿದ್ದಾರೆ ಅವರ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಬೇಕು.

**ಸಭಾಪತಿಯವರು:** ಈ ಊಜಿ ನೊಣಕ್ಕೆ ಸಂಬಂಧಪಟ್ಟ ಹಾಗೆ ಮಾನ್ಯ ಮಂತ್ರಿಗಳು ಈಗಾಗಲೇ ಒಂದು ಸ್ಟೇಟ್‌ಮೆಂಟನ್ನು ಮಾಡಿದ್ದಾರೆ.

**ಶ್ರೀ ಎ.ಕೆ. ಸುಬ್ಬಯ್ಯ:** ಮತ್ತೊಂದು ವಿಷಯವೇನೆಂದರೆ ಬೆಂಗಳೂರಿನ ಸಾಣೆಗೊರವನಹಳ್ಳಿಯಲ್ಲಿ ಕಮಲನಗರ ಎನ್ನುವ ಒಂದು ಹೊಸ ಬಡಾವಣೆ ಇದೆ. ಅಲ್ಲಿ ಕೊಳಚೆ ಪ್ರದೇಶಗಳಲ್ಲಿದ್ದವರನ್ನು ಸೇರಿಸಿ ಸಾಣೆಗೊರವನಹಳ್ಳಿಯಲ್ಲಿ ಮನೆ ಕಟ್ಟಿಕೊಳ್ಳುವುದಕ್ಕೆ ನಿವೇಶನವನ್ನು ರೆವಿನ್ಯೂ ಇಲಾಖೆಯವರು ಕೊಟ್ಟಿದ್ದಾರೆ. ಅಲ್ಲಿ ಹೆಚ್ಚಾಗಿ ಹರಿಜನರೇ ಇದ್ದಾರೆ. ನಾನು ಅಲ್ಲಿಗೆ ಹೋಗಿ ನೋಡಿ ಬಂದಿದ್ದೇನೆ. ಅಲ್ಲಿ ತಮ್ಮ ಕಾರ್ಯಕ್ರಮ ಕೂಡ ನಿಶ್ಚಯವಾಗಿತ್ತು. ತಾವು ಬರಲಿಲ್ಲ, ನಾನು ಹೋಗಿದ್ದೆ. ನಾನು, ಅವರಿಗೆ ಬೇರೆ ಯಾವುದೋ ಮುಖ್ಯವಾದ ಕೆಲಸವಿದ್ದುದರಿಂದ ಬರಲಿಲ್ಲವೆಂದು ಹೇಳಿದೆ. ತಾವು ಯಾಕೆ ಬರಲಿಲ್ಲವೆಂದರೆ ಅಲ್ಲಿ ಕಾಂಗ್ರೆಸ್ (ಐ) ಎರಡು ಗುಂಪು ಇದೆಯಂತೆ, ಅಲ್ಲಿ ಕಾರ್ಯಕ್ರಮ ಏರ್ಪಡಿಸಿದ್ದವರು ಬೇರೆ ಗುಂಪಿನವರು, ಅದಕ್ಕೋಸ್ಕರ ತಾವು ಹೋಗಲಿಲ್ಲವೆಂದು ತಿಳಿಯಿತು.

**ಸಭಾಪತಿಯವರು:** ಇದು ಅಪ್ರೋಪ್ರಿಯೇಷನ್ ಬಿಲ್ ಅದಕ್ಕೂ ಇದಕ್ಕೂ ಸಂಬಂಧವಿಲ್ಲ. ಈ ಬಿಲ್ಲಿಗೆ ಸಂಬಂಧಪಟ್ಟ ಹಾಗೆ ಮಾತನಾಡುವುದು ಒಳ್ಳೆಯದು.

**ಶ್ರೀ ಎ.ಕೆ. ಸುಬ್ಬಯ್ಯ:** ಅಲ್ಲಿ 10 ಸಾವಿರ ಜನ ನಿವಾಸಿಗಳಿದ್ದಾರೆ. ಅವರೆಲ್ಲಾ ಅನ್‌ಆಥರೈಸ್ಡ್ ನಿವಾಸಿಗಳು. ಅವರಿಗಾಗಿ ಅಲ್ಲಿ ರೆವಿನ್ಯೂ ಇಲಾಖೆಯವರು ವಸತಿ ನಿರ್ಮಾಣ ಮಾಡಿದ್ದಾರೆ. ಅಲ್ಲಿಗೆ ಹೋಗಿ ಸೇರಬೇಕಾದರೆ 2 ಮೈಲಿ ನಡೆಯಬೇಕಾಗುತ್ತದೆ. ಅಲ್ಲಿಗೆ ಒಂದು ಅಪ್ರೋಚ್ ರಸ್ತೆ ಕೂಡ ಇರುವುದಿಲ್ಲ. 10 ಸಾವಿರ ಜನ ಇರುವ ಕಡೆ ಅದರಲ್ಲೂ ಹೆಚ್ಚಾಗಿ ಹರಿಜನರೇ ಇರುವ ಕಡೆ ಅಲ್ಲಿ ಈ ಬಗ್ಗೆ ಯಾರೂ, ಕೇಳುವವರು ಇಲ್ಲ.

ಎರಡು ಮೈಲಿವರೆಗೆ ರಸ್ತೆ ಇಲ್ಲ, ನಡೆದುಕೊಂಡೇ ಹೋಗಬೇಕು. ದಾರಿಯಲ್ಲಿ ದೀಪದ ವ್ಯವಸ್ಥೆ ಇಲ್ಲ, ಕುಡಿಯುವ ನೀರಿನ ವ್ಯವಸ್ಥೆ ಇಲ್ಲ, ಆಸ್ಪತ್ರೆ ಇಲ್ಲ. ಶಾಲೆ ಇಲ್ಲ, ಪೊಲೀಸ್ ಸ್ಟೇಷನ್ ಇಲ್ಲ; ಕೊಳಚೆ ನೀರನ್ನು ಅವರು ಉಪಯೋಗಿಸುತ್ತಿದ್ದಾರೆ. ಕಳೆದ 4–5 ವರ್ಷಗಳಿಂದ ಅಲ್ಲಿ ಇದೇ ರೀತಿ ವ್ಯವಸ್ಥೆ ಇದೆ. ಅದು ಕಾರ್ಪೋರೇಷನ್ ವ್ಯಾಪ್ತಿಯಲ್ಲಿ ಬರುವುದಿಲ್ಲ. ಅದು ಬಿ.ಡಿ.ಎ. ವ್ಯಾಪ್ತಿಯಲ್ಲಿ ಬಂದರೂ ಸಹ ಆ

ಜಾಗ ಇನ್ನೂ ಬಿ.ಡಿ.ಎ.ಗೆ ಸೇರಿಲ್ಲ. ಅದು ಅಲ್ಲಿನ ಪಂಚಾಯಿತಿ ವ್ಯಾಪ್ತಿಗೆ ಬರುತ್ತದೆ. ಅಲ್ಲಿಗೆ ತಕ್ಷಣ ಬೀದಿ ದೀಪಗಳನ್ನು ಹಾಕುವ ವ್ಯವಸ್ಥೆ ಆಗಬೇಕು. ಕೆ.ಇ.ಬಿ. ಅವರು ಕಂಬಗಳಿಲ್ಲವೆಂದು ಹೇಳುತ್ತಾರೆ. ಆದರೆ ಎಲ್ಲಿಯಾದರೂ ಇಂಡಸ್ಟ್ರಿಗಳು ಸ್ಥಾಪನೆಯಾದರೆ, ಅನುಮತಿ ಇಲ್ಲದೆ ಸ್ಥಾಪನೆಯಾದರೂ ಸಹ ರಾತ್ರೋರಾತ್ರಿಯಲ್ಲಿ ಇವರು ಕಂಬಗಳನ್ನು ಹಾಕಿ ವಿದ್ಯುಚ್ಛಕ್ತಿಯನ್ನು ಒದಗಿಸುತ್ತಾರೆ. ಕಮಲಾನಗರಕ್ಕೆ ಆದರೆ ಮಾತ್ರ ಕಂಬಗಳಿಲ್ಲವೆಂದು ಹೇಳುತ್ತಾರೆ. ಇದು ಸರಿಯಲ್ಲ. ಕೂಡಲೇ ಅಲ್ಲಿ ದೀಪದ ವ್ಯವಸ್ಥೆ ಆಗಬೇಕು. ಬಹಳ ಜನರು 2 ಸಾವಿರ ಇಲ್ಲವೇ, 3 ಸಾವಿರ ರೂಪಾಯಿಗಳನ್ನು ಕೊಟ್ಟು ಖಾಸಗಿ ಜಾಗಗಳನ್ನು ಕೊಂಡು ಅಲ್ಲಿ ಒಂದು ರೀತಿಯಲ್ಲಿ ಕೊಳಚೆ ಪ್ರದೇಶವನ್ನು ನಿರ್ಮಾಣ ಮಾಡಿದ್ದಾರೆ. ಈ ಜಾಗ ಜಿಲ್ಲಾಧಿಕಾರಿ ಆದಂಥ ಶ್ರೀ ಅಧೀಪಚೌದರಿ ಅವರ ಕೈಕೆಳಗೆ ಬರುತ್ತದೆ. ಆದರೆ ಅವರಾಗಲೀ ಇಲ್ಲವೇ ತಹಶೀಲ್ದಾರರಾಗಲೀ ಯಾವ ಅನುಕೂಲಗಳನ್ನೂ ಸಹ ಮಾಡಿಕೊಟ್ಟಿಲ್ಲ. ಆದಕಾರಣ ಮಾನ್ಯ ಕಂದಾಯ ಮಂತ್ರಿಗಳು ಅಲ್ಲಿಗೆ ಒಂದು ಸಲ ಹೋಗಿ ನೋಡಿಕೊಂಡು ಬರುವುದು ಒಳ್ಳೆಯದು. ಮುಖ್ಯವಾಗಿ ಅಲ್ಲಿ ಕೂಡಲೇ 3–4 ಬೋರ್‌ವೆಲ್‌ಗಳನ್ನು ಹಾಕಿಸಿ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕು. ಮಂಜೂರಾಗಿದ್ದರೂ ಸಹ ಬೀದಿ ದೀಪಗಳನ್ನು ಇನ್ನೂ ಹಾಕಿಲ್ಲ. ಆದಕಾರಣ ಬೀದಿ ದೀಪಗಳನ್ನು ಹಾಕಿಸಬೇಕು. ಈಗ ಅಲ್ಲಿನ ಜನರು ಆಸ್ಪತ್ರೆಗೆ ಹೋಗಲು 4–5 ಮೈಲಿಗಳವರೆಗೆ ನಡೆದುಕೊಂಡು ಹೋಗಬೇಕಾಗಿದೆ. ಈ ಕಷ್ಟವನ್ನು ತಪ್ಪಿಸಲು ಅಲ್ಲಿ ಒಂದು ಆಸ್ಪತ್ರೆಯನ್ನು ತೆರೆಯಬೇಕು. ಒಟ್ಟಿನಲ್ಲಿ ಈ ಕೆಲವೊಂದು ಸೌಲಭ್ಯಗಳನ್ನು ಶೀಘ್ರಗತಿಯಿಂದ ಅಲ್ಲಿ ಮಾಡಿಕೊಡಬೇಕೆಂದು ಹೇಳುತ್ತೇನೆ.

## ಮಾಜಿ ಸೈನಿಕರಿಗೆ ಮೀಸಲಾತಿ ಕೊಡಬೇಕು

ಇನ್ನು ಈ ಸಮಾಜದಲ್ಲಿ ಬಹಳ ನಿರ್ಲಕ್ಷ್ಯಕ್ಕೆ ಒಳಪಟ್ಟಂತೆ ಇನ್ನೊಂದು ವರ್ಗ ಯಾವುದೆಂದರೆ, ಮಾಜಿ–ಸೈನಿಕರು. 18 ರಿಂದ 22ನೇ ವರ್ಷದೊಳಗೆ ಸೈನ್ಯಕ್ಕೆ ಸೇರುವಂತಹ ಯುವಕರು ಅಲ್ಲಿ 15–20 ವರ್ಷಗಳ ಕಾಲ ಸೇವೆ ಸಲ್ಲಿಸಿ ನಂತರ ತಮ್ಮ 30–35ನೇ ವರ್ಷದಲ್ಲಿ ಅಲ್ಲಿಂದ ವಾಪಸ್ ಬರುತ್ತಾರೆ. ಅಂತಹವರಿಗೆ ಕೆಲವೊಂದು ಸವಲತ್ತುಗಳನ್ನು ಒದಗಿಸಿ ಕೊಡಬೇಕೆಂದು ಕಾನೂನಿನಲ್ಲಿ ಹೇಳಿದ್ದರೂ ಸಹ, ಅವು ಸರಿಯಾಗಿ ಅವರಿಗೆ ದೊರಕುವುದಿಲ್ಲ. ಆ ಜನರಿಗೆ ಕಾನೂನು ಪ್ರಕಾರ ಸೌಲಭ್ಯಗಳನ್ನು ಒದಗಿಸಿಕೊಡದೆ ವಂಚನೆ ಮಾಡುತ್ತಿದ್ದಾರೆ. ಈ ದೇಶದ ಸೇವೆ ಮಾಡಲು ಅವರು ಗಡಿ ಪ್ರದೇಶಗಳಿಗೆ ಹೋಗುತ್ತಾರೆ. ಅಲ್ಲಿ ಅವರು ತಮ್ಮ

ಪ್ರಾಣ ಕೊಡಲೂ ಸಹ ಸಿದ್ಧರಿರುತ್ತಾರೆ. ಎಷ್ಟೋ ಜನರು ಗಾಯಗೊಂಡು ಇಲ್ಲವೇ ಅಂಗವಿಕಲರಾಗಿ ವಾಪಸ್ ಬರುತ್ತಾರೆ. ಅಂತಹವರು ನಿರ್ಗತಿಕರಾಗಿ ಅಲೆಯುವ ಒಂದು ಪರಿಸ್ಥಿತಿ ನಮ್ಮ ರಾಜ್ಯದಲ್ಲಿ ಬರಬಾರದು. ಅವರಿಗೆ ಅನ್ಯಾಯವಾಗದಂತೆ ಸರ್ಕಾರದವರು ನೋಡಿಕೊಳ್ಳಬೇಕೆಂದು ಈ ಸಂದರ್ಭದಲ್ಲಿ ನಾನು ಹೇಳುತ್ತೇನೆ. ಅವರಿಗೆ ಯಾವ ರೀತಿ ಅನ್ಯಾಯವಾಗುತ್ತಿದೆ ಎಂಬುದಕ್ಕೆ ಒಂದೆರಡು ಉದಾಹರಣೆಗಳನ್ನು ಮಾತ್ರ ಕೊಡುತ್ತೇನೆ. ಪಬ್ಲಿಕ್ ಸರ್ವಿಸ್ ಕಮಿಷನ್ ಮೂಲಕ ತಾ॥ 23.7.1979ರಲ್ಲಿ 70 ಗೆಜೆಟೆಡ್ ಪೋಸ್ಟ್‌ಗಳಿಗೆ ಸೆಲೆಕ್ಷನ್ ಆಯಿತು. ಅದು ಗೆಜೆಟ್‌ನಲ್ಲಿ ಸಹ ಬಂದಿದೆ. ಆದರೆ ಅದು ಅಂತಿಮವಾಗಲಿಲ್ಲ. ಪುನಃ ಅದನ್ನು ಮಾಡಿಫಿಕೇಷನ್ ಮಾಡಿದರು. ಅಸಿಸ್ಟೆಂಟ್ ಕಮೀಷನರ್, ಅಸಿಸ್ಟೆಂಟ್ ಕಂಟ್ರೋಲರ್, ಕಮರ್ಷಿಯಲ್ ಟ್ಯಾಕ್ಸ್ ಆಫೀಸರ್ ಇತ್ಯಾದಿ 70 ಪೋಸ್ಟ್‌ಗಳಿಗೆ ಬದಲು 37 ಪೋಸ್ಟ್‌ಗಳಿಗೆ ಮಾತ್ರ ಸೆಲೆಕ್ಷನ್ ಮಾಡಿದರು. ಇದು ನಡೆದದ್ದು ತಾ॥ 8.11.1979ರಲ್ಲಿ. ಶೇಕಡಾ ಹತ್ತರಷ್ಟು ಸ್ಥಾನಗಳನ್ನು ಮಾಜೀ–ಸೈನಿಕರಿಗೆ ಮೀಸಲಿಡಬೇಕೆಂದು ಕಾನೂನು ಇದೆ. ಅದರಂತೆ ಈ 37ರ ಪೈಕಿ ನಾಲ್ಕು ಸ್ಥಾನಗಳು ಇವರಿಗೆ ಸಿಗಬೇಕಾಗಿತ್ತು. ಆದರೆ ಒಬ್ಬರಿಗೆ ಮಾತ್ರ ಕೊಟ್ಟಿದ್ದಾರೆ. ಈ ಒಂದು ಅನ್ಯಾಯವನ್ನು ಸರ್ಕಾರದವರು ಸರಿಪಡಿಸಬೇಕೆಂದು ಹೇಳುತ್ತೇನೆ. ಇದೇ ರೀತಿಯಲ್ಲಿ 70 ಸ್ಥಾನಗಳಿಗೆ, ತಹಶೀಲ್ದಾರರು ಹಾಗೂ ಕಮರ್ಷಿಯಲ್ ಟ್ಯಾಕ್ಸ್ ಆಫೀಸರ್ ಹುದ್ದೆಗಳನ್ನು ಭರ್ತಿ ಮಾಡುವ ಸಂದರ್ಭದಲ್ಲಿಯೂ ಸಹ ಇವರಿಗೆ 9 ಸ್ಥಾನ ಮೀಸಲಿಡುವುದಕ್ಕೆ ಬದಲು 6 ಸ್ಥಾನಗಳನ್ನು ಕೊಟ್ಟಿದ್ದಾರೆ. ಹರಿಜನ ಮತ್ತು ಗಿರಿಜನರಿಗೆ ಯಾವ ರೀತಿ ಪ್ರಾತಿನಿಧ್ಯ ಕೊಡಲಾಗುತ್ತದೋ ಅದೇ ರೀತಿಯಲ್ಲಿ ಅವರಿಗೂ ಕೊಡಬೇಕು. ಆದರೆ ಎಚ್ಚರಿಕೆಯಿಂದ ಅವರ ಬಗ್ಗೆ ನೋಡಿಕೊಳ್ಳುವವರು ಯಾರೂ ಇಲ್ಲ. ಒಂದು ವೇಳೆ ಅವರಿಗೆ ಪ್ರಾತಿನಿಧ್ಯ ಕೊಡದಿದ್ದರೂ ಸಹ ಅವರ ಪರವಾಗಿ ಕೇಳುವವರು ಯಾರೂ ಇಲ್ಲ. ಇದೇ ಕಾರಣದಿಂದ ಮೆಡಿಕಲ್ ಹಾಗೂ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಸೀಟುಗಳನ್ನು ಹಂಚುವಾಗಲೂ ಸಹ ಈ ಜನರಿಗೆ ಅನ್ಯಾಯವಾಗುತ್ತಿದೆ. ಇದು ಸರಿಯಲ್ಲ. ನಮ್ಮ ದೇಶದ ಗಡಿಯನ್ನು ರಕ್ಷಣೆ ಮಾಡುವಂತಹ ಜನರ ಬಗ್ಗೆ ಸರ್ಕಾರದವರು ಸ್ವಲ್ಪ ಗಮನ ಹರಿಸಬೇಕೆಂದು ನಾನು ಹೇಳುತ್ತೇನೆ. ಇನ್ನು ಮುಂದೆಯಾದರೂ ಸಹ ಸರ್ಕಾರದ ಮಟ್ಟದಲ್ಲಿ ಆಯ್ಕೆ ಮಾಡುವಾಗ ಇಲ್ಲವೇ ಪಬ್ಲಿಕ್ ಸರ್ವಿಸ್ ಕಮಿಷನ್ ಮೂಲಕ ಸೆಲೆಕ್ಷನ್ ಮಾಡುವಾಗ ಹಾಗೂ ಮೆಡಿಕಲ್ ಮತ್ತು ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಸೀಟ್‌ಗಳನ್ನು ಹಂಚುವಾಗ ಎಚ್ಚರಿಕೆ ವಹಿಸಿ ಅವರಿಗೆ ಅನ್ಯಾಯವಾಗದಂತೆ ಸ್ಥಾನಗಳನ್ನು ಕಾದಿರಿಸಬೇಕೆಂದು ಹೇಳುತ್ತೇನೆ. ಇದರ ಕಡೆಗೆ ಸರ್ಕಾರ ಸೂಕ್ತ ಗಮನಹರಿಸಬೇಕೆಂದು ಕೇಳಿಕೊಳ್ಳುತ್ತೇನೆ.

# ನಾಡು–ನುಡಿ–ಕೋಮು ಸೌಹಾರ್ದತೆ ಕುರಿತು
# ಕರ್ನಾಟಕ ಮತ್ತು ಮಹಾರಾಷ್ಟ್ರ ಗಡಿ ಸಮಸ್ಯೆ

**17ನೇ ಜನವರಿ 1969**

**ಶ್ರೀ ಎ.ಕೆ. ಸುಬ್ಬಯ್ಯ:** ಈ ದಿವಸ ನಮ್ಮ ಸದನದ ಮುಂದೆ ಇರತಕ್ಕ ಒಂದು ಖಾಸಗಿ ನಿರ್ಣಯದ ಬಗ್ಗೆ ಚರ್ಚೆ ಮಾಡುತ್ತಿದ್ದೇವೆ. ಈ ನಿರ್ಣಯದಲ್ಲಿರುವಂತೆ ಕರ್ನಾಟಕ ಮತ್ತು ಮಹಾರಾಷ್ಟ್ರ ಈ ಎರಡು ರಾಜ್ಯಗಳ ಗಡಿ ವ್ಯವಸ್ಥೆಗೆ ಸಂಬಂಧಪಟ್ಟಂತೆ ಒಂದು ಕಮಿಷನ್‌ನ್ನು ಶ್ರೀ ಮಹಾಜನ್ ನೇತೃತ್ವದಲ್ಲಿ ನಮ್ಮ ನಾಯಕರು ನೇಮಕ ಮಾಡಿದರು ಮತ್ತು ಅಂತಹ ಕಮಿಷನ್‌ನವರು ಈಗ ಒಂದು ತೀರ್ಪನ್ನು ಕೊಟ್ಟಿದ್ದಾರೆ. ಅದನ್ನು ಕೂಡಲೇ ಅನುಷ್ಠಾನಕ್ಕೆ ತರಬೇಕು ಮತ್ತು ನಮ್ಮ ರಾಜ್ಯ ಸರ್ಕಾರದವರು ಕೇಂದ್ರ ಸರ್ಕಾರದವರಿಗೆ ಒತ್ತಾಯ ಮಾಡಲು ಇಂತಹ ಒಂದು ನಿರ್ಣಯವನ್ನು ಇಲ್ಲಿ ತಂದಿರುವುದನ್ನು ನಾನೂ ಸ್ವಾಗತಿಸುತ್ತೇನೆ. ಇದನ್ನು ಸ್ವಾಗತಿಸುವುದಕ್ಕೆ ಕಾರಣ ಬೇರೇನಿಲ್ಲ, ನಮಗೆ ಹೆಚ್ಚು ಲಾಭವಾಗುತ್ತದೆ ಎನ್ನುವ ಉದ್ದೇಶದಿಂದ ಅಲ್ಲ. ಆಡಳಿತದ ವ್ಯವಸ್ಥೆಗೋಸ್ಕರ ರಾಜ್ಯಗಳ ಪುನರ್ವಿಂಗಡಣೆಯಾದಾಗಲೇ ನಾವು ಆತಂಕ ವ್ಯಕ್ತಪಡಿಸಿದೆವು. ಇಂತಹ ರಾಜ್ಯಗಳ ಪುನರ್ವಿಂಗಡಣೆ ನಮ್ಮ ರಾಷ್ಟ್ರಕ್ಕೆ ಒಂದು ಶಾಪದಂತೆ ಬಂತು. ಅದನ್ನು ಸರ್ಕಾರದಲ್ಲಿರುವ ನಮ್ಮ ನಾಯಕರು ಇಂದು ಒಪ್ಪಿಕೊಂಡು ಅದಕ್ಕೆ ಅಂಟಿಕೊಂಡಿದ್ದಾರೆ. ಈ ದೇಶದಲ್ಲಿ ರಾಜ್ಯಗಳ ಪುನರ್ವಿಂಡಣೆಯೇ ಬೇಡ ಎಂದು ಹೇಳಿದಾಗ ಆಡಳಿತದ ಪುನರ್ವ್ಯವಸ್ಥೆಗಾಗಿ ಎಂದು ಇತ್ತು. ಆಮೇಲೆ ಈ ಸಮಸ್ಯೆ ಜನಸಾಮಾನ್ಯರಿಗೆ ತೊಂದರೆಯಾಗುವಂತೆ ಆಗಿ ಇಲ್ಲದ ಗಡಿ ಸಮಸ್ಯೆಗಳು ಉಂಟಾಗಿ ಇಂದು ಈ ಸಮಸ್ಯೆ ಒಂದು ಪೆಡಂಭೂತವಾಗಿ ನಮ್ಮ ಮುಂದೆ ಎದ್ದು ಬಂದು ಮತ್ತೆ ಮತ್ತೆ ತಲೆ ಎತ್ತುತ್ತಾ ಬರುತ್ತಿದೆ. ಇಂತಹ ಗಡಿಗಳ ಸಮಸ್ಯೆ ಬರುತ್ತವೆ ಎಂದು ಮೊದಲಿನಿಂದಲೂ ಜನ ಈ ರಾಜ್ಯಗಳ ಪುನರ್ವಿಂಗಡಣೆಗೆ ವಿರೋಧ ಸೂಚಿಸಿಕೊಂಡೇ ಬರುತ್ತಿದ್ದರು. ಆದರೂ ರಾಜ್ಯಗಳ ಪುನರ್ವಿಂಗಡಣೆಯಾಯಿತು. ಇದರಿಂದ ಲಾಭವಾಗಿದೆ ಎಂದೂ ಹೇಳುತ್ತಿದ್ದಾರೆ. ಆದುದರಿಂದ ಇಂತಹ ಸಮಸ್ಯೆಗಳು ಮತ್ತೆ ತಲೆ ಎತ್ತುವುದು ಬೇಡ ಎಂದು ನಮ್ಮ ಮೈಸೂರು ರಾಜ್ಯಪಾಲರು ಕೇಂದ್ರದವರಿಗೆ ಈಗ ಬಂದಿರುವ ತೀರ್ಪನ್ನು ಕೂಡಲೇ ಒಪ್ಪಬೇಕೆಂದು ಒತ್ತಾಯ ಮಾಡಬೇಕು. ಇದರ ಬಗ್ಗೆ ಮತ್ತೆ ಚರ್ಚೆ ಮಾಡುವುದು ಬೇಡ ಮತ್ತು ಈ

ಸಮಸ್ಯೆಗಳು ಇಲ್ಲಿಗೇ ಮುಗಿಯಬೇಕು. ಮುಖ್ಯವಾಗಿ ಈ ಕಮಿಷನ್ ಮಾಡಿದ ಉದ್ದೇಶ ಕರ್ನಾಟಕವಾಗಬೇಕೆಂದು. ಆದರೆ ಅದಕ್ಕೆ ವಿರೋಧ ಮಾಡಿದರು ಎಂದು ಇಂತಹ ಒಂದು ಆಯೋಗವನ್ನು ನೇಮಕ ಮಾಡಿದರು. ಇದು ಮಾಡಲು ಕಾರಣ ನಮ್ಮ ಕರ್ನಾಟಕದ ರಾಜ್ಯದ ನಾಯಕರು ಕೇಂದ್ರದಲ್ಲಿರುವ ದೆಹಲಿಯ ನಾಯಕರ ಮೇಲೆ ತಮ್ಮ ಪ್ರಭಾವವನ್ನು ಬೀರುವುದರಲ್ಲಿ ಅಸಮರ್ಥರಾದುದು ಎನ್ನುವುದು ನಮಗೆ ಚೆನ್ನಾಗಿಗೊತ್ತಾಗಿದೆ. ಇದರಿಂದಾಗಿಯೇ ಇಂತಹ ಒಂದು ಆಯೋಗ ನೇಮಕವಾಯಿತು. ಆದುದರಿಂದ ಈಗ ಆಯೋಗ ಕೊಟ್ಟಿರುವ ತೀರ್ಪನ್ನಾದರೂ ಪೂರ್ತಿಯಾಗಿ ಒಪ್ಪಿಕೊಳ್ಳಬೇಕು ಎಂದು ಕೇಂದ್ರಕ್ಕೆ ಹೇಳಿ ಇದನ್ನು ಅನುಷ್ಠಾನಕ್ಕೆ ತರಬೇಕು ಎಂದು ಇಲ್ಲಿ ಒತ್ತಾಯ ಮಾಡುತ್ತೇನೆ. ಈಗ ತೀರ್ಪು ಬರೆದ ಮೇಲೆ ಇದನ್ನು ಒಪ್ಪದಂತೆ ಮಾಡುವುದು ಸರಿಯಲ್ಲ. ಇದರಿಂದಾಗಿ ನಮ್ಮ ದೇಶದಲ್ಲಿ ಹಲವಾರು ಸಮಸ್ಯೆಗಳು ಬರಲು ಕಾರಣವಾಗಿವೆ. ಏನೇ ಆಗಲಿ ಇದರ ಬಗ್ಗೆ ಒಂದು ನಿರ್ಧಾರವಾಗಲೇ ಬೇಕು. ಇದನ್ನು ನಿಧಾನ ಮಾಡುವುದು ಯಾವ ಕಾಲಕ್ಕೂ ಸರಿಯಲ್ಲ. ಸಾಧ್ಯವಾದ ಮಟ್ಟಿಗೂ ಸಮಸ್ಯೆಗಳು ಬರುತ್ತವೆ. ಆದರೆ ಅಂತಹ ಸಮಸ್ಯೆಗಳನ್ನು ನಿವಾರಣೆ ಮಾಡಲು ಪ್ರಯತ್ನ ಮಾಡಬೇಕು ಮತ್ತು ಇಂತಹ ಸಮಸ್ಯೆಗಳನ್ನು ಪರಿಹಾರ ಮಾಡಿ ಅದು ಅನುಷ್ಠಾನಕ್ಕೆ ಬರುವಂತೆ ಮಾಡಬೇಕು ಮತ್ತು ಇಲ್ಲದ ಗಡಿ ಪ್ರಶ್ನೆಗಳು ತಲೆ ಎತ್ತದಂತೆ ಮಾಡಬೇಕು. ಈ ಸಂದರ್ಭದಲ್ಲಿ ಸರಕಾರದವರು ತಳೆದಿರತಕ್ಕ ನಿಲುವು ಸ್ವಾಗತಾರ್ಹವಾದುದು ಹಾಗೂ ನಮ್ಮ ಸರಕಾರದವರು ಮಾಡುತ್ತಿರುವ ಒಂದು ವಾದ ಬಹಳ ಉಚಿತವಾದುದೂ ಆಗಿದೆ. ಬೀದರ್‌ನಲ್ಲಿ ನಡೆದ ಕಾಂಗ್ರೆಸ್ಸು ಅಧಿವೇಶನದಲ್ಲಿ ಕಾಂಗ್ರೆಸ್ಸಿನ ನಾಯಕರುಗಳು ಸೇರಿ ಒಂದು ನಿರ್ಣಯ ಮಾಡಿದರು. ಅದೇನೆಂದರೆ, ಕೇಂದ್ರ ಸರ್ಕಾರದವರು ಈ ತೀರ್ಪನ್ನು ಬೇಗನೇ ಅನುಷ್ಠಾನಕ್ಕೆ ತರಬೇಕು. ಅದನ್ನು ಆಚರಣೆಗೆ ತಾರದೇ ಇದ್ದರೆ, ಕನ್ನಡ ಜನತೆ ಒಂದು ಚಳುವಳಿ ಮಾಡಬೇಕಾಗಿ ಬರುತ್ತದೆ.

ಕರ್ನಾಟಕದಲ್ಲಿ, ಮಹಾರಾಷ್ಟ್ರದಲ್ಲಿ, ಡೆಲ್ಲಿಯಲ್ಲಿ ಕಾಂಗ್ರೆಸ್ ಸರ್ಕಾರಗಳು ಇವೆ. ಆದರೂ ಕರ್ನಾಟಕದಲ್ಲಿರುವ ಕಾಂಗ್ರೆಸ್ ಸರ್ಕಾರದವರು ಇದುವರೆಗೂ ಯಾವ ತೀರ್ಮಾನವನ್ನೂ ಕೈಗೊಂಡಿಲ್ಲ.

**ಸಭಾಪತಿಯವರು:** ಕಾಂಗ್ರೆಸ್‌ನವರು ಈ ಸರ್ಕಾರವನ್ನು ಜನಸಂಘಕ್ಕೆ ವಹಿಸಿಕೊಟ್ಟರೆ ಈ ಕೆಲಸವನ್ನು ಇತ್ಯರ್ಥ ಮಾಡುವುದಕ್ಕೆ ಸಿದ್ಧರಿದ್ದೀರಾ?

**ಶ್ರೀ ಎ.ಕೆ. ಸುಬ್ಬಯ್ಯ:** ಮೊದಲು ಈ ಸರ್ಕಾರವನ್ನು ಜನಸಂಘಕ್ಕೆ ವಹಿಸಿ ಕೊಟ್ಟರೆ ಇದನ್ನು ಇತ್ಯರ್ಥ ಮಾಡಿ ತೋರಿಸುತ್ತೇವೆ. ನೀವು ವಹಿಸಿಕೊಡಲು ಸಿದ್ಧರಿದ್ದೀರಾ?

**ಸಭಾಪತಿಯವರು:** ಕಾಸರಗೋಡಿನ ಜನಸಂಘದವರು ಮತ್ತು ಕರ್ನಾಟಕ ಜನಸಂಘದವರು ಈ ಕಮಿಷನ್ ರಚನೆ ಆಗಬೇಕೆಂದು ಒಂದು ನಿರ್ಣಯ ಮಾಡಿದ್ದರು.

**ಶ್ರೀ ಎ.ಕೆ. ಸುಬ್ಬಯ್ಯ:** ಇದು ಯಾವ ಜನಸಂಘದವರು ಮಾಡಿದರೋ ಏನೋ ನನಗೆ ಗೊತ್ತಿಲ್ಲ. ಕರ್ನಾಟಕದ ಜನಸಂಘದವರೇ ಆಗಲಿ, ಕಾಸರಗೋಡಿನ ಜನ ಸಂಘದವರೇ ಆಗಲಿ ಅಖಿಲ ಭಾರತಮಟ್ಟದ ಜನಸಂಘದವರೇ ಆಗಲಿ ಇದನ್ನು ಮಾಡಿದ್ದರೆ ಇದರಲ್ಲಿ ಸ್ಪಷ್ಟವಾದ ನಿರ್ಣಯವನ್ನು ತೆಗೆದುಕೊಂಡು ಮಾಡಿದ್ದಾರೆ ಎನ್ನುವುದು ಗೊತ್ತಾಗುತ್ತದೆ. ಈ ಒಂದು ಆಯೋಗವನ್ನು ರಚನೆ ಮಾಡುವ ಕಾಲದಲ್ಲಿ ಕರ್ನಾಟಕದವರು ಬೇಡ ಎಂದು ಹೇಳಿದರೂ ಮಹಾರಾಷ್ಟ್ರದ ಪ್ರಭಾವ ಕೇಂದ್ರ ಸರ್ಕಾರದವರ ಮೇಲೆ ಬಿದ್ದಿದೆ. ಅವರ ಒಂದು ಒತ್ತಾಯದಿಂದ ಈ ಆಯೋಗವನ್ನು ರಚನೆ ಮಾಡಿದ್ದರು. ಆ ಆಯೋಗದವರು ತಮ್ಮ ಅಂತಿಮ ವರದಿಯನ್ನು ಒಪ್ಪಿಸಿದ ಮೇಲೆ ಇದನ್ನು ಒಪ್ಪಿಕೊಳ್ಳಿ ಇದನ್ನು ಅನುಷ್ಠಾನಕ್ಕೆ ತನ್ನಿ ಎಂದು ಹೇಳಿದರೂ ಕೂಡ ಮಹಾರಾಷ್ಟ್ರ ಸರ್ಕಾರದವರು ಇದನ್ನು ಬೇಡ ಎಂದು ಹೇಳುತ್ತಿದ್ದಾರೆ. ಕೇಂದ್ರ ಸರ್ಕಾರದವರೂ ಮಹಾರಾಷ್ಟ್ರ ಸರ್ಕಾರದ ಮಾತಿನ ಪ್ರಕಾರ ಮುಂದೂಡುತ್ತಿದ್ದಾರೆ. ಇದನ್ನು ನೋಡಿದರೆ ಮಹಾರಾಷ್ಟ್ರದವರ ಪ್ರಭಾವವೇ ಕೇಂದ್ರ ಸರ್ಕಾರದವರ ಮೇಲೆ ಇದೆ ಎನ್ನುವುದು ಗೊತ್ತಾಗುತ್ತದೆ. ಇದರಿಂದ ನಾನು ಅರ್ಥ ಮಾಡಿಕೊಳ್ಳುವುದು ಇಷ್ಟೆ, ನಮ್ಮ ಕರ್ನಾಟಕದ ಕಾಂಗ್ರೆಸ್ ಸದಸ್ಯರಿಗೆ ಕೇಂದ್ರದಲ್ಲಿ ಯಾವ ರೀತಿಯ ಪ್ರಭಾವವೂ ಇಲ್ಲ. ಇವರು ಕೈಕಟ್ಟಿಕೊಂಡು ನಿಲ್ಲುವ ಪರಿಸ್ಥಿತಿಯಲ್ಲಿದ್ದಾರೆ ಎನ್ನುವುದು ಗೊತ್ತಾಗುತ್ತದೆ. ಇದು ಒಂದರಲ್ಲಿ ಮಾತ್ರವಲ್ಲ, ನಮ್ಮ ಸರ್ಕಾರದ ಪ್ರಚಾರ ತಂತ್ರವೂ ಕೂಡ ಬಹಳ ಹದಗೆಟ್ಟಿದೆ ಎಂದು ಹೇಳಬಹುದು. ಈವೊತ್ತಿನ ದಿವಸ ಈ ಮಹಾಜನ ಆಯೋಗದ ವರದಿಯ ಬಗ್ಗೆ ಮಹಾರಾಷ್ಟ್ರದವರು ಯಾವ ರೀತಿ ಪ್ರಚಾರ ಕೈಗೊಂಡಿದ್ದಾರೆ ಎಂಬುದು ನಾನು ನೋಡಿದ್ದೇನೆ. ಅವರು ಹಸ್ತಪ್ರತಿಗಳನ್ನೂ ಪುಸ್ತಕಗಳನ್ನೂ ಪ್ರಕಟ ಮಾಡಿದ್ದಾರೆ.

**ಸಭಾಪತಿಯವರು:** ನಾವೂ ಕೂಡ ಹಿಂದಿ, ಮರಾಠಿ, ಕನ್ನಡ ಇವುಗಳಲ್ಲಿ ಬೇಕಾದಷ್ಟು ಪ್ರಕಟ ಮಾಡಿದ್ದೇವೆ.

**ಶ್ರೀ ಎ.ಕೆ. ಸುಬ್ಬಯ್ಯ:** ಇರಬಹುದು. ಆದರೆ ಮಹಾರಾಷ್ಟ್ರದವರಷ್ಟು ಪ್ರಚಾರ ನಿಮ್ಮದು ಇಲ್ಲ ಎಂದು ಹೇಳುತ್ತೇನೆ. ಈವೊತ್ತಿನ ದಿವಸ ಸಮಸ್ಯೆಯನ್ನು ಪರಿಹಾರ ಮಾಡದೇ ಇದ್ದರೆ ಕರ್ನಾಟಕದ ಜನತೆಗೆ ತಲೆ ಕೆಡುವಂತಾಗುತ್ತದೆ. ನಮ್ಮ ಸರ್ಕಾರದವರು ಕನಿಷ್ಟ ಪಕ್ಷ ಎ.ಐ.ಸಿ.ಸಿ. ಅಧಿವೇಶನದಲ್ಲಾದರೂ ಈ ವರದಿಯ ಬಗ್ಗೆ ತೀರ್ಮಾನ ಕೈಗೊಳ್ಳಲು ಒತ್ತಾಯಿಸಿದರೆಂದರೆ ಅಲ್ಲೂ ಇವರ ಮಾತು ಕೇಳುವುದಿಲ್ಲ. ಮೈಸೂರಿನ ಕಾಂಗ್ರೆಸ್ ಸರ್ಕಾರಕ್ಕೆ ಎ.ಐ.ಸಿ.ಸಿ. ಯಲ್ಲೂ ಕೂಡ ಯಾವ ರೀತಿಯ ಪ್ರಭಾವವೂ ಇಲ್ಲವೆಂದು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಇದರಲ್ಲಿ ವಿಫಲತೆಯನ್ನು ಹೊಂದಿರುವುದರಿಂದ ಜನತೆಯನ್ನು ಮತ್ತೆ ಚಳುವಳಿಯ ಜಂಜಾಟದ ಮಧ್ಯದಲ್ಲಿ ತಳ್ಳುವ ಪರಿಸ್ಥಿತಿ ಕಂಡುಬರುತ್ತದೆ. ಆದುದರಿಂದ ನಮ್ಮ ಸರ್ಕಾರದವರಿಗೆ ನಾನು ಸೂಚನೆ ಮಾಡುವುದು ಇಷ್ಟೆ? ನಾವು ಎಷ್ಟೇ ಆಗ್ರಹಪೂರ್ವಕವಾಗಿ ನಮ್ಮ ನ್ಯಾಯ ರೀತಿಯ ಒಂದು ವಿಚಾರವನ್ನು ಮುಂದಿಟ್ಟರೂ ಕೂಡ ನೀವು ಕೇಳುವುದಿಲ್ಲ. ಕೇಳುವುದಾದರೆ ನೀವು ರಾಜೀನಾಮೆ ಕೊಟ್ಟು ಜನತೆಯ ಜೊತೆಗೆ ಚಳುವಳಿಗೆ ಬನ್ನಿ. ಆಗ ಇದಕ್ಕೋಸ್ಕರ ಅಧಿಕಾರವನ್ನು ಬಿಟ್ಟಿದ್ದಾರೆ ಎಂದು ತಿಳಿದು ಜನತೆ ನಿಮ್ಮನ್ನು ಹೊಗಳುತ್ತಾರೆ. ಅದು ಬಿಟ್ಟು ನಾವು ಅಧಿಕಾರದಲ್ಲೇ ಕೂತಿರುತ್ತೇವೆ ಚಳುವಳಿ ಮಾಡಲಿ ಎಂದು ಜನತೆಯನ್ನು ಜಂಜಾಟಕ್ಕೆ ಸಿಕ್ಕಿಹಾಕಿಸುವಂಥಾದ್ದು ಸರಿಯಲ್ಲ. ಕೇಂದ್ರ ಸರ್ಕಾರದವರು ಮಹಾಜನ ಆಯೋಗದ ಶಿಫಾರಸ್ಸುಗಳನ್ನು ತೀರ್ಪೆಂದು ಪರಿಗಣಿಸಬೇಕು. ಪರಿಗಣಿಸದಿದ್ದರೆ ನೀವು ರಾಜೀನಾಮೆ ಕೊಡಬೇಕು. ನಮ್ಮ ಸರ್ಕಾರದವರು ಇದನ್ನು ಬೇಗ ಪರಿಹಾರ ಮಾಡಬೇಕು. ಇದಕ್ಕೆ ಒಂದು ಮಾರ್ಗದರ್ಶನವನ್ನು ಕೊಡಬೇಕು. ಮತ್ತು ಜನತೆಯ ಚಳುವಳಿ ಏನು ಇದೆ, ಅದನ್ನು ಆದಷ್ಟು ಬೇಗ ತಪ್ಪಿಸಬೇಕು, ಜನತೆಯು ಸುಖಸಂತೋಷದಿಂದ ಇರಬೇಕು ಎಂದು ಹೇಳುತ್ತೇನೆ.

# ಮಹಾಜನ್ ಕಮಿಷನ್ ವರದಿ ಬಹಳ ಮುಖ್ಯ

**24ನೇ ಡಿಸೆಂಬರ್ 1970**

**ಶ್ರೀ ಎ.ಕೆ. ಸುಬ್ಬಯ್ಯ (ಪದವೀಧರರ ಕ್ಷೇತ್ರ):** ಈಗ ಸರಕಾರದವರು ನಮ್ಮೆಲ್ಲರಿಗೂ ಟೆಲಿಗ್ರಾಂ ಕೊಟ್ಟು ಈ ದೇಶದಲ್ಲಿ ಈಗ ಉದ್ಭವವಾಗಿರತಕ್ಕ ತುರ್ತು ಪರಿಸ್ಥಿತಿಯ ಬಗ್ಗೆ ಚರ್ಚೆ ಮಾಡುವುದಕ್ಕೆ ನಮ್ಮೆಲ್ಲರನ್ನೂ ಕರೆಸಿಕೊಂಡಿದ್ದಾರೆ. ಮಹಾಜನ್ ಕಮಿಷನ್ನಿನ ವರದಿಯನ್ನು ಪಾರ್ಲಿಮೆಂಟ್ ಮುಂದೆ ಇಟ್ಟ ಪರಿಣಾಮವಾಗಿ ಈ ದೇಶದಲ್ಲಿ ಏನು ಪರಿಣಾಮ ಉಂಟಾಗಿದೆ ಅದರ ಬಗ್ಗೆ ಚರ್ಚೆ ಮಾಡಬೇಕು ಎಂದು ಈ ತುರ್ತು ಅಧಿವೇಶನವನ್ನು ಕರೆದಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ಈಗ ಉಂಟಾಗಿರತಕ್ಕ ಪರಿಸ್ಥಿತಿಯ ಚರ್ಚೆಗಿಂತ ಪ್ರಾಮುಖ್ಯವಾದ ವಿಷಯ ಬೇರೆ ಇಲ್ಲ ಎಂದು ನಾನು ತಿಳಿಸುವುದಕ್ಕೆ ಇಷ್ಟಪಡುತ್ತೇನೆ. ಅದಕ್ಕಿಂತ ತುರ್ತು ಪರಿಸ್ಥಿತಿ ಬೇರೆ ಯಾವುದೂ ಇಲ್ಲ. ಆದ್ದರಿಂದ ಅದನ್ನು ಮುಂದಕ್ಕೆ ಹಾಕಿ ಬೇರೆ ವಿಷಯವನ್ನು ಚರ್ಚೆಗೆ ತೆಗೆದುಕೊಳ್ಳುವ ವಿಷಯವನ್ನು ಯಾರೂ ಒಪ್ಪುವುದಕ್ಕೆ ಸಾಧ್ಯವಿಲ್ಲ. ಮಹಾಜನ್ ಕಮಿಷನ್ನಿನ ವರದಿಯನ್ನು ಪಾರ್ಲಿಮೆಂಟಿನ ಮುಂದೆ ಮಂಡಿಸಿರುವುದರಿಂದ ಆ ಬಗ್ಗೆ ದೇಶದ ಮೂಲೆ ಮೂಲೆಗಳಲ್ಲಿ ಚಳುವಳಿ ಪ್ರಾರಂಭವಾಗಿರಬಹುದು. ಆದರೆ ಈಗ ಕೆಲವು ಮಾನ್ಯ ಸದಸ್ಯರು ಈ ಸಭೆಯ ಮುಂದೆ ತಂದಿರತಕ್ಕ ನಿಲುವಳಿ ಸೂಚನೆಯನ್ನು ಚರ್ಚೆಗೆ ತೆಗೆದುಕೊಳ್ಳತಕ್ಕದ್ದು ಸರಿಯಾದುದ್ದಲ್ಲ. ಈಗ ದೇಶದಲ್ಲಿ ಉದ್ಭವವಾಗಿರತಕ್ಕ ಗಡಿ ಸಮಸ್ಯೆಯ ವಿಚಾರ ಇಡೀ ಕರ್ನಾಟಕ ಜನತೆಗೆ ಸಂಬಂಧಪಟ್ಟ ವಿಷಯ ಇದು ಯಾವುದೇ ಒಂದು ಪಾರ್ಟಿಗೆ ಸಂಬಂಧಪಟ್ಟ ವಿಷಯವಲ್ಲ. ಚಳುವಳಿ ನಡೆಯುವಾಗ ಇದು ಜನಸಂಘದ ಆಫೀಸ್, ಕಾಂಗ್ರೆಸ್ ಆಫೀಸ್, ಅಥವಾ ಬೇರೆ ಯಾವ ಆಫೀಸ್ ಎಂದು ನೋಡುವುದಿಲ್ಲ. ಈಗ ಪಾರ್ಲಿಮೆಂಟ್ ಮುಂದೆ ಮಹಾಜನ್ ವರದಿಯನ್ನು ಇಟ್ಟಿದ್ದಾರೆ. ಆದಕಾರಣ ಅದಕ್ಕಿಂತ ತುರ್ತು ಪರಿಸ್ಥಿತಿ ಬೇರೆ ಯಾವುದೂ ಇಲ್ಲ. ಈ ದೃಷ್ಟಿಯಿಂದ ಮೊದಲು ಈ ವಿಚಾರವನ್ನು ಚರ್ಚೆಗೆ ತೆಗೆದುಕೊಂಡು ಸರ್ಕಾರ ಈ ಬಗ್ಗೆ ಯಾವ ಕ್ರಮ ತೆಗೆದುಕೊಳ್ಳುತ್ತಾರೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಬೇಕು. ಈಗ ಕೆಲವು ಮಾನ್ಯ ಸದಸ್ಯರು ನಿಲುವಳಿ ಸೂಚನೆಯನ್ನು ಏನು ತಂದಿದ್ದಾರೆ ಅದಕ್ಕೆ ಪ್ರಾಶಸ್ತ್ಯವನ್ನು ಕೊಡುವುದರಲ್ಲಿ ಅರ್ಥವಿಲ್ಲ. ಆದ್ದರಿಂದ ಮೊದಲು ಸರ್ಕಾರದವರು ನಮ್ಮನ್ನೆಲ್ಲಾ ಏತಕ್ಕೋಸ್ಕರ ಟೆಲಿಗ್ರಾಂ ಕೊಟ್ಟು ಕರೆಸಿಕೊಂಡಿದ್ದಾರೆ. ಅದಕ್ಕೆ ನೇರವಾಗಿ ಪ್ರವೇಶ ಮಾಡಬೇಕು. ನಿಲುವಳಿ ಸೂಚನೆಗಿಂತ ಮಹಾಜನ್ ಕಮಿಷನ್ ವರದಿಯ ವಿಷಯ ಬಹಳ ಮುಖ್ಯವಾದ ವಿಚಾರವೆಂದು ನಾನು ಸ್ಪಷ್ಟವಾಗಿ ತಿಳಿಸುವುದಕ್ಕೆ ಇಷ್ಟಪಡುತ್ತೇನೆ.

## ಹರಿಜನ ಮಹಿಳೆಗೆ ಕುಟುಂಬ ಪಿಂಚಣಿ

**18ನೇ ಅಕ್ಟೋಬರ್ 1973**

**ಶ್ರೀ ಎ.ಕೆ. ಸುಬ್ಬಯ್ಯ (ಪದವೀಧರರ ಕ್ಷೇತ್ರ):** ಈ ಸಂದರ್ಭದಲ್ಲಿ ಬಹಳ ಪ್ರಾಮುಖ್ಯವಾದ ಒಂದು ವಿಚಾರವನ್ನು ಅಧ್ಯಕ್ಷರ ಮೂಲಕ ಸರ್ಕಾರದ ಗಮನಕ್ಕೆ ತರಬೇಕಾಗಿದೆ. ನನಗೆ ಹರಿಜನರ ವರ್ಗಕ್ಕೆ ಸೇರಿದ ಒಬ್ಬ ಹೆಣ್ಣು ಮಗಳಿಂದ ಅಂದರೆ ಲಿಂಗಮ್ಮ ಎಂಬಾಕೆಯಿಂದ ಬಹಳ ಗುರುತರವಾದ ದೂರು ಬಂದಿದೆ. ಈ ಹೆಣ್ಣು ಮಗಳ ಪತಿ ಗ್ರಾಮ ಸೇವಕನಾಗಿ ಕೆಲಸ ಮಾಡುತ್ತಿದ್ದವನು 1959ರಲ್ಲಿ ಮೃತಪಟ್ಟಿದ್ದಾನೆ. ಆ ಸಂದರ್ಭದಲ್ಲಿ ಈ ಹೆಣ್ಣು ಮಗಳು ಫ್ಯಾಮಿಲಿ ಪೆನ್‌ಷನ್ ಪಡೆಯತಕ್ಕ ಅರ್ಜಿ ಹಾಕಿಕೊಂಡು ಏನೇನು ಪ್ರಯತ್ನ ಮಾಡಿದರೂ ಆಕೆಗೆ ಅದನ್ನು ಕೊಟ್ಟಿಲ್ಲ. ಆಕೆ ಬಹಳ ನಿರ್ಗತಿಕಳು. ಆದರೆ ಇದು ಒಂದು ವರ್ಷದ ಕೆಳಗೆ ಮಂಜೂರಾಗಿದ್ದರೂ ಅದಿನ್ನೂ ಆ ಹೆಣ್ಣು ಮಗಳಿಗೆ ಸಿಕ್ಕಿಲ್ಲ. ಇದೇ ವಿಚಾರ ಇತ್ತೀಚೆಗೆ ಪತ್ರಿಕೆಗಳಲ್ಲಿ ವಾಚಕರ ವಾಣಿಯಲ್ಲೂ ಬಂದಿದೆ. ಈಕೆ ಒಂದು ದುರ್ಬಲ ವರ್ಗಕ್ಕೆ ಸೇರಿದ ಹೆಣ್ಣು ಮಗಳಾದ್ದರಿಂದ ಯಾರೂ ಈ ವಿಚಾರದತ್ತ ಅಷ್ಟು ಗಮನಕೊಟ್ಟಿಲ್ಲ. ಇದೊಂದು ಗಂಭೀರ ಪರಿಸ್ಥಿತಿಗೆ ಸಂಬಂಧಪಟ್ಟ ವಿಷಯ. ಇದನ್ನು ನಾನು ಮಾನ್ಯ ಅಧ್ಯಕ್ಷರ ಮೂಲಕ ಸರ್ಕಾರದವರ ಗಮನಕ್ಕೆ ತರಬಯಸುತ್ತೇನೆ. ಈ ಹೆಣ್ಣು ಮಗಳು ಕುಣಿಗಲ್ ತಾಲ್ಲೂಕ್ ಉಜ್ಜನೀ ಗ್ರಾಮಕ್ಕೆ ಸೇರಿದವಳು. ಸರ್ಕಾರದವರು ದಯಮಾಡಿ ಈ ವಿಚಾರದಲ್ಲಿ ಕೂಡಲೇ ಕ್ರಮ ಕೈಗೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

## ಶ್ರೀ ಬಸವಲಿಂಗಪ್ಪನವರ ಹೇಳಿಕೆಗೆ ಪ್ರತಿಕ್ರಿಯೆ

**28ನೇ ಏಪ್ರಿಲ್ 1973**

**ಶ್ರೀ ಎ.ಕೆ. ಸುಬ್ಬಯ್ಯ** (ಪದವೀಧರರ ಕ್ಷೇತ್ರ): ಮಾನ್ಯ ಸಭಾಪತಿಗಳೇ ಇಲ್ಲಿ ತಂದಿರುವ ನಿಲುವಳಿ ಸೂಚನೆ ಸಂಪೂರ್ಣವಾಗಿ ಯೋಗ್ಯವಾಗಿದೆ. ತಾವು ಇದನ್ನು ಸ್ವೀಕರಿಸಬಹುದು. ಇದನ್ನು ಸಮರ್ಥನೆ ಮಾಡಲು ಒಂದೆರಡು ಮಾತುಗಳನ್ನು ಇಲ್ಲಿ ಹೇಳಲಿಕ್ಕೆ ತಾವು ಅವಕಾಶ ಕೊಡಬೇಕು. ನಮ್ಮ ರಾಜ್ಯದಲ್ಲಿ ಹರಿಜನರ ಹಾಗೂ ಗಿರಿಜನರ ಸಮಸ್ಯೆ ಏನಿದೆ ಇದು ಮೊದಲಿನಿಂದಲೂ ಇದೆ. ಇವರನ್ನು ಮುಂದಕ್ಕೆ ತರಬೇಕೆಂದು ಪ್ರಯತ್ನಗಳೂ ನಡೆಯುತ್ತಿವೆ. ಇದರ ಬಗ್ಗೆ ವಾದ ವಿವಾದ ಮಾಡಲು ನಾನು ಹೋಗುವುದಿಲ್ಲ. ಇಂತಹ ಒಂದು ಗಹನವಾದ ವಿಚಾರದಲ್ಲಿ ಸರಕಾರದ ಜವಾಬುದಾರಿಯಲ್ಲಿ ಇರುವವರು ಬಾಯಿಗೆ ಬಂದಂತೆ ಮಾತನಾಡುವ ಅಗತ್ಯವಿದೆಯೇ? ಇದು ನ್ಯಾಯವಲ್ಲ. ಇದಕ್ಕಾಗಿ ತಾವು ನಿಲುವಳಿ ಸೂಚನೆಗೆ ಪರ್ಮಿಷನ್ ಕೊಡಬೇಕು ಎಂದು ನಾವು ಕೇಳುತ್ತಿರುವುದು. ನಮ್ಮ ವಿರೋಧ ಪಕ್ಷದ ಎಲ್ಲ ಸದಸ್ಯರಿಗೂ ಇದನ್ನು ನೋಡಿ ತುಂಬಾ ದುಃಖಪಡಬೇಕಾಗಿದೆ. ಇಂತಹ ಮಾತುಗಳನ್ನು ಶ್ರೀಮಾನ್ ಬಸವಲಿಂಗಪ್ಪನವರು ಹೇಳುತ್ತಲೇ ಬರುತ್ತಿದ್ದಾರೆ. 15 ದಿನಕ್ಕೊಂದರಂತೆ ಇಂತಹ ಹೇಳಿಕೆಗಳನ್ನು ಪತ್ರಿಕೆಗಳಲ್ಲಿ ಕೊಡುತ್ತಿದ್ದಾರೆ. ಇಂದಿನ ದಿವಸ ಬ್ರಾಹ್ಮಣರು ದೇವರ ಪೂಜೆ ಮಾಡುವ ಫೋಟೋಗಳನ್ನು ಕಿತ್ತು ಬಿಸಾಡಿ ಎಂದು ಹೇಳಬಹುದು. ನಾಳೆ ದಿನ ಶ್ರೀಮತಿ ಇಂದಿರಾಗಾಂಧಿಯವರ ಫೋಟೋ ಕಿತ್ತು ಬಿಸಾಡಿ ಎಂದು ಹೇಳಬಹುದು. ಇನ್ನೊಂದು ದಿನ ನಮ್ಮ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ದೇವರಾಜ ಅರಸ್‌ರವರ ಪೋಟೋವನ್ನು ಕಿತ್ತು ಬಿಸಾಡಿ ಎಂದು ಹೇಳಬಹುದು. ಇನ್ನೂ ಏನೇನೂ ಮಾಡಬೇಕೆಂದಿದ್ದಾರೋ ನಮಗೆ ಗೊತ್ತಿಲ್ಲ.

## ಆಡಳಿತ ಭಾಷೆಯಾಗಿ ಕನ್ನಡ

**24ನೇ ಅಕ್ಟೋಬರ್ 1973**

**ಶ್ರೀ ಎ.ಕೆ. ಸುಬ್ಬಯ್ಯ:** ಆದಷ್ಟು ಹೆಚ್ಚಾಗಿ ಕನ್ನಡ ಶಾಲೆಗೆ ಪ್ರೋತ್ಸಾಹ ಕೊಡಬೇಕು, ರಾಜ್ಯದಲ್ಲಿ ಪ್ರತಿಯೊಂದು ವ್ಯವಹಾರವೂ ಕನ್ನಡದಲ್ಲಿ ನಡೆಯುವ ಹಾಗೆ ಪ್ರಯತ್ನ ಮಾಡಬೇಕು ಎಂದು ಸಭಾ ನಾಯಕರು ಹೇಳುವ ಮಾತನ್ನು ಸ್ವಾಗತಿಸುತ್ತಾ ಅದರ ಜೊತೆಯಲ್ಲಿ ಕನ್ನಡ ಭಾಷೆಯ ಶುದ್ದೀಕರಣದ ಬಗ್ಗೆ ಸರ್ಕಾರ ಗಮನವನ್ನು ಹರಿಸಬೇಕು ಎಂದು ಕೇಳಿಕೊಳ್ಳುತ್ತೇನೆ. ಇದಕ್ಕೆ ಒಂದು ಉದಾಹರಣೆ ಕೊಡಬಯಸುತ್ತೇನೆ. ಎಂ.ಎಸ್.ಆರ್.ಟಿ.ಸಿ. ಬಸ್ ಸ್ಟ್ಯಾಂಡಿನಿಂದ ಮೈಸೂರು ರಸ್ತೆಗೆ ಸೇರುವ ಮಧ್ಯದಲ್ಲಿ ರಾಯನ್ ಸರ್ಕಲ್ ಇದೆ. ಅಲ್ಲಿ ಒಂದು ಕನ್ನಡ ಪ್ರಾಥಮಿಕ ಶಾಲೆ ಇದೆ; ಆ ಸ್ಕೂಲಿನ ಮೇಲೆ ಗವರ್ನ್‌ಮೆಂಟ್ ಲೋಯರ್ ಪ್ರೈಮರಿ ಕನ್ನಡ ಬಾಯ್ಸ್ ಸ್ಕೂಲ್' ಎಂದು ಬರೆದಿದ್ದಾರೆ. ಲಿಪಿ ಬರೆದಿರುವುದು ಕನ್ನಡದಲ್ಲಿ, ಇಂಥ ಅಭ್ಯಾಸವನ್ನು ತಡೆಗಟ್ಟುವುದಕ್ಕೆ ಸರ್ಕಾರದವರು ಗಮನ ಹರಿಸುತ್ತಾರೆಯೇ?

**ಶ್ರೀ ಎನ್. ಹುಚ್ಚಮಾಸ್ತಿಗೌಡ:** ಮಾನ್ಯ ಸದಸ್ಯರಿಗೆ ಸರ್ಕಾರದ ಪರವಾಗಿ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ನಾಮಫಲಕಗಳನ್ನು ನೋಡಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡಲಿಲ್ಲ ಎಂದು ಹೇಳಿರುವುದನ್ನು ಸ್ವಾಗತಿಸುತ್ತೇನೆ. ಕಾರ್ಪೋರೇಷನ್ ಶಾಲೆಗಳು ಆಗಿರಲಿ ಅಥವಾ ಯಾವ ಸಂಸ್ಥೆಯವರೇ ನಾಮ ಫಲಕವನ್ನು ಹಾಕಿರಲಿ, ಅಂಥವರಿಗೆ ಸರ್ಕ್ಯುಲರ್ ಕಳುಹಿಸಿ ಅಂಥದನ್ನು ಸರಿಪಡಿಸುವುದಕ್ಕೆ ಪ್ರಯತ್ನ ಮಾಡುತ್ತೇವೆ.

## ಹಲ್ಲೆ ನಡೆಸುವ ಜನರಿಗೆ ಕಠಿಣ ಶಿಕ್ಷೆ

**16ನೇ ಜುಲೈ 1980**

**ಶ್ರೀ ಎ.ಕೆ. ಸುಬ್ಬಯ್ಯ:** ಅಧ್ಯಕ್ಷರೇ, ಮೈಸೂರಿನಲ್ಲಿ ಏನು ನಡೆಯಿತು ಇದು ಬಹಳ ದುರ್ದೈವದ ಘಟನೆ. ಇದರ ಬಗ್ಗೆ ಸತ್ಯ ಸಂಗತಿ ಬಹಳ ಜನರಿಗೆ ಗೊತ್ತಿದೆ. ನನಗೂ ಗೊತ್ತಿದೆ. ನಾನು ಇಷ್ಟು ಹೊತ್ತು ಇದರಲ್ಲಿ ಪ್ರವೇಶ ಮಾಡಬಾರದು ಅಂತ ಇದ್ದೆ. ಸೂಕ್ಷ್ಮವಾದ ವಿಚಾರ. ಪೋಲೀಸರ ಹೇಳಿಕೆಯಲ್ಲಿ ಸಂಪೂರ್ಣ ಸತ್ಯ ಬಂದಿಲ್ಲ . ಈ ಬಗ್ಗೆ ಎಲ್ಲ ಸದಸ್ಯರು ಹೇಳುತ್ತಿದ್ದಾರೆ. ಇದರಲ್ಲಿ ಸುಲಭ ಮಾರ್ಗಗಳಿವೆ. ಇದು ದುರ್ದೈವದ ವಿಚಾರ. ಅಲ್ಲಿ ಸೋಷಿಯಲ್ ಟೆನ್ಷನ್ ಬೆಳೆದಿರತಕ್ಕಂಥ ವಿಚಾರ. ಇದು ಅಶೋಕಪುರಂ ಮತ್ತು ವಿದ್ಯಾರಣ್ಯಪುರಂ ನಡುವೆ ನಡೆದಿರತಕ್ಕಂತಹ ಗಲಭೆ. ಆದರೂ ಈ ಎರಡೂ ಸ್ಥಳಗಳಲ್ಲಿ ಯಾರು ವಿಕ್ಟಿಮ್ಸ್ ಇದ್ದಾರೆ ಅವರು ಏನೂ ತಿಳಿಯದವರು. ಅಶೋಕಪುರಂನಲ್ಲಿ ಹೆಚ್ಚಿಗೆ ಹರಿಜನರೇ ಇದ್ದಾರೆ. ಅದೇ ರೀತಿ ವಿದ್ಯಾರಣ್ಯಪುರಂನಲ್ಲಿ ಹೆಚ್ಚಿಗೆ ಬ್ರಾಹ್ಮಣರೇ ಇದ್ದಾರೆ. ಇವರು ಬಹಳ ಆರ್ಥೊಡಾಕ್ಸ್ ಬ್ರಾಹ್ಮಣರು. ಕೊಲೆ, ಬೆದರಿಕೆ ಎಂಬ ಶಬ್ದ ಕೇಳಿದರೆ ಸಾಕು ಓಡಿಹೋಗುವ ಜನ. ತಿರುಗಿ ಬೀಳುವವರಲ್ಲ, ಬೇರೆ ಜನರ ಬಗ್ಗೆ ನಾನು ಹೇಳುತ್ತಿಲ್ಲ. ಓಡಿ ಹೋಗುವ ಬ್ರಾಹ್ಮಣರ ಬಗ್ಗೆ ನಾನು ಈಗ ಹೇಳುತ್ತಿದ್ದೇನೆ. ಅಂತಹ ಬ್ರಾಹ್ಮಣರ ಹೆಣ್ಣು ಮಕ್ಕಳ ಮೇಲೆ ಧಾಳಿಯಾಗಿದೆ. ಇಂತಹ ಸುಸಂಸ್ಕೃತರ ಮನೆಗೆ ನುಗ್ಗಿ ದಾಂಧಲೆ ಮಾಡಿದ್ದಾರೆ. ಅವರಿಗೆ ಅವಮಾನ ಮಾಡಿದ್ದಾರೆ. ಇದು ಸಂತೋಷಪಟ್ಟುಕೊಳ್ಳುವಂತಹ ವಿಚಾರ ಅಲ್ಲ. ಇದನ್ನು ನಾವು ತೀವ್ರವಾಗಿ ವಿಚಾರ ಮಾಡಬೇಕಾಗಿದೆ. ಬ್ರಾಹ್ಮಣರ ಹೆಣ್ಣು ಮಕ್ಕಳ ಮಾನಾಪಹರಣವಾಗಿದೆ. ಇದು ಸಂತೋಷಪಟ್ಟುಕೊಳ್ಳತಕ್ಕಂತಹ ಸಂಗತಿಯಲ್ಲ. ಆದರೆ ಇಷ್ಟೆಲ್ಲಾ ಆದರೂ ಕೂಡ ಸಹಿಸಿಕೊಂಡು ಸುಮ್ಮನೆ ಇದ್ದಾರೆ. ಅವರ ದೊಡ್ಡತನವನ್ನು ನಾವು ಮೆಚ್ಚಬೇಕಾಗಿದೆ. ಅವರಿಗೆ ಅಭಿನಂದನೆಯನ್ನು ಸಲ್ಲಿಸಬೇಕಾಗಿದೆ. ಇದು ವಿದ್ಯಾರಣ್ಯಪುರಂನಲ್ಲಿ ನಡೆಯದೇ, ಪಕ್ಕದಲ್ಲಿರುವ ಕನ್ನೇಗೌಡನ ಕೊಪ್ಪಲಿನಲ್ಲೇನಾದರೂ ನಡೆದಿದ್ದೇ ಆಗಿದ್ದರೇ ಹೆಣಗಳು ಉರುಳಿ ಹೋಗುತ್ತಿದ್ದವು. ರಕ್ತಪಾತವೇ ಮೈಸೂರಿನಲ್ಲಿ ಹರಿದು ಹೋಗುತ್ತಿತ್ತು. ವಿದ್ಯಾರಣ್ಯಪುರಂನಲ್ಲಿ ನೊಂದಂತಹ ಜನರು ಯಾರಿದ್ದಾರೆ ಅವರು ತಮಗೆ ಆದಂತಹ ಅವಮಾನವನ್ನು ಹೇಳಿಕೊಳ್ಳದೇ ಇರತಕ್ಕಂತಹ ಕಷ್ಟದ ಪರಿಸ್ಥಿತಿಯಲ್ಲಿದ್ದಾರೆ. ಅವರು ಬ್ರಾಹ್ಮಣರು ಎಂಬುದಾಗಿ ಸಂತೋಷಪಡತಕ್ಕಂತಹದ್ದಲ್ಲ.

ಇನ್ನು ಈ ಕಡೆ ಹರಿಜನರ ಬಗ್ಗೆ ಮಾತನಾಡಬೇಕಾಗಿದೆ. ಅಲ್ಲಿ ಹರಿಜನರು ಯಾರು ಇದ್ದಾರೆ, ಅವರಲ್ಲಿ ಯಾರು ಈ ಗಲಭೆಯಲ್ಲಿ ನೊಂದಿದ್ದಾರೆ ಅವರು ಏನೂ ತಿಳಿಯದವರು. ಇವರಿಬ್ಬರ ಮಧ್ಯೆ ಕೆಲವು ದುಷ್ಟ ಶಕ್ತಿಗಳು ಕ್ರಾಂತಿಕಾರಕ ಶಕ್ತಿಯೆಂದು ಹೇಳಿಕೊಂಡು ತಮ್ಮ ಬೇಳೆಯನ್ನು ಬೇಯಿಸಿಕೊಂಡು ಸಮಾಜದಲ್ಲಿ ಇಂತಹ ಕೃತ್ಯಗಳನ್ನು ಮಾಡುವುದಕ್ಕೆ ಕೆಲವರು ಹುಟ್ಟಿದ್ದಾರೆ. ಎಲ್ಲ ಕಡೆ ಈ ರೀತಿ ಮಾಡುತ್ತಿದ್ದಾರೆ. ಘರ್ಷಣೆಯನ್ನುಂಟು ಮಾಡುತ್ತಿದ್ದಾಗ ಹರಿಜನರ ಪ್ರಶ್ನೆ ಬಂದರೆ ಎಲ್ಲರಿಗೂ ಅನುಕಂಪ ಇದೆ. ಹರಿಜನರು ಈ ದೇಶದಲ್ಲಿ ಎಲ್ಲರಂತೆ ಬೆಳೆದು ಎಲ್ಲರಂತೆ ಅವರೂ ಕೂಡ ಸರಿಸಮಾನವಾಗಿ ಬಾಳುವುದಕ್ಕೆ ಬಿಡದಿದ್ದರೆ ಈ ದೇಶಕ್ಕೆ ಭವಿಷ್ಯತ್ತಿಲ್ಲ. ಎಂಬುದನ್ನು ನಿರ್ಧಾಕ್ಷಿಣ್ಯವಾಗಿ ನಾವುಗಳೆಲ್ಲರೂ ಒಪ್ಪಿಕೊಳ್ಳಬೇಕಾದ ವಿಚಾರ. ಈ ದೇಶಕ್ಕೆ ಭವಿಷ್ಯತ್ತಿಲ್ಲ. ಹರಿಜನರು ಈ ದೇಶದಲ್ಲಿ ಬಾಳಬಾರದು, ಅವರನ್ನು ಮುಟ್ಟಬಾರದು ದೇವಸ್ಥಾನಕ್ಕೆ ಬಿಡಬಾರದು, ನೀರು ಕೊಡಬಾರದು; ಇಂತಹ ಹಳೇ ಕಂದಾಚಾರದ ಪದ್ಧತಿ ಏನಿದೆ ಅದನ್ನು ಬದಲಿಸುವ ಕಡೆಗೆ ನಮ್ಮ ದೃಷ್ಟಿಯನ್ನು ತೀವ್ರವಾಗಿ ಹರಿಸಬೇಕಾಗುತ್ತದೆ. ನಮ್ಮ ಗಮನವನ್ನು ತೀವ್ರವಾಗಿ ಹರಿಸಿ ಪರಿಸ್ಥಿತಿಯನ್ನು ಬದಲಿಸಬೇಕಾಗಿದೆ. ಹರಿಜನರ ಮೇಲೆ ಹಲ್ಲೆ ನಡೆಸುವ ಜನರಿಗೆ ಕಠಿಣ ಶಿಕ್ಷೆಯನ್ನು ಕೊಡಬೇಕಾಗುತ್ತದೆ. ಬೇರೆ ವರ್ಗದ ಜನರು ಹರಿಜನರ ಹೆಣ್ಣು ಮಕ್ಕಳ ಮಾನಭಂಗ ಮಾಡಿದರೆ ಹರಿಜನರು ಬೇರೆಯವರ ಹೆಣ್ಣು ಮಕ್ಕಳ ಮೇಲೆ ಮಾನಭಂಗ ಮಾಡುವುದು ಇದಕ್ಕೆ ಪರಿಹಾರ ಅಂತ ಈ ತರಹ ಮಾಡುವುದನ್ನು ದಯಮಾಡಿ ಇನ್ನು ಮೇಲಾದರೂ ಬಿಟ್ಟುಬಿಡಬೇಕು. ಉದಾಹರಣೆಗೆ ಹೇಳುವುದಾದರೆ ನನ್ನ ಅಜ್ಜ ಹರಿಜನರ ಮೇಲೆ ಹಲ್ಲೆ ಮಾಡಿದರೆಂದು ನನ್ನ ತಲೆ ಹೊಡೆದರೆ ನಾನೇನು ಮಾಡಲಿ? ಸಮಾಜದಲ್ಲಿ ಹರಿಜನರ ಮೇಲೆ ಮತ್ತೊಂದು ಜನಾಂಗದವರು ಇನ್ನೊಂದು ಜನಾಂಗದವರ ಮೇಲೆ ಹಲ್ಲೆ ಮಾಡಿ ಈ ಗುಂಪು ಘರ್ಷಣೆಯ ಪ್ರಚೋದನೆಯನ್ನು ಉಂಟು ಮಾಡುವ ಒಂದು ಗುಂಪು ವ್ಯವಸ್ಥಿತವಾಗಿ ನಮ್ಮ ರಾಜ್ಯದಲ್ಲಿ ಕೆಲಸ ಮಾಡುತ್ತಿದೆ. ಚಿಂತಾಮಣಿಯಲ್ಲಿ ನಡೆದದ್ದೂ ಇದೇ ರೀತಿಯ ಒಂದು ಗುಂಪಿನ ಪ್ರಚೋದನೆಯಿಂದ, ಈ ರೀತಿಯ ಒಂದು ಗುಂಪಿನ ಪ್ರಚೋದನೆ ನಿಲ್ಲಬೇಕು. ಹರಿಜನರು ಮತ್ತು ಬೇರೆ ವರ್ಗದವರು ಪರಸ್ಪರ ಸಮಾನರೆಂಬ ಭಾವನೆಯನ್ನಿಟ್ಟುಕೊಂಡು, ಬಂದಂತಹ ಸಮಸ್ಯೆಗಳನ್ನು ಪರಿಹಾರ ಮಾಡಿಕೊಂಡು ನಮ್ಮ ದೇಶದ ಜನ ಮೇಲೆ ಬರಬೇಕಾಗುತ್ತದೆ. ಈ ದೃಷ್ಟಿಯಿಂದ ನಾವು ಈ ಪ್ರಚೋದಿಸುವ ಗುಂಪನ್ನು ಹತೋಟಿಯಲ್ಲಿಟ್ಟು

ಕೊಳ್ಳಬೇಕಾಗಿದೆ. ಇದಕ್ಕೋಸ್ಕರ ಆ ಸ್ಥಳದಲ್ಲಿರತಕ್ಕಂತಹ ನಾಗರೀಕರ ಒಂದು ಸಮಿತಿಯನ್ನು ರಚನೆ ಮಾಡಬೇಕಾಗುತ್ತದೆ. ಆ ಸಮಿತಿ ಪರಸ್ಪರ ವಿಚಾರ ಮಾಡಿ ಜನಗಳಿಗೆ ತಿಳುವಳಿಕೆ ಕೊಟ್ಟು ಪರಸ್ಪರ ಸದ್ಭಾವನೆಗಳಿಂದ ಕೂಡಿ ಬಾಳಬೇಕಾಗುತ್ತದೆ. ಈ ರೀತಿ ಒಂದು ವಾತಾವರಣ ಬೆಳೆಯುವಂತಹ ಒಂದು ಮಾನಸಿಕ ವಾತಾವರಣ ಅಲ್ಲಿ ನಿರ್ಮಾಣ ಮಾಡಬೇಕಾಗುತ್ತದೆ. ಈ ರೀತಿಯ ಮಾನಸಿಕ ವಾತಾವರಣವನ್ನು ನಿರ್ಮಾಣ ಮಾಡುವುದಕ್ಕೆ ಹೋದಾಗಲೂ ಸಹ ಕೆಲವು ಶಕ್ತಿಗಳು ತಮ್ಮ ಬೇಳೆಯನ್ನು ಬೇಯಿಸಿ ಕೊಳ್ಳುವುದಕ್ಕೆ ಹೋಗುತ್ತಾರೆ. ಅಂತಹವರನ್ನೂ ಹತೋಟಿಯಲ್ಲಿಟ್ಟು ಕೊಳ್ಳಬೇಕಾಗುತ್ತದೆ. ಈ ಒಂದು ಸಮಸ್ಯೆ ಪರಿಹಾರ ಮಾಡುವುದಕ್ಕೋಸ್ಕರ ಅಲ್ಲಿ ಪೊಲೀಸಿನವರು ಕ್ಯಾಂಪಿಂಗ್ ಮಾಡುವುದರಿಂದ ಸಮಸ್ಯೆ ಬಗೆಹರಿಯುವುದಿಲ್ಲ. ಸಮಾಜದಲ್ಲಿ ಸ್ವಲ್ಪ ಕಾಮನ್‌ಸೆನ್ಸ್ ಇದ್ದಂತಹ ಜನರನ್ನು ಇದರಲ್ಲಿ ಇನ್ವಾಲ್ವ್ ಮಾಡುವುದರಿಂದ ಇಂತಹ ಸೋಷಿಯಲ್ ಪ್ರಾಬ್ಲಮನ್ನು ಸರಿಯಾಗಿ ಪರಿಹಾರ ಮಾಡತಕ್ಕಂತಹ ದೃಷ್ಟಿಯಿಂದ ಸರ್ಕಾರ ಈ ದಿಕ್ಕಿನಲ್ಲಿ ಕೆಲಸ ಮಾಡಬೇಕೆಂದು ನಾನು ತಮ್ಮ ಮೂಲಕ ಸರ್ಕಾರಕ್ಕೆ ಸಲಹೆ ಮಾಡುತ್ತೇನೆ.

# ರಾಜ್ಯದಲ್ಲಿನ ದುರವಸ್ಥೆ
## 6ನೇ ಫೆಬ್ರವರಿ 1981

**ಎ.ಕೆ. ಸುಬ್ಬಯ್ಯ :** ಮಾನ್ಯ ಗುಂಡೂರಾಯರ 12 ತಿಂಗಳುಗಳ ಆಡಳಿತದಲ್ಲಿ ಶೋಷಿತ ವರ್ಗದವರ ಮೇಲೆ ನಡೆದಿರತಕ್ಕಂಥ ಹಲ್ಲೆಯ ಬಗ್ಗೆ ಹೇಳಬೇಕೆಂದರೆ, ಈ ಹರಿಜನರ ಮೇಲೆ ಏನಾದರು ಹಲ್ಲೆ ನಡೆದರೆ ಅದು ಪತ್ರಿಕೆಗಳಲ್ಲಿ ಬರುವುದಿಲ್ಲ. ಇಂಥಾದ್ದನ್ನು ಪ್ರಚಾರ ಮಾಡಬಾರದೆಂದು ಇವರು ಪತ್ರಿಕೆಗಳ ಮೇಲೆ ನಿರ್ಬಂಧ ಹಾಕಿದ್ದಾರೆ. ಬೀದರ್ ಜಿಲ್ಲೆಯ ಒಂದು ಗ್ರಾಮದಲ್ಲಿ ಹರಿಜನರು ಹೋಟೆಲ್‌ಗೆ ಹೋಗಬಾರದೆಂದು ಬಹಿಷ್ಕಾರ ಹಾಕಿದ್ದಾರೆ. ಅಲ್ಲಿ ಒಂದು ಚಿಕ್ಕ ಘರ್ಷಣೆ ನಡೆದ ಕಾರಣ, ಹರಿಜನರಿಗೆ ಕೆಲಸ ಕೊಡಬಾರದೆಂದು ಬಹಿಷ್ಕಾರ ಹಾಕಿದರು. ಅನಂತರ ಮುಖ್ಯಮಂತ್ರಿಗಳು ಅಲ್ಲಿ ಅಂತಹ ಬಹಿಷ್ಕಾರವೇನೂ ನಡೆದಿಲ್ಲವೆಂದು ಹೇಳಿಕೆ ಕೊಟ್ಟರು. ಆದರೆ ದಲಿತ ಸಂಘರ್ಷ ಸಮಿತಿಯವರು ಅಲ್ಲಿ ಹೋಗಿ ವಿವರಗಳನ್ನು ಪಡೆದುಕೊಂಡು ಬಂದು ಅಲ್ಲಿ ಹರಿಜನರ ಮೇಲೆ ಬಹಿಷ್ಕಾರ ಹಾಕಿರುವುದು ನಿಜ ಮತ್ತು ಆ ಜನರಿಗೆ ಹಿಂಸೆಯಾಗಿರುವುದು ನಿಜ ಎಂದು ಹೇಳಿಕೆ ಕೊಟ್ಟರು. ಇವರ 12 ತಿಂಗಳುಗಳ ಆಡಳಿತದ ಅವಧಿಯಲ್ಲಿ ಸತತವಾಗಿ ಶೋಷಿತ ವರ್ಗದವರ ಮೇಲೆ ಹಲ್ಲೆ ಮತ್ತು ಹಿಂಸೆ ನಡೆದಿದೆಯೇ ಹೊರತು ಅವರಿಗೆ ರಕ್ಷಣೆ ಕೊಡುವ ಬಗ್ಗೆ ಯಾವ ಒಂದು ವ್ಯವಸ್ಥೆಯನ್ನೂ ಸಹ ಸರ್ಕಾರ ಮಾಡಲಿಲ್ಲ, ಅಲ್ಲಿ ಹರಿಜನರಿಗಾಗಿ ಮೀಸಲಿಟ್ಟ ಹಣದ ದುರುಪಯೋಗವೂ ಸಹ ನಡೆದಿದೆ. ಹರಿಜನ ವಿದ್ಯಾರ್ಥಿಗಳ ಸ್ಕಾಲರ್‌ಷಿಪ್‌ಗೋಸ್ಕರ ಕೇಂದ್ರ ಸರ್ಕಾರದಿಂದ ಪಡೆದುಕೊಂಡು ಬಂದಂಥ ಲಕ್ಷಾಂತರ ರೂಪಾಯಿಗಳಷ್ಟು ಹಣ ಬೇರೆ ವರ್ಗದ ಜನರ ಪಾಲಿಗೆ ಹೋಯಿತೇ ಹೊರತು ಈ ವಿದ್ಯಾರ್ಥಿಗಳಿಗೆ ಸಿಗಲಿಲ್ಲ. ಇದರ ಬಗ್ಗೆ ಸಹ ಸಾಕಷ್ಟು ಚರ್ಚೆಯಾಗಿದೆ ಮತ್ತು ಪತ್ರಿಕೆಗಳಲ್ಲಿಯೂ ಸಹ ವರದಿ ಬಂದಿದೆ. ಬಸ್ ಕಂಡಕ್ಟರ್, ಆಸ್ಪತ್ರೆ ನರ್ಸ್ ಹೀಗೆ ಹಲವಾರು ಜನರು ತಾವು ಹರಿಜನ ವಿದ್ಯಾರ್ಥಿಗಳಿಗಾಗಿ ಹಾಸ್ಟಲ್ ನಡೆಸುತ್ತಿದ್ದೇವೆಂದು ಹೇಳಿಕೊಂಡು ಏನೋ ಒಂದು ಲೆಕ್ಕ ಕೊಟ್ಟು ಈ ಬಡವರ ಹಣವನ್ನು ಪಡೆದಿದ್ದಾರೆ. ಆದರೆ ನಿಜವಾಗಿ ಸೇರಬೇಕಾದವರಿಗೆ ಹಣ ಸೇರಲೇ ಇಲ್ಲ. ನಾನು ಕೆಲವು ಉದಾಹರಣೆಗಳನ್ನು ಮಾತ್ರ ಕೊಡುತ್ತಿದ್ದೇನೆ. ಇಂತಹ ಅನೇಕ ವಿದ್ಯಾಮಾನಗಳು ವ್ಯಾಪಕವಾಗಿ ನಡೆದಿವೆ. ಮಹಿಳೆಯರ ಮಾನಭಂಗ, ಮಹಿಳೆಯರ ಅಪಹರಣ, ಹರಿಜನರ ಮೇಲೆ ಅತ್ಯಾಚಾರ ಇವು

ನಡೆದೇ ಇವೆ. ಇವುಗಳ ವಿರುದ್ಧವಾಗಿ ಯಾರಾದರೂ ಚಳುವಳಿ ಮಾಡಿದರೆ, ಅಂತಹವರನ್ನು ಗುಂಡಿಟ್ಟು ಕೊಲ್ಲುವ ಪರಿಸ್ಥಿತಿಯನ್ನು ನಾವು ಕಳೆದ 12 ತಿಂಗಳುಗಳಿಂದ ನೋಡುತ್ತಿದ್ದೇವೆ. ಅದನ್ನು ಬಿಟ್ಟು ಬೇರೆ ಯಾವ ಸುಧಾರಣೆಯೂ ನಮ್ಮ ರಾಜ್ಯದಲ್ಲಿ ಆಗಿಲ್ಲ. ಈಗ ನಮ್ಮ ರಾಜ್ಯದ 102 ತಾಲ್ಲೂಕ್‌ಗಳಲ್ಲಿ ಕ್ಷಾಮ ಪರಿಸ್ಥಿತಿ ಬಂದಿದೆ. ಬಿಜಾಪುರ ಮತ್ತು ಕೋಲಾರ ಜಿಲ್ಲೆಗಳಲ್ಲಿ ಭೀಕರ ಕ್ಷಾಮ ಬಂದಿದೆ. ಈ ಕ್ಷಾಮ ಪರಿಹಾರ ಕಾರ್ಯಗಳು ಏನು ಎಂದರೆ ಏನೂ ಇಲ್ಲ. ಬರೀ ಸೊನ್ನೆ. ಆ ಪ್ರದೇಶಗಳನ್ನು ನೋಡಲು ಮಂತ್ರಿಗಳು ಹೋಗುವುದಿಲ್ಲ ಮತ್ತು ಅಧಿಕಾರಿಗಳು ಸಹ ಹೋಗಿ ವಿಚಾರಣೆ ಮಾಡುತ್ತಿಲ್ಲ. ಮಾನ್ಯ ನರಸಿಂಹಮೂರ್ತಿಯವರಿಗೆ ಜ್ಞಾಪಕವಿರಬಹುದೆಂದು ಕಾಣುತ್ತದೆ, ಕೆಲವು ತಿಂಗಳ ಹಿಂದೆ ಕೆ.ಆರ್.ಎಸ್. ಡ್ಯಾಂ ಭರ್ತಿಯಾದಾಗ, ಅದನ್ನು ಸದಸ್ಯರುಗಳು ಹೋಗಿ ನೋಡಲು ಬಸ್‌ನ ವ್ಯವಸ್ಥೆ ಮಾಡಿದ್ದೇವೆಂದು ನಮಗೆಲ್ಲಾ ಆಹ್ವಾನ ಕೊಟ್ಟರು. ಕನ್ನಂಬಾಡಿ ಕಟ್ಟೆಯಲ್ಲಿ ನೀರು ತುಂಬಿದ ಕಾರಣ ಪೂಜೆ ಸಹ ಆಯಿತು.

ಮಾನ್ಯ ಮುಖ್ಯಮಂತ್ರಿಯವರಾದ ಶ್ರೀ ಗುಂಡೂರಾಯರು ಅಲ್ಲಿಗೆ ಹೋಗಿದ್ದಾರೆ. ಅವರು ಅಲ್ಲಿಗೆ ಹೋದಮೇಲೆ ಕನ್ನಂಬಾಡಿ ಕಟ್ಟೆಗೆ ಅಲ್ಲಿ ಪೂಜೆ ನಡೆಯಲಿಲ್ಲ. ಅಂದರೆ, ರಾಜ್ಯದ ಆರಾಧ್ಯ ದೇವತೆಯಾದ ಕಾವೇರಿ ಮಾತೆಗೆ ಪೂಜೆ ನಡೆಯಲಿಲ್ಲ; ಅಲ್ಲಿ ಮಾನ್ಯ ಮುಖ್ಯ ಮಂತ್ರಿಯವರಿಗೆ ಪೂಜೆ ನಡೆಯಿತು. ನಾವು ಅದನ್ನು ಇಲ್ಲಿ ಪ್ರಸ್ತಾಪ ಮಾಡಿದಾಗ ನಮ್ಮ ಅನೇಕ ಜನ ಸ್ನೇಹಿತರು ನಮ್ಮ ಮುಖ್ಯಮಂತ್ರಿಯವರು ಅಧಿಕಾರಕ್ಕೆ ಬಂದಮೇಲೆ ಹೊಸದಾಗಿ ಕನ್ನಂಬಾಡಿ ಕಟ್ಟೆ ತುಂಬಿ ಬಂದಿದೆ. ಅದಕ್ಕಾಗಿ ಅಲ್ಲಿ ಪೂಜೆ ಮಾಡುವುದು ತಪ್ಪೇ ಎಂದು ಕೇಳಿದರು. ಅದನ್ನು ನಾವು ಒಪ್ಪಿಕೊಂಡೆವು. ಅಲ್ಲಿ ಕನ್ನಂಬಾಡಿ ಕಟ್ಟೆ ತುಂಬಿದ್ದೂ ನಿಜ, ಮಾನ್ಯ ಮುಖ್ಯಮಂತ್ರಿಯವರು ಅಧಿಕಾರಕ್ಕೆ ಬಂದದ್ದೂ ನಿಜ, ಅವರಿಗೇ ಪೂಜೆ ಮಾಡಲಿ. ಯಾರಿಗೆ ಪೂಜೆ ಮಾಡಿದರೆ ಏನು? ಇವತ್ತು ರಾಜ್ಯದಲ್ಲಿ 102 ತಾಲ್ಲೂಕುಗಳಲ್ಲಿ ಕ್ಷಾಮ ಪರಿಸ್ಥಿತಿ ಇದೆ. ಬಿಜಾಪುರ ಜಿಲ್ಲೆಯಲ್ಲಿ ಮತ್ತು ಕೋಲಾರ ಜಿಲ್ಲೆಯಲ್ಲಿ ಜನರಿಗೆ ಹೊಟ್ಟೆಗೆ ಹಿಟ್ಟು ಇಲ್ಲ. ಕುಡಿಯುವುದಕ್ಕೆ ನೀರು ಇಲ್ಲ, ದನಗಳಿಗೆ ಮೇವು ಇಲ್ಲ ಬಿಜಾಪುರ ಜಿಲ್ಲೆಯಲ್ಲಿ ಹೋಗಿ ನೋಡಿದರೆ ರೈತರು ತಾವು ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಸಾಕಿದಂತ ಉಳುವ ಎತ್ತುಗಳನ್ನು ಹಾಲು ಕರೆಯುವ ಹಸುಗಳನ್ನು ಸಾಲುಸಾಲಾಗಿ ಕಸಾಯಿಖಾನೆಗೆ ಕರೆದುಕೊಂಡು ಹೋಗುತ್ತಿದ್ದಾರೆ. ಅಲ್ಲಿ ಭೀಕರವಾದ ಕ್ಷಾಮ ತಾಂಡವವಾಡುತ್ತಾ ಇರಬೇಕಾದರೆ

ಕನ್ನಂಬಾಡಿಕಟ್ಟೆ ತುಂಬಿದ್ದಕ್ಕೆ ಪೂಜೆಮಾಡಿಸಿದಂಥ ಮಾನ್ಯ ಮುಖ್ಯಮಂತ್ರಿಯವರು ಅಲ್ಲಿಗೆ ಹೋಗಿ ಮಂಗಳಾರತಿ ಮಾಡಿಸಿಕೊಳ್ಳುವುದು ಬೇಡವೇ? ರಾಜ್ಯದಲ್ಲಿರತಕ್ಕಂಥ ಕ್ಷಾಮ ಪರಿಹಾರಕ್ಕೋಸ್ಕರ ಈ ಸರ್ಕಾರ ಕೇಂದ್ರದಿಂದ ಒಂದೇ ಒಂದು ಚಿಕ್ಕಾಸಿನ ಸಹಾಯವನ್ನು ಪಡೆಯುವುದರಲ್ಲಿ ಸಫಲವಾಗಲಿಲ್ಲ. ಕೆಲವು ಲಕ್ಷ ರೂಪಾಯಿಗಳು ಕೇಂದ್ರದಿಂದ ಸಹಾಯಧನವಾಗಿ ಬಂದಿದೆ ಎಂದು ಹೇಳುತ್ತಾರೆ. ಈ ಕ್ಷಾಮ ಪರಿಹಾರ ಮಾಡುವುದಕ್ಕೆ 200 ಕೋಟಿ ರೂಪಾಯಿಗಳು ಬೇಕು. ಈ ಕ್ಷಾಮ ಪರಿಹಾರ ನಿಧಿಗೋಸ್ಕರ ಕೇಂದ್ರದಿಂದ ಹಣವನ್ನು ತರುವುದಕ್ಕೆ ಬೇಕಾದಂಥ ಪ್ರಭಾವವೇನಾದರೂ ಇದೆಯೇ ಎಂದರೆ ಅದನ್ನು ನಾವು ಹೇಳುವುದಕ್ಕಾವುದಿಲ್ಲ ಈ ರೀತಿ ಕ್ಷಾಮ ಬಂದು ನಮ್ಮ ದೇಶದಲ್ಲಿ ದಾರಿದ್ರ್ಯ ಪರಿಸ್ಥಿತಿ ಬೆಳೆಯುತ್ತಾ ಇದೆ. ಜನಸಾಮಾನ್ಯರಲ್ಲಿ ನಾನಾ ರಂಗಗಳಲ್ಲಿ ಅತೃಪ್ತಿ ಬೆಳೆಯುತ್ತಿದೆ. ಆ ಅತೃಪ್ತಿ ಸ್ಫೋಟವಾಗುತ್ತಿದೆ. ಹೀಗೆಲ್ಲಾ ನಡೆಯುತ್ತಾ ಇದ್ದರೂ, ಈ ಬಗ್ಗೆ ನಾವು ಎಷ್ಟೇ ಹೇಳಿದರೂ ಗಮನಕ್ಕೆ ತೆಗೆದುಕೊಳ್ಳದೇ ಇರತಕ್ಕಂಥ, ಕರ್ತವ್ಯವನ್ನು ಮಾಡುವುದಕ್ಕೆ ಹೇಳಿದರೂ ಗಮನಕ್ಕೆ ತೆಗೆದುಕೊಳ್ಳದೇ ಇರತಕ್ಕಂಥ, ಕರ್ತವ್ಯವನ್ನು ಮಾಡುವುದಕ್ಕೆ ಗೊತ್ತಿಲ್ಲದೇ ಇರತಕ್ಕಂಥ ಈ ಒಂದು ಸರ್ಕಾರ 12 ತಿಂಗಳುಗಳನ್ನು ಈ ರೀತಿಯಲ್ಲಿಯೇ ಕಳೆದಿದೆ. ಈ 12 ತಿಂಗಳುಗಳ ಅವಧಿಯೊಳಗೆ ಕೇಂದ್ರದಿಂದ ನಮ್ಮ ಕಡೆ ಬರಬೇಕಾದಂಥ ಕ್ಷಾಮ ಪರಿಹಾರ ನಿಧಿಗೆ ಹಣವನ್ನು ತರುವುದಕ್ಕೆ ಈ ಸರ್ಕಾರಕ್ಕೆ ಆಗಲಿಲ್ಲ. ಉಕ್ಕಿನ ಕಾರ್ಖಾನೆಗೆ ಇವರು ಹಣ ತರುವುದಕ್ಕೆ ಸಾಧ್ಯವಾಗಲಿಲ್ಲ. ಆಮೇಲೆ ಈ ಪಂಚವಾರ್ಷಿಕ ಯೋಜನೆಯ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರು ಹೇಳಿದರು, 'ನಾವು ಇದಕ್ಕೆ 1000 ಚಿಲ್ಲರೇ ಕೋಟಿ ರೂಪಾಯಿಗಳು ಬೇಕು ಎಂದು ಕೇಳಿದೆವು. ಅವರು ನಾವು ಹೇಳಿದ ತಕ್ಷಣ ಮಂಜೂರು ಮಾಡಿಬಿಟ್ಟರು' ಎಂದು ಹೇಳಿದರು ಅದರಲ್ಲಿ ಇವರಿಗೆ ಎಷ್ಟು ಹಣ ಬಂದಿದೆ?

**ಶ್ರೀ ಟಿ.ಎನ್. ನರಸಿಂಹಮೂರ್ತಿ:** ಟೆಲಿವಿಷನ್ ಬಂತಲ್ಲ.

**ಶ್ರೀ ಎ.ಕೆ. ಸುಬ್ಬಯ್ಯ:** ಅದು ನೀವಿದ್ದರೂ ಬರುತ್ತದೆ, ಇಲ್ಲದಿದ್ದರೂ ಬರುತ್ತದೆ. ಹಾಗೆಯೇ ಜನರೂ ಹುಟ್ಟುತ್ತಾ ಇದ್ದಾರೆ. ನೀವಿದ್ದರೂ ಹುಟ್ಟುತ್ತಾರೆ, ನೀವು ಇಲ್ಲದಿದ್ದರೂ ಹುಟ್ಟುತ್ತಾರೆ. ಈ ರೀತಿ ಅನೇಕ ಕೆಲಸಗಳು ಆಗುತ್ತಿವೆ. ಈ ರೀತಿ ಕೇಂದ್ರದಿಂದ ಪಂಚವಾರ್ಷಿಕ ಯೋಜನೆಗೆ ಹಣವನ್ನು ತೆಗೆದುಕೊಂಡು ಬರುತ್ತೇವೆಂದು ಹೇಳಿದರು. ನಮ್ಮ ಕರ್ನಾಟಕಕ್ಕೆ ಎಷ್ಟು ಹಣ ಬೇಕಾಗಿದೆಯೋ

ನಮಗೆ ಎಷ್ಟು ಅರ್ಹತೆ ಇದೆಯೋ ಅದಕ್ಕಿಂತ ಹೆಚ್ಚು ಹಣ ಕೊಡುವುದಕ್ಕೆ ಅವರು ತಯಾರು ಇಲ್ಲ. ನಮ್ಮ ಯೋಜನೆಗೆ ಎಷ್ಟುಹಣ ಬೇಕಾಗಿತ್ತೋ ಅದಕ್ಕಿಂತ ಕಡಿಮೆ ಅಂದಾಜನ್ನು ಅವರಲ್ಲಿಗೆ ತೆಗೆದುಕೊಂಡು ಹೋಗಿದ್ದಾರೆ. ಕೇಂದ್ರದವರು ಕಣ್ಣು ಮುಚ್ಚಿ ಕೊಂಡು ಸೈನ್ ಮಾಡಿ ಕಳಿಸಿದ್ದಾರೆ. ಹೀಗೆ ರಾಜ್ಯದ ಹಿತವನ್ನು ಕಾಪಾಡುವುದಕ್ಕೆ ಯಾವ ಗಮನವನ್ನೂ ಈ ಸರ್ಕಾರ ಕೊಡುತ್ತಾ ಇರುವುದನ್ನು ನಾವು ಇವತ್ತಿನದಿವಸ ನೋಡುವುದಿಲ್ಲ. ಇವರು ಮಾಡಿರುವ ಪ್ರಧಾನವಾದ ಕೆಲಸ ಎಂದರೆ ಗಂಟೆ ಬಾರಿಸುವುದು. 12 ತಿಂಗಳಲ್ಲಿ ಮಾಡಿದ್ದು ಗಂಟೆ ಬಾರಿಸುವ ಕೆಲಸ. ಜನಗಳು ತಿಳಿದುಕೊಳ್ಳುವ ಕೆಲಸ ಇವರು ಮಾಡಿದ್ದು ಎಂದರೆ ಗಂಟೆ ಬಾರಿಸುವಂಥ ಕೆಲಸ. ಆಮೇಲೆ ಕಾಂಗ್ರೆಸ್ ಕಸ ಪಾರ್ಥೇನಿಯಂ ಬೆಂಗಳೂರಿನಲ್ಲೆಲ್ಲಾ ಬೆಳೆದಿದೆ, ಅದನ್ನು ಕಿತ್ತು ಹಾಕಿದ್ದಾರೆ.

**ಒಬ್ಬ ಮಾನ್ಯ ಸದಸ್ಯರು.**– ಅದು ಒಳ್ಳೆಯ ಕೆಲಸ ಅಲ್ಲವೇ?

**ಶ್ರೀ ಎ.ಕೆ. ಸುಬ್ಬಯ್ಯ:** ಪಾರ್ಥೇನಿಯಂನ್ನು ಕಿತ್ತು ಹಾಕಿದ್ದಾರೆಂದು ಕೇಳಿದ್ದೇನೆ. ಇಲ್ಲಿ ಪಾರ್ಥೇನಿಯಂ ಕಿತ್ತುಹಾಕುವುದಕ್ಕೆ ಒಂದು ಕಾರ್ಯಕ್ರಮ, ಗಂಟೆ ಬಾರಿಸುವುದಕ್ಕೆ ಒಂದು ಕಾರ್ಯಕ್ರಮ. ಮಾನ್ಯ ಮುಖ್ಯಮಂತ್ರಿಯವರು ಅದನ್ನು ಕೀಳುವುದು, ಅದರ ಫೋಟೋ ತೆಗೆಯುವುದು. ಈ ಪಾರ್ಥೇನಿಯಂ ಕೀಳುವಂಥ ಕಾರ್ಯಕ್ರಮ ಇದೆಯಲ್ಲ ಇದೊಂದು ದೊಡ್ಡ ಸ್ಕಾಂಡಲ್. ಬೆಂಗಳೂರು ನಗರದಲ್ಲಿ ಒಂದು ಕಡೆ ಪಾರ್ಥೇನಿಯಂ ಇದ್ದರೆ ಅದನ್ನು ಅರ್ಧ ಕೀಳುವುದು, ಇನ್ನರ್ಧ ಹಾಗೆಯೇ ಬಿಡುವುದು ಇದೆಲ್ಲಾ ಫುಲ್ ಬೆಳೆದರೆ ಇದನ್ನು ಬಿಡುವುದು ಇನ್ನೊಂದು ಕಡೆ ಬೆಳೆದಿರುವುದರಲ್ಲಿ ಅರ್ಧ ಕೀಳುವುದು, ಇನ್ನರ್ಧ ಹಾಗೆಯೇ ಬಿಡುವುದು ಹೀಗೆ ಪಾರ್ಥೇನಿಯಂ ಸಂಪೂರ್ಣವಾಗಿ ಹೋಗಬಾರದು. ದುಡ್ಡು ಖರ್ಚಾಗುವುದು ನಿಲ್ಲಬಾರದು. ಇದರಲ್ಲಿ ಪಟ್ಟಭದ್ರಹಿತಾಸಕ್ತಿಗಳು ದುಡ್ಡು ನುಂಗುವ ಕೆಲಸ ಸರಾಗವಾಗಿ ನಡೆಯಿತು. ಈ ರೀತಿ ನಡೆಯುತ್ತಾ ಇದೆ. ಇವತ್ತು ಬೆಂಗಳೂರು ನಗರದಲ್ಲಿ ಪಾರ್ಥೇನಿಯಂ ಹೆಚ್ಚಾಗಿದೆ. ಪಾರ್ಥೇನಿಯಂನ್ನು ಬುಡಸಮೇತ ಕಿತ್ತು ಹಾಕತಕ್ಕಂಥ ನಿರ್ಧಾರ ಇನ್ನೂ ಆಗಿಲ್ಲ. ಆದರೆ ಪತ್ರಿಕೆಗಳಲ್ಲಿ ಈ ಬಗ್ಗೆ ಸಿಕ್ಕಾಪಟ್ಟೆ ಜಾಹಿರಾತುಗಳನ್ನು ಕೊಟ್ಟಿದ್ದಾರೆ. ಲಕ್ಷಾಂತರ ರೂಪಾಯಿ ಇದಕ್ಕಾಗಿ ಖರ್ಚಾಗಿದೆ. ಈ ಪಾರ್ಥೇನಿಯಂ ಕೀಳತಕ್ಕಂಥ ಯೋಜನೆಗೆ ಸುಮಾರು 50 ಲಕ್ಷ ರೂಪಾಯಿಗಳನ್ನು ಇಟ್ಟಿದ್ದಾರೆಂದು ಒಂದು ಅಂದಾಜು ಇದೆ. ಗಂಟೆ ಬಾರಿಸುವ ಮೂಲಕ ಕರ್ನಾಟಕದ ಕಂಟ್ರಾಕ್ಟರ್ಸ್,

ವಾಲ್‌ಪೋಸ್ಟರ್ ಬರೆಯುವವರು ಹಣವನ್ನೆಲ್ಲಾ ನುಂಗಿಹಾಕಿ, ಈ ಪಾರ್ಥೇನಿಯಂ ಕಾರ್ಯಕ್ರಮಗಳನ್ನು ಸರ್ಕಾರದಿಂದ ದುಡ್ಡು ಹೊಡೆಯುವುದಕ್ಕಾಗಿ ಮಾಡಿದ್ದಾರೆ. ಇದರ ಬಗ್ಗೆ ತನಿಖೆ ಆಗಬೇಕು. ಮೊನ್ನೆ ತಾನೇ ಒಂದು ವರ್ಷ ಮುಗಿದಾಗ ದೇವಸ್ಥಾನದಲ್ಲಿ ಗಂಟೆ ಬಾರಿಸುವ ಕಾರ್ಯಕ್ರಮ ಆಯಿತು. ಗಂಟೆಯನ್ನು ಬಾರಿಸಿ ಬಾರಿಸಿ 12 ತಿಂಗಳಲ್ಲಿ ಅವರು ಮಾಡಿದಂಥ ಅಕ್ರಮ ಅನಾಚಾರಗಳನ್ನು ಗಂಟೆಯ ಶಬ್ದದಲ್ಲಿ ಮುಚ್ಚುವಂಥ ಕುತಂತ್ರ ನಡೆಯಿತು. ಈ ರೀತಿಯಲ್ಲಿ ಈ ನೀತಿಗೆಟ್ಟ ಸರ್ಕಾರ, ಭರವಸೆಗಳ ಸರ್ಕಾರ ನಡೆಯುತ್ತಾ ಇದೆ. ನಿಂತಲ್ಲೇ ಭರವಸೆಗಳನ್ನು ಕೊಡುತ್ತಿದ್ದಾರೆ. ಆಡಳಿತ ನಿಂತಲ್ಲೇ ನಿಂತು ಹೋಗುತ್ತಿದೆ, ಭರವಸೆಗಳು ಯಾವುದೂ ಈಡೇರುವುದಿಲ್ಲ. ಇತ್ತೀಚೆಗೆ ಬೆಳಗಾಂ ಜಿಲ್ಲೆಯ ಹಿಪ್ಪರಗಿಯಲ್ಲಿ ಲಿಫ್ಟ್ ಇರಿಗೇಷನ್ ಪ್ರಾಜೆಕ್ಟ್ ಕಟ್ಟುತ್ತಿದ್ದಾರೆ. ಆಲಮಟ್ಟಿ ಅಣೆಕಟ್ಟಿನ 2ನೇ ಹಂತದಲ್ಲಿ ಇದು ನಿರ್ಮಾಣವಾಗಬೇಕಾಗಿತ್ತು. ಇದು ಅಪ್ಪರ್ ಕೃಷ್ಣಾ ಯೋಜನೆಗೆ ಸಂಬಂಧಪಟ್ಟಿದ್ದು. ಅಲ್ಲಿ 3 ಸಾವಿರಕ್ಕಿಂತ ಹೆಚ್ಚು ಜನ ಕೂಲಿಗಾರರು ಕೆಲಸ ಮಾಡುತ್ತಿದ್ದಾರೆ. ಅಲ್ಲೆಲ್ಲಾ ಸುತ್ತಮುತ್ತಲ ಹಳ್ಳಿಗಳಲ್ಲಿ ಕ್ಷಾಮ ಇದೆ. ಅಲ್ಲಿಗೆ ಹೋಗಿ ನೋಡಿದರೆ ಅಲ್ಲಿ ಕೆಲಸ ಮಾಡುತ್ತಾ ಇರತಕ್ಕಂಥ ಕೂಲಿಗಾರರಿಗೆ, 3 ಸಾವಿರ ಜನ ಕೂಲಿಗಾರರಿಗೆ ಕಳೆದ 6 ತಿಂಗಳಿಂದ ಕೆಲಸ ಇಲ್ಲ. ಅಲ್ಲಿ ಇವರಿಗೆ ಏಕೆ ಕೆಲಸವಿಲ್ಲ ಎಂದರೆ ದುಡ್ಡು ಇಲ್ಲವೆಂದು ಅಲ್ಲಿಯ ಇಂಜಿನಿಯರ್ ಹೇಳುತ್ತಾರೆ. 6 ತಿಂಗಳಿಂದ ಅವರಿಗೆ ಕೆಲಸವೂ ಇಲ್ಲ, ಸಂಬಳವೂ ಇಲ್ಲ. ಅಲ್ಲಿ ಕ್ಷಾಮ ಪರಿಹಾರಕ್ಕೋಸ್ಕರ ಹೊಸ ಪರಿಹಾರ ಕಾರ್ಯಕ್ರಮಗಳನ್ನು ತೆಗೆದುಕೊಳ್ಳುವುದು ಇರಲಿ ಅಲ್ಲಿ ಕೆಲಸ ನಡೆಯುತ್ತಿದ್ದುದು 6 ತಿಂಗಳಿಂದ ನಿಂತುಹೋಗಿ ಅದಕ್ಕೆ ದುಡ್ಡು ಒದಗಿಸಲಾರದೇ 3 ಸಾವಿರ ಜನ ಕೂಲಿಗಾರರು ಕೆಲಸವಿಲ್ಲದೆ ನರಳತಕ್ಕಂಥ ಪರಿಸ್ಥಿತಿಯನ್ನು ನಾವು ನೋಡುತ್ತೇವೆ. ಬಿಜಾಪುರದಲ್ಲಿ ಈ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಗಮನಸೆಳೆದಾಗ 25 ಲಕ್ಷ ರೂಪಾಯಿಗಳನ್ನು ನೀವು ಊರಿಗೆ ಹೋಗುವುದರೊಳಗೆ ಮಂಜೂರು ಮಾಡುತ್ತೇವೆಂದು ಹೇಳಿದರು. ಆದರೆ ಇಲ್ಲಿಯವರೆಗೂ ಅವರಿಗೆ ದುಡ್ಡು ಕೊಟ್ಟಿಲ್ಲ. ಅಲ್ಲಿ ನಿರುದ್ಯೋಗ ಬೆಳೆಯುತ್ತಾ ಇದೆ. ಈ ರೀತಿ ದುರ್ವ್ಯವಹಾರ, ದುರಾಡಳಿತ, ಹಣದ ಮುಗ್ಗಟ್ಟು ಇವೆಲ್ಲಾ ಮೂಡಿ ಬಂದು ಜನಸಾಮಾನ್ಯರಲ್ಲಿ ಅತೃಪ್ತಿ ಮೂಡುತ್ತಿದೆ.

# ಕನ್ನಡ ‘ಎಂದರೆ’ ಎನ್ನಡ ಎನ್ನುವ ಸ್ಥಿತಿ

**6ನೇ ಫೆಬ್ರವರಿ 1981**

**ಶ್ರೀ ಎ.ಕೆ. ಸುಬ್ಬಯ್ಯ:** ಮುಖ್ಯ ಮಂತ್ರಿಗಳಿಗೆ ಲಾಯಲ್ಟಿ ತೋರಲಿಲ್ಲವೆನ್ನುವ ಕಾರಣಕ್ಕಾಗಿ ದಕ್ಷರೆಂದು ಹೆಸರಾದ ಸಚಿವರನ್ನು ಹೊರ ಹಾಕಿದಿರಿ. ಮುಖ್ಯ ಮಂತ್ರಿಗಳಿಗೆ ಲಾಯಲ್ಟಿ ತೋರುವವರನ್ನು ಇಟ್ಟುಕೊಂಡರೆ ಈ ರಾಜ್ಯದ ಆಡಳಿತ ಯಾವ ದಿಕ್ಕಿನಲ್ಲಿ ನಡೆಯುತ್ತದೆನ್ನುವುದು ತಾವೇ ಯೋಚನೆ ಮಾಡಬೇಕು. ಮಾನ್ಯ ಬಂಗಾರಪ್ಪನವರನ್ನು ಕೆಲಸ ಮಾಡುವುದಕ್ಕೆ ಬಿಡದೆ ಮಂತ್ರಿ ಮಂಡಲದಿಂದ ಹೊರಹಾಕಿದರು.

**ಶ್ರೀ ಜಿ. ಪುಟ್ಟಸ್ವಾಮಿಗೌಡ:** ಕನ್ನಡದ ವಿಶ್ವಸಮ್ಮೇಳನ ಮಾಡುತ್ತಾರಂತೆ.

**ಶ್ರೀ ಎ.ಕೆ. ಸುಬ್ಬಯ್ಯ:** “ಕನ್ನಡ” ಎಂದರೆ “ಎನ್ನಡ” ಎಂದು ಹೇಳಬೇಕಾದೀತು. ಇವರು ಎಲ್ಲಿಂದ ಬಂದವರು? ಇಡೀ ಇಲಾಖೆಯ ಆಡಳಿತ ಈಕೆಯ ಕೈಯಲ್ಲಿದೆ. ಶ್ರೀಮತಿ ಮನೋರಮಾ ಮಧ್ವರಾಜ್ ಅವರನ್ನು ಕೇವಲ ಅಲಂಕಾರಕ್ಕಾಗಿ ಇಟ್ಟಿದ್ದಾರೆ. ಶ್ರೀಮತಿ ಮನೋರಮಾ ಮಧ್ವರಾಜ್ ಅವರು ಅನುಭವಶಾಲಿ ಮಂತ್ರಿಗಳು. Of course, I know, If I praise anybody they will be put into trouble. If I want to harm anybody, I must praise them. But, that is not my intention. ಇರುವಂಥ ಪರಿಸ್ಥಿತಿಯನ್ನು ನಾನು ಹೇಳುತ್ತಿದ್ದೇನೆ. ಇವರ ಕಛೇರಿಗೆ ಒಂದೂ ಫೈಲು ಹೋಗುತ್ತಿಲ್ಲ. ಒಂದು ವೇಳೆ ಅವರೇನಾದರೂ ಬರೆದರೆ ಅದಕ್ಕೆ ತದ್ವಿರುದ್ಧವಾದ ಆಜ್ಞೆ ಮೇಲಿನಿಂದ ಬರುತ್ತದೆ. ಶ್ರೀಮತಿ ಇಳಾ ಠಾಕುರ್ ಅವರನ್ನು ಬಾಲಭವನದ ಅಧ್ಯಕ್ಷರನ್ನಾಗಿ ಮಾಡಿರುವುದು ಒಂದು ದೊಡ್ಡ scandal. This matter has to be enquired ಇದಕ್ಕೆ ಸಂಬಂಧಿಸಿದ ಎಲ್ಲಾ ಕಡತಗಳು ಸಭೆಯ ಮುಂದೆ ಬರಲಿ; ಆಗ ಹೇಳುತ್ತೇನೆ ಅವರನ್ನು ಏತಕ್ಕೆ ಮಾಡಿದಿರಿ? ಕರ್ನಾಟಕದಲ್ಲಿ ಜನ ಯಾರೂ ಸಿಕ್ಕುವುದಿಲ್ಲವೇ? What was her-back history? ಸ್ವಚ್ಛ ಆಡಳಿತ, ದಕ್ಷ ಆಡಳಿತ ನಡೆಸುವವರು ಇಂಥ ಕೆಲಸಗಳನ್ನು ಮಾಡುವುದಕ್ಕೆ ಸಾಧ್ಯವೇ? ಸ್ವಚ್ಛ ಮತ್ತು ದಕ್ಷ ಆಡಳಿತವೆಂದು ಹೇಳುವುದು ಈ ಸರ್ಕಾರಕ್ಕೆ ಅಪವಾದ. ಯಾರಾದರೂ ಈ ಸರ್ಕಾರ ಸ್ವಚ್ಛ ಮತ್ತು ದಕ್ಷ ಆಡಳಿತ ನೀಡುತ್ತದೆಂದು ಮನಸ್ಸಿನಲ್ಲಿ ಭಾವಿಸಿದ್ದರೆ ಅದನ್ನು ದಯವಿಟ್ಟು ಬಿಟ್ಟುಬಿಡಿ. ಈ ಸರ್ಕಾರಕ್ಕೆ ಅದು ಸಾಧ್ಯವಾಗುವುದಿಲ್ಲ. ಏನೇನೊ ಕಸುಬುಗಳನ್ನು ಮಾಡುವುದಕ್ಕೆ ಹೋದರೆ ಹೀಗೇ

ಆಗುವುದು. ಈಗ್ಗೆ ಕೆಲವು ದಿವಸಗಳ ಹಿಂದೆ ಬೆಂಗಳೂರು ನಗರದಲ್ಲೊಂದು ಸನ್ಮಾನ ಸಮಾರಂಭ ನಡೆಯಿತು. ಅದರ ಅಧ್ಯಕ್ಷರು ಈ ಸದನದ ನಾಯಕರು. ಸನ್ಮಾನ ಮಾಡಿಸಿಕೊಂಡ ನಾಯಕರಾರು? ಬಹಳ ದೊಡ್ಡ ರಾಷ್ಟ್ರ ನಾಯಕರು: ಎ.ಐ.ಸಿ.ಸಿ. ಯ ಖಜಾಂಚಿಯಾಗಿ ಬಿಟ್ಟರೆ ಇಲ್ಲಿ ಸನ್ಮಾನ; ಸನ್ಮಾನ ಸಮಾರಂಭ ಸಮಿತಿ ಅಧ್ಯಕ್ಷರು ಈ ರಾಜ್ಯದ ಒಬ್ಬ ಮಂತ್ರಿ. ಒಬ್ಬ ಮಂತ್ರಿ ವಸೂಲಾತಿಗೋಸ್ಕರ ಎಲ್ಲೆಲ್ಲಿ ವ್ಯಾಪಾರಸ್ಥರು ಇರುತ್ತಾರೆ; ಎಲ್ಲೆಲ್ಲಿ ಎಕ್ಸೈಸ್ ಕಂಟ್ರಾಕ್ಟರುಗಳಿದ್ದಾರೆ... ಲಾಲಬಾಗಿನಿಂದ ಹಿಡಿದು ನಗರಸಭೆ ಕಟ್ಟಡದವರೆಗೆ ಅಲಂಕಾರ, ವಿದ್ಯುಚ್ಛಕ್ತಿಯನ್ನು ನೇರವಾಗಿ ವಿದ್ಯುತ್ ಕಂಬಗಳಿಂದ ತೆಗೆದುಕೊಂಡಿದ್ದರು. ಅದಕ್ಕೆ ಅರ್ಜಿ ಕೊಟ್ಟಿದ್ದಿರಾ? ಪರ್ಮಿಷನ್ ತೆಗೆದುಕೊಂಡಿದ್ದಿರಾ? ಪೆಟ್ರೋಲ್ ಬಂಕ್‌ಗಳಿಗೆ ಲಾರಿಗಳು ಮುತ್ತಿಗೆ ಹಾಕುತ್ತವೆ; ನೂರಾರು ಲೀಟರ್‌ಗಟ್ಟಲೆ ತುಂಬಿಸಿಕೊಳ್ಳುತ್ತವೆ; ದುಡ್ಡು ಕೊಡದೆ ಹೋಗುತ್ತವೆ. ದುಡ್ಡು ಕೊಡದೆ ಡೀಸಲನ್ನು ತುಂಬಿಸಿಕೊಂಡು ಹೋಗಬಹುದೆ? ಅವರು ಏನಾಗಿದ್ದಾರೆ ಸನ್ಮಾನ ಮಾಡುವುದಕ್ಕೆ? ಸಾರ್ವಜನಕರು ಮಾಡುವುದಾದರೆ ಮಾಡಲಿ. ಮಂತ್ರಿಯೇ ಅಧ್ಯಕ್ಷನಾದರೆ? ಅದು ಅಧಿಕಾರ ದುರುಪಯೋಗವಾಗುತ್ತದೆ. ಲಾಲಬಾಗಿನಲ್ಲಿದ್ದ ತೋಟಗಾರಿಕೆ ಇಲಾಖೆಯ ಸುಮಾರು ನಾಲ್ಕು ನೂರಕ್ಕೂ ಹೆಚ್ಚು ಹೂವಿನ ಪಾಟ್‌ಗಳನ್ನು ಕೆ.ಕೆ. ಎಕ್ಸ್‌ಪ್ರೆಸ್‌ನಲ್ಲಿ ಕೊಂಡೊಯ್ದು ದೆಹಲಿಯಲ್ಲಿರುವ ಎಂ.ಪಿ. ಮನೆಯನ್ನು ಅಲಂಕಾರ ಮಾಡಲಾಗಿದೆ. ಎಂ.ಪಿ. ಯ ಮನೆಯನ್ನು ಅಲಂಕಾರ ಮಾಡುವುದಕ್ಕಾಗಿ ಬೆಂಗಳೂರಿನ ಲಾಲಬಾಗಿನಿಂದ ಹೂವಿನ ಪಾಟ್‌ಗಳನ್ನು ತೆಗೆದುಕೊಂಡು ಹೋದ ಇವರು ಯಾವ ಮಟ್ಟದ ಜನ? ಇವರು ಸ್ವಚ್ಛ ಆಡಳಿತ ಕೊಡುತ್ತಾರೆಯೆ? ಈ ಸನ್ಮಾನ ಸಮಾರಂಭಕ್ಕಾಗಿ ಕೋಟಿಗಟ್ಟಲೆ ಹಣ ವಸೂಲಾಗಿದೆ. ಚೇಂಬರ್ ಆಫ್ ಕಾಮರ್ಸ್‌ನ ಅಧ್ಯಕ್ಷರು ಸ್ವತಃ ಹಣ ವಸೂಲ್ಮಾಡುವ ಕಾರ್ಯಾಚರಣೆ ಮಾಡಿದ್ದಾರೆ. ಎಲ್ಲ ವ್ಯಾಪಾರಸ್ಥರ ಅಂಗಡಿಗಳಲ್ಲೂ ಹಣ ವಸೂಲ್ಮಾಡಿದ್ದಾರೆ. ಇಲಾಖೆಯಿಂದ ಹಣ ವಸೂಲ್ಮಾಡುವುದಕ್ಕೆ ಬಿಟ್ಟಿದ್ದಾರೆ. ರಾಜ್ಯದ ಒಬ್ಬ ಮಂತ್ರಿ ಈ ಸಮಾರಂಭದ ಅಧ್ಯಕ್ಷರಾಗಿರುವ ಕಾರಣ. ಈ ಸಮಾರಂಭಕ್ಕಾಗಿ ಎಷ್ಟು ಹಣ ವಸೂಲಾಗಿದೆ ಮತ್ತು ಎಷ್ಟು ಹಣ ಖರ್ಚಾಗಿದೆ ಎಂಬ ಬಗ್ಗೆ ಸಂಪೂರ್ಣ ಲೆಕ್ಕವನ್ನು ಜನತೆಗೆ ಕೊಡಬೇಕಾಗಿದೆ. ಅದನ್ನು ಕೇಳುವಂಥ ಅಧಿಕಾರ ಈ ಸದನಕ್ಕಿದೆ. ದುರುದ್ದೇಶಗಳನ್ನು ಇಟ್ಟುಕೊಂಡು ಸುಮಾರು 130 ಸನ್ಮಾನ ಸಮಾರಂಭಗಳು ಈ ಹನ್ನೆರಡು ತಿಂಗಳಲ್ಲಿ ನಮ್ಮ ರಾಜ್ಯದಲ್ಲಿ ನಡೆದಿವೆ. ಇಂಥ ದುರುದ್ದೇಶವಿಟ್ಟುಕೊಂಡು ಸ್ವಚ್ಛ ಆಡಳಿತದ ಮಾತನಾಡುತ್ತಿರುವುದು ತುಂಬಾ ಸೋಜಿಗ.

# ಚಿಂತಾಮಣಿಯಲ್ಲಿ ಹರಿಜನರ ಮೇಲೆ ಹಲ್ಲೆಯಾದ ಕುರಿತು ಚರ್ಚೆ

**3ನೇ ಫೆಬ್ರವರಿ 1984**

**ಶ್ರೀ ಎ.ಕೆ. ಸುಬ್ಬಯ್ಯ** (ಪದವೀಧರರ ಕ್ಷೇತ್ರ): ಸನ್ಮಾನ್ಯ ಸಭಾಪತಿಯವರೆ, ಕೋಲಾರ ಜಿಲ್ಲೆ ಚಿಂತಾಮಣಿ ನಗರದಲ್ಲಿ ಹರಿಜನರ ಮೇಲೆ ನಡೆದಿರತಕ್ಕಂಥ ದೌರ್ಜನ್ಯ, ದಬ್ಬಾಳಿಕೆ, ಹಲ್ಲೆಯ ಬಗ್ಗೆ ನಿಯಮಾವಳಿ 310ರ ಪ್ರಕಾರ ನಾನು ಈ ಸಂದರ್ಭದಲ್ಲಿ ಪ್ರಸ್ತಾಪ ಮಾಡಲಿಕ್ಕೆ ಎದ್ದು ನಿಂತಿದ್ದೇನೆ. ದಿನಾಂಕ: 24.11.1983ರಂದು ರಾತ್ರಿ, ಚಿಂತಾಮಣಿ ಟೌನಿನ, ವಿನೋಬಾ ಕಾಲೋನಿ ಹರಿಜನರ ಮೇಲೆ 100 ಜನರು ದಾಳಿ ಮಾಡಿದ್ದಾರೆ. 5 ಗುಡಿಸಲುಗಳು, 12 ಹೆಂಚಿನ ಮನೆಗಳು ಸಂಪೂರ್ಣ ನಾಶವಾಗಿವೆ. 6 ಜನ ಗಂಡಸರಿಗೆ, ಒಬ್ಬ ಮಹಿಳೆಗೆ ಚಾಕುವಿನಿಂದ ಇರಿದು, ಸೈಕಲ್ ಚೈನಿಂದ ಹೊಡೆದು ಗಾಯಗೊಳಿಸಿದ್ದಾರೆ. ಆನಂತರ ಪೊಲೀಸರು ಅಲ್ಲಿಗೆ ಹೋಗಿ ಕಾವಲು ಇದ್ದಾರೆ. ಪೊಲೀಸರು ಕಾವಲು ಇದ್ದರೂ ಸಹ ಮತ್ತೆ ಎರಡು ದಿವಸಗಳ ನಂತರ 26.12.83 ರಂದು ದಾಳಿ ನಡೆಸಿದ್ದಾರೆ. ಶೀನಪ್ಪ ಎನ್ನುವವರಿಗೆ 24.11.83ರಲ್ಲಿ ಮಾರಣಾಂತಿಕ ಹಲ್ಲೆ ಮಾಡಿದ್ದಾರೆ, ಗಂಗಪ್ಪ ಅವರನ್ನು 27.11.83 ರಂದು ಬಿಡುಗಡೆ ಮಾಡುತ್ತಾರೆ. 3.12.1983ರಲ್ಲಿ ಅವರ ಸಾವು ಆಗುತ್ತದೆ. ಈ ಬಗ್ಗೆ ಸುಮಾರು 25 ದೂರುಗಳು ಪೊಲೀಸರಿಗೆ ಹೋಗಿದ್ದರೂ, ಎರಡು ದೂರುಗಳನ್ನು ದಾಖಲೆ ಮಾಡಿಕೊಂಡು 40 ಜನರ ಹೆಸರನ್ನು ಪೊಲಿಸರಿಗೆ ಕೊಟ್ಟಿದ್ದರೂ 25 ಜನರ ವಿರುದ್ಧ ಮಾತ್ರ ಕ್ರಮವನ್ನು ಜರುಗಿಸಿದ್ದಾರೆ. ದೂರುಗಳು ಮೊದಲೇ ಬಂದಿದೆ. ವಿನೋಬಾ ಹರಿಜನರ ಕಾಲೋನಿಯಲ್ಲಿ ನಡೆಯುತ್ತಿರುವ ಕೃತ್ಯ ಇದು ಮೂರನೆಯದು. ದೊಡ್ಡ ದೊಡ್ಡ ಬಲಶಾಲಿ ವರ್ಗ, ಜಮೀನುದಾರರ ವರ್ಗ ಹರಿಜನರನ್ನು ತಲೆ ಎತ್ತಲಿಕ್ಕೆ ಬಿಡಬಾರದೆಂದು ಪುರಾತನ ಮನೋಭಾವನೆ ಇಟ್ಟುಕೊಂಡು, ಹರಿಜನರೇನಾದರೂ ಸೂಟು ಬಟ್ಟೆ ಧರಿಸಿಕೊಂಡು ರಸ್ತೆಯಲ್ಲಿ ತಿರುಗಿದರೆ ಅವರ ಮೇಲೆ ಕಣ್ಣು ಇಡುವುದು, ತಲೆಗೆ ಎಣ್ಣೆ ಹಾಕಿಕೊಂಡು ತಿರುಗುವವರ ಮೇಲೆ ಕಣ್ಣು ಇಡುವುದು ಇನ್ನೂ ನಮ್ಮ ರಾಜ್ಯದಲ್ಲಿದೆ. ನಮ್ಮ ರಾಜ್ಯದಲ್ಲಿ ಹರಿಜನರು ಸಮಾನ ಹಕ್ಕುಳ್ಳವರು ಎನ್ನುವುದನ್ನು ಬಲಶಾಲಿ ವರ್ಗದ ಜನ ಇನ್ನೂ ಒಪ್ಪಿಕೊಳ್ಳಲಿಕ್ಕೆ ತಯಾರಿಲ್ಲ. ಆದ್ದರಿಂದ, ಹರಿಜನ ವರ್ಗ ಏನಿದೆ ಅವರಿಗೆ ವಿಶೇಷ ರಕ್ಷಣೆ ಕೊಡತಕ್ಕದ್ದು ಸಕಾರದ ಜವಾಬ್ದಾರಿ ಇದೆ. ಆ ಒಂದು ಜವಾಬ್ದಾರಿಯನ್ನು ವಹಿಸುವುದರಲ್ಲಿ ಸರ್ಕಾರ ವಿಫಲವಾಗಿದೆ. ಪೊಲೀಸರೂ ಸಹ ದುಂಡಾವರ್ತಿ

ಜನರಲ್ಲಿ ಶಾಮೀಲಾಗಿದ್ದಾರೆ. ಮೂರನೆಯ ತಾರೀಖು ಮರಣ ಹೊಂದಿದ ತಳಾ ಗಂಗಪ್ಪನವರ ಮರಣೋತ್ತರ ಪರೀಕ್ಷೆಯಲ್ಲಿ ಅವರು ಬಲಹೀನತೆಯಿಂದ ಸತ್ತಿದ್ದಾರೆಂದು ಡಾಕ್ಟರು ಸರ್ಟಿಫಿಕೇಟ್ ಕೊಟ್ಟಿದ್ದಾರೆ. ಅವರ ಪ್ರಾಣ ಹೋದದ್ದರಿಂದ ಸತ್ತದ್ದು ಎಂದು ಬರೆದಿಲ್ಲ. ಅವರಿಗೆ ಹೊಡೆತ ಬಿದ್ದಿದೆ, ಆಸ್ಪತ್ರೆಯಲ್ಲಿ ಶುಶ್ರೂಷೆ ಪಡೆದಿದ್ದಾರೆ, ಅವರಿಗೆ ಬಿದ್ದಿದ್ದ ಹೊಡೆತದ ಮೇಲೆ ಚಕಾರ ಇಲ್ಲ. ಇದನ್ನು ನೋಡಿದರೆ ಡಾಕ್ಟರು, ಹಲ್ಲೆ ಮಾಡಿರುವವರು ಶಾಮೀಲಾಗಿದ್ದಾರೆ. ಆಡಳಿತ ಪಕ್ಷದ, ಜನತಾಪಕ್ಷದ ಪ್ರಮುಖ ಜನ ಅಲ್ಲಿ ಇದ್ದಾರೆ ಇದು ಪ್ರಮುಖವಾದ ವಿಚಾರ. ಎಲ್ಲರೂ ಅವರನ್ನು ರಕ್ಷಣೆ ಮಾಡುತ್ತಿರುವುದರಿಂದ ಸರ್ಕಾರ ಏನೂ ಕ್ರಮ ತೆಗೆದುಕೊಳ್ಳುತ್ತಿಲ್ಲ. ಈ ಜನ ಜನತಾ ಪಾರ್ಟಿಯವರು ಎಂದು ಅಲ್ಲ. ಅವರು ಹಿಂದೆ ಅಧಿಕಾರದಲ್ಲಿದ್ದಂಥ ಪಕ್ಷದಲ್ಲಿ ಇರಬಹುದು. ನಾಳೆ ಇನ್ನೊಂದು ಪಕ್ಷ ಬಂದರೆ ಅವರು ಅಲ್ಲಿಯೂ ಬರುತ್ತಾರೆ. ಜನತಾ ಅಥವಾ ಕಾಂಗ್ರೆಸ್ (ಐ) ಎಂದು ಅಲ್ಲ. ಇವರು ಬದಲಾವಣೆಯೇ ಆಗುವುದಿಲ್ಲ. ಇವರ ನಿಷ್ಠೆ ಸರ್ಕಾರದ ಪಾರ್ಟಿ ಕಡೆ ಇರುತ್ತದೆ. ಜನತಾ ಪಾರ್ಟಿ ಕಡೆ ಇರುತ್ತದೆ. ಸರ್ಕಾರದ ಪಾರ್ಟಿ ಬದಲಾದರೆ ಅವರು ಏನು ಮಾಡಬೇಕು? ಅವರು ಮಾತ್ರ ನಿಜವಾಗಿ ಪಕ್ಷಾಂತರ ಆಗದ ಜನ. They are always with the ruling party. If the Ruling parties change, What can they do? ಅವರು ಯಾವುದೇ ಪಕ್ಷ ಆಡಳಿತಕ್ಕೆ ಬರಲಿ, ಅವರು ಆ ಪಕ್ಷದ ಮೇಲೆ ತಮ್ಮ ಪ್ರೀತಿಯನ್ನು ತೋರಿಸುತ್ತಾರೆ, ಕಾರಣ ಅವರಿಗೆ ರಕ್ಷಣೆ ಸಿಕ್ಕುತ್ತದೆ ಎಂದು ಬರುತ್ತಾರೆ. 35 ವರ್ಷದಿಂದ ಯಾವ ಸರ್ಕಾರ ಬಂದರೂ ಇವರು ರಕ್ಷಣೆ ಪಡೆದುಕೊಂಡು ಬದುಕಿಕೊಂಡು ಬರುತ್ತಿದ್ದಾರೆ. ದುರ್ಬಲವರ್ಗದವರು ಅನ್ಯಾಯ ಅನುಭವಿಸಿಕೊಂಡು ಬರುತ್ತಿದ್ದಾರೆ. ಆದ್ದರಿಂದ, ಇದರ ಬಗ್ಗೆ ಬಹಳ ಗಂಭೀರವಾದ ವಿಚಾರ ಮಾಡಬೇಕೆಂದು ಹೇಳುತ್ತೇನೆ.

**Sri J.H. Patel:-** Sir, there is a saying in English that “Kings and Queens may come and go but the courtiers remain the same.

**ಶ್ರೀ ಎ.ಕೆ. ಸುಬ್ಬಯ್ಯ:** ಮಾನ್ಯ ಸಭಾಪತಿಯವರೆ; ಸರ್ಕಾರದ ಗಮನಕ್ಕೆ ಈ ವಿಷಯವನ್ನು ವಿಶೇಷವಾಗಿ ತರಲಿಕ್ಕೆ ಏತಕ್ಕೆ ಪ್ರಯತ್ನ ಮಾಡಿದೆ ಎಂದರೆ, ಸರ್ಕಾರ ಇವೊತ್ತು ದುರ್ಬಲ ವರ್ಗದವರ ಬಗ್ಗೆ ಆಸ್ಥೆ ವಹಿಸದೇ ಇದ್ದುದರಿಂದ ಅವರು ಬಹಳ ತೊಂದರೆಪಡಬೇಕಾಗುತ್ತದೆ. ಪಟ್ಟಭದ್ರಹಿತಾಸಕ್ತಿಗಳಿಂದ ದುರ್ಬಲ ವರ್ಗದವರಿಗೆ ರಕ್ಷಣೆ ಸಿಕ್ಕುತ್ತಿಲ್ಲ. ಕೋಲಾರ ಜಿಲ್ಲೆ, ತುಮಕೂರು ಜಿಲ್ಲೆಗಳಲ್ಲಿ ಇದು

ವ್ಯಾಪಕವಾಗಿ ಬೆಳೆದುಕೊಂಡು ಬಂದಿದೆ. ಇವೊತ್ತು ಜನತಾ ಪಕ್ಷದವರು ಇರುವುದರಿಂದ ರಕ್ಷಣೆ ಕೊಡುತ್ತಾರೆಂದು ಪೊಲಿಸರು ಸರಿಯಾದ ಕ್ರಮವನ್ನು ತೆಗೆದುಕೊಂಡಿಲ್ಲ. ಅದು ಸರಿಯಲ್ಲ ಎನ್ನುವ ರೀತಿಯಲ್ಲಿ ಹೇಳಿಕೆಯಾಗಬೇಕು. ಅಮೂಲಾಗ್ರವಾಗಿ ಇದನ್ನು ತನಿಖೆ ಮಾಡಲಿಕ್ಕೆ ಎಲ್ಲಾ ಪ್ರಕರಣವನ್ನು ಸಿಓಡಿಗೆ ರೆಫರ್ ಮಾಡಿ ಅಲ್ಲಿರತಕ್ಕ ನೊಂದ ಹರಿಜನ ಕೋಮಿನವರಿಗೆ ನ್ಯಾಯ ಒದಗಿಸಿಕೊಡಬೇಕು. ಇನ್ನು ಅಲ್ಲಿ ನೊಂದವರಿಗೆ 5 ಕೆ.ಜಿ. ರಾಗಿ, 2 ಕೆ.ಜಿ. ಅಕ್ಕಿ 2 ಮಣ್ಣಿನ ಪಾತ್ರೆ ಪರಿಹಾರ ಕೊಟ್ಟಿದ್ದಾರೆಂದು ತಿಳಿದು ಬಂದಿದೆ. ಅದನ್ನು ಯಾರು ಕೊಟ್ಟರೋ, ಅದು ಯಾವ ಕಾನೂನಿನಲ್ಲಿದೆಯೋ ಗೊತ್ತಾಗಲಿಲ್ಲ. ಅವರಿಗೆ ಪರಿಹಾರಕೊಡಲಿಕ್ಕೆ ಸರ್ಕಾರದವರು ಏನಾದರೂ ಹಣ ಒದಗಿಸಿದ್ದರೆ ಅದನ್ನೆಲ್ಲಾ ನುಂಗಿಹಾಕಿ. ಇಲ್ಲಿ 2 ಕೆ.ಜಿ. ಅಕ್ಕಿ 5 ಕೆ.ಜಿ. ರಾಗಿ ಕೊಟ್ಟಿದ್ದಾರೆನ್ನುವ ಅಭಿಪ್ರಾಯಕ್ಕೆ ಬರಬೇಕಾಗುತ್ತದೆ. ಅವರ ಗುಡಿಸಲುಗಳು ಭಸ್ಮವಾಗಿ, ಮನೆಗಳು ಸುಟ್ಟು ಹೋಗಿರುವಂತಾದ್ದಕ್ಕೆ, ಗಾಯಗೊಂಡವರಿಗೆ, ಸರ್ಕಾರದವರು ಏನು ಪರಿಹಾರ ಕೊಟ್ಟಿದ್ದಾರೆ ಎನ್ನುವುದನ್ನು ಮಾನ್ಯ ಮಂತ್ರಿಗಳಿಂದ ಈ ಸಂದರ್ಭದಲ್ಲಿ ತಿಳಿಯುವುದಕ್ಕೆ ಇಷ್ಟಪಡುತ್ತೇನೆ.

**ಶ್ರೀ ರಮೇಶ್ ಜಿಗಜಿಣಗಿ (ರಾಜ್ಯ ಗೃಹ ಮಂತ್ರಿಗಳು):** 1. ಚಿಂತಾಮಣಿ ಟೌನ್ ಚನ್ನ ಶೆಟ್ಟಿಹಳ್ಳಿಯ ನಿವಾಸಿಗಳಾದ ಶ್ರೀ ಎಂ. ಸೀನಪ್ಪ ತಂದೆ ಮಲ್ಲಪ್ಪ ಇವರು ಚಿಂತಾಮಣಿ ಪೊಲೀಸ್ ಠಾಣೆಗೆ ಬಂದು ತಮ್ಮ ಮೇಲೆ ವಿನೋಬಾ ಕಾಲೋನಿಯ ಹರಿಜನರು ಕೂಲಿ ಸಂಬಂಧದ ಜಗಳದಲ್ಲಿ ತಮ್ಮ ಮೇಲೆ ಹಲ್ಲೆ ಮಾಡಿದ್ದಾಗಿ ದೂರು ಕೊಟ್ಟರು. ಶ್ರೀ ಸೀನಪ್ಪನವರು ಪೊಲೀಸ್ ಠಾಣೆಗೆ ರಾತ್ರಿ ಸುಮಾರು 8 ಗಂಟೆಗೆ ಬಂದಿದ್ದರು. ಆ ಸಮಯದಲ್ಲಿ ಪೊಲೀಸ್ ಠಾಣೆಯಲ್ಲಿ ಹಾಜರಿದ್ದ ಎಎಸ್‌ಐ ಶ್ರೀ ಟಿ.ವಿ. ಶಂಕರಪ್ಪ ಇವರು ವಿನೋಭಾ ಕಾಲೋನಿಯಲ್ಲಿ ಶಾಂತಿಗೆ ಧಕ್ಕೆ ಬರುವ ಸಂಭವ ಇದೆಯೆಂದು ಬಂದ ದೂರವಾಣಿ ಕರೆಯನ್ನು ಸ್ವೀಕರಿಸಿದರು. ಇಷ್ಟು ಹೊತ್ತಿಗಾಗಲೇ ಎರಡು ಗುಂಪುಗಳು ಸೇರಿ ಅಕ್ರಮ ಕೂಟವನ್ನು ರಚಿಸಿ ಕಲ್ಲು ತೂರಾಟದಲ್ಲಿ ತೊಡಗಿದ್ದರೆಂದು ತಿಳಿದು ಎಎಸ್‌ಐ ಟಿ.ವಿ. ಶಂಕರಪ್ಪ ಮತ್ತು ಪಿ.ಸಿ. ನಂ. 143 ನಾಗಭೂಷಣ ಸ್ಥಳಕ್ಕೆ ಧಾವಿಸಿ ಪರಿಸ್ಥಿತಿಯನ್ನು ಹತೋಟಿಗೆ ತರಲು ಪ್ರಯತ್ನಿಸಿದರು. ಅಷ್ಟರಲ್ಲಿ ಹೆಚ್.ಸಿ. ಸಂ. 70 ಮುನಿಯಪ್ಪ ಕೂಡ ಸ್ಥಳಕ್ಕೆ ಧಾವಿಸಿದರು. ಇವರುಗಳು ಅಕ್ರಮ ಗುಂಪಿಗೆ ಎಚ್ಚರಿಕೆ ನೀಡಿ ಚದುರಿಸಲು

ಪ್ರಯತ್ನಿಸಿದಾಗ ಅವರಿಗೆ ಗಾಯಗಳಾದವು. ಚಿಂತಾಮಣಿಯ ಸರ್ಕಲ್ ಇನ್ಸ್‌ಪೆಕ್ಟರ್ ಶ್ರೀ ಲಕ್ಷ್ಮಣ್ ಇವರೂ ಕೂಡಾ ತಕ್ಷಣ ಸ್ಥಳಕ್ಕೆ ಧಾವಿಸಿದರು. ಇವರಿಗೂ ಕೂಡಾ ಕಲ್ಲು ತೂರಾಟದಲ್ಲಿ ಗಾಯಗಳಾದವು.

2. ಚಿಂತಾಮಣಿ ಡಿವೈಎಸ್‌ಪಿಯವರು ಮತ್ತು ತಹಸೀಲ್ದಾರರು ಆ ದಿನ ಕೈವಾರಕ್ಕೆ ಕೆಲಸದ ನಿಮಿತ್ತ ಹೋಗಿದ್ದರು. ಸುಮಾರು ರಾತ್ರಿ 9.45ಕ್ಕೆ ಟ್ರಂಕ್‌ಕಾಲ್ ಮೂಲಕ ಸುದ್ದಿ ಬಂದ ತಕ್ಷಣ ಚಿಂತಾಮಣಿಗೆ ತೆರಳಿದರು. ಅವರು ಸ್ಥಳಕ್ಕೆ ತಲುಪುವಷ್ಟರಲ್ಲಿ ವಿನೋಭಾ ಕಾಲೋನಿಯಲ್ಲಿ ಐದು ಮನೆಗಳಿಗೆ ಜಖಂ ಆಗಿದ್ದು ಕಂಡು ಬಂತು. ಡಿವೈಎಸ್‌ಪಿಯವರು ವಿನೋಭಾ ಕಾಲೋನಿ ಮತ್ತು ಚನ್ನಶೆಟ್ಟಿಹಳ್ಳಿಯಲ್ಲಿ ಗಸ್ತು ತಿರುಗಿ ಪರಿಸ್ಥಿತಿಯನ್ನು ಹತೋಟಿಗೆ ತರಲು ಪ್ರಯತ್ನಿಸಿದರು. ಕೋಲಾರ ಜಿಲ್ಲಾ ಪೊಲೀಸ್ ಅಧಿಕಾರಿಗಳು ಕೂಡ ಸ್ಥಳಕ್ಕೆ ಹೆಚ್ಚಿನ ಪೊಲೀಸ್ ಪಡೆಯನ್ನು ತೆಗೆದುಕೊಂಡು ಧಾವಿಸಿದರು. ಕೆ.ಜಿ.ಎಫ್ ನಿಂದ ಅಗ್ನಿ ಶಾಮಕ ದಳ ಕೂಡಾ ಧಾವಿಸಿ ವಿನೋಭಾ ಕಾಲೋನಿ ಮತ್ತು ಎಸ್.ಎಲ್.ಎನ್. ಸಿನಿಮಾ ಥಿಯೇಟರ್ ಸಮೀಪದಲ್ಲಿ ಉರಿಯುತ್ತಿರುವ ಬೆಂಕಿಯನ್ನು ನಂದಿಸಿದರು. ಈ ಕೃತ್ಯಕ್ಕೆ ಜಿ.ವಿ. ನಾರಾಯಣ ಸ್ವಾಮಿ ಮತ್ತು ಅವರ ಮುಖಂಡತ್ವದಲ್ಲಿ ಸೇರಿದ ಚನ್ನಶೆಟ್ಟಿಹಳ್ಳಿಯ ಐವತ್ತು ಜನರು ಕಾರಣರೆಂದು ಹರಿಜನ ಮುಖಂಡರು ತಿಳಿಸಿದರು.

3. ಈ ಘಟನೆಗೆ ಸಂಬಂಧಿಸಿದಂತೆ ಚಿಂತಾಮಣಿ ಪೊಲೀಸ್ ಠಾಣೆಯಲ್ಲಿ ಈ ಕೆಳಗಿನ 5 ಮೊಕದ್ದಮೆಗಳನ್ನು ನೊಂದಾಯಿಸಿಕೊಳ್ಳಲಾಗಿದೆ.

1. ಅಪರಾಧ ಸಂಖ್ಯೆ 153:83 ಅಂಡರ್ ಸೆಕ್ಷನ್ 143, 147, 148, 324 ರೆಡ್‌ವಿತ್ 149 ಐಪಿಸಿ.
2. ಅಪರಾಧ ಸಂಖ್ಯೆ 154:83 ಅಂಡರ್ ಸೆಕ್ಷನ್ 143, 147, 148, 324 426 427 ರೆಡ್‌ವಿತ್ 149 ಐಪಿಸಿ.
3. ಅಪರಾಧ ಸಂಖ್ಯೆ 155:83 ಅಂಡರ್ ಸೆಕ್ಷನ್ 143, 147, 148, 324, 353 ರೆಡ್‌ವಿತ್ 149 ಐಪಿಸಿ.
4. ಅಪರಾಧ ಸಂಖ್ಯೆ 156:83 ಅಂಡರ್ ಸೆಕ್ಷನ್ 324 ಐಪಿಸಿ.
5. ಅಪರಾಧ ಸಂಖ್ಯೆ 157:83 ಅಂಡರ್ ಸೆಕ್ಷನ್ 143, 147, 148, 324 ರೆಡ್‌ವಿತ್ 149 ಐಪಿಸಿ.

4. ಈ ಮೇಲಿನ ಘಟನೆಯಲ್ಲಿ ದಿನಾಂಕ: 24.11.83 ರಂದು ಏಳು ಜನ ಹರಿಜನರಿಗೆ ಗಾಯಗಳಾದುವು. ಹಾಗೂ ಇದೇ ಘಟನೆಯಲ್ಲಿ ಚಿಂತಾಮಣಿ ಟೌನಿನ ಸರ್ಕಲ್ ಇನ್ಸ್‌ಪೆಕ್ಟರ್ ಮತ್ತು ಎಎಸ್ಐ, ಹೆಚ್.ಸಿ. ಮತ್ತು ಪಿ.ಸಿ. ಸೇರಿದಂತೆ 4 ಜನ ಪೊಲೀಸ್ ಅಧಿಕಾರಿಗಳಿಗೆ ಗಾಯಗಳಾದವು. ಅವರಲ್ಲಿ ಚಿಂತಾಮಣಿಯ ಸರ್ಕಲ್ ಇನ್ಸ್‌ಪೆಕ್ಟರ್ ಮತ್ತು ಎಎಸ್ಐ ಅವರಿಗೆ ತೀವ್ರವಾದ ಗಾಯಗಳಾಗಿವೆಯೆಂದು ಶಂಕಿಸಲಾಯಿತು. ಚಿಂತಾಮಣಿಯ ಸರ್ಕಲ್ ಇನ್ಸ್‌ಪೆಕ್ಟರ್‌ರವರನ್ನು ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಗೆ ಚಿಕಿತ್ಸೆಗಾಗಿ ಸಾಗಿಸಲಾಯಿತು.

5. ನಂತರ 25.11.83 ರಂದು ನಡೆದ ಘಟನೆಯಲ್ಲಿ ಸೀನಪ್ಪ ತಂದೆ ಕೋನಪ್ಪ (ಹರಿಜನ) ಮತ್ತು ನಾರಾಯಣಪ್ಪ ಅಲಿಯಾಸ್ ನಾರಾಯಣ ಸ್ವಾಮಿ ತಂದೆ ವೆಂಕಟರಾಯಪ್ಪ (ಒಕ್ಕಲಿಗ) ಇವರು ಗಾಯಗೊಂಡರು. ದಿನಾಂಕ: 25.11.83 ರಂದು ಸೆಂಟ್ರಲ್ ರೇಂಜಿನ ಡಿಐಜಿಯವರು, ಕೋಲಾರದ ಜಿಲ್ಲಾಧಿಕಾರಿಗಳು. ಚಿಕ್ಕಬಳ್ಳಾಪುರ ಉಪ ವಿಭಾಗಾಧಿಕಾರಿಗಳು ಸ್ಥಳಕ್ಕೆ ಭೇಟಿ ಇತ್ತು ಬಂದೋಬಸ್ತು ವ್ಯವಸ್ಥೆ ಮಾಡಿದರು. ಮತ್ತು ಜಿಲ್ಲಾಧಿಕಾರಿಗಳು ಬೆಂಕಿಯ ಅನಾಹುತದಲ್ಲಿ ನೊಂದವರಿಗೆ ಪರಿಹಾರವನ್ನು ಕೊಟ್ಟರು. ದಿನಾಂಕ: 25.11.83 ರಂದು ಗುನ್ನೆ ನಂ. 154.83 ಅಂಡರ್ ಸೆಕ್ಷನ್ 143, 147, 148, 324, 436, 427 ರೆಡ್‌ವಿತ್ 149 ಐಪಿಸಿ ಪ್ರಕಾರ 18 ಜನರನ್ನು ದಸ್ತಗಿರಿ ಮಾಡಿ ಚಿಂತಾಮಣಿ ಜೆಎಂಎಫ್‌ಸಿ ಕೋರ್ಟಿಗೆ ಹಾಜರು ಮಾಡಿ 15 ದಿವಸ ನ್ಯಾಯಾಂಗ ಅಭಿರಕ್ಷಣೆಯಲ್ಲಿಡಲು ಬೇಡಿಕೊಳ್ಳಲಾಯಿತು. ಮ್ಯಾಜಿಸ್ಟ್ರೇಟರು ಅವರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿದರು. ಈ ಗುನ್ನೆಯಲ್ಲಿ ಮುಖ್ಯ ಆಪಾದಿತರಾದ ಜೆ.ವಿ. ನಾರಾಯಣ ಸ್ವಾಮಿಯವರು ನಾಪತ್ತೆಯಾಗಿದ್ದರು. ಅನಂತರ ಕೋರ್ಟಿಗೆ ಹಾಜರಾಗಲಾಗಿ ಜಾಮೀನಿನ ಮೇಲೆ ಬಿಡುಗಡೆ ಹೊಂದಿದರು.

6. ವಿನೋಭಾ ಕಾಲೋನಿಯ ಹರಿಜನರ ಮೇಲೆ ಹಲ್ಲೆ ಮಾಡಿದ ಆಪಾದಿತರಲ್ಲಿ ಅನೇಕರು ಚನ್ನಶೆಟ್ಟಿಯ ರೌಡಿಗಳೆಂದು ತಿಳಿದು ಬಂದಿದೆ. ಅವರ ಮೇಲೆ ಸಿಆರ್‌ಪಿಸಿ ಕಲಂ 110ರ ಅನ್ವಯ ಕ್ರಮ ಜರುಗಿಸಲಾಗಿದೆ.

7. ಈ ಸಂಬಂಧದಲ್ಲಿ ನೊಂದಾಯಿಸಿಕೊಂಡ ಎಲ್ಲಾ ಮೊಕದ್ದಮೆಗಳನ್ನೂ ಕೂಲಂಕುಷವಾಗಿ ತನಿಖೆ ಮಾಡಲಾಗಿ ಚಿಂತಾಮಣಿ ಜೆಎಂಎಫ್‌ಸಿ ಕೋರ್ಟಿನಲ್ಲಿ ಚಾರ್ಜ್‌ಷೀಟನ್ನು ಹಾಕಲಾಗಿದೆ. ಈ ಸಂಬಂಧದಲ್ಲಿ ಮೊಕದ್ದಮೆಗಳು ಈ ರೀತಿಯಾಗಿವೆ.

1) ಅಪರಾಧ ಸಂಖ್ಯೆ 153.83 2) ಅಪರಾಧ ಸಂಖ್ಯೆ 154.83
3) ಅಪರಾಧ ಸಂಖ್ಯೆ 155.83 4) ಅಪರಾಧ ಸಂಖ್ಯೆ 156.83
5) ಅಪರಾಧ ಸಂಖ್ಯೆ 157.83

8. ದಿನಾಂಕ: 26.11.83 ರಂದು ಈ ಗಲಭೆಯಲ್ಲಿ ನೊಂದ ಇಪ್ಪತ್ತಾಲ್ಕು ಹರಿಜನರಿಗೆ ಕೋಲಾರ ಜಿಲ್ಲಾಧಿಕಾರಿಗಳು 10 ಸಾವಿರದ ಒಂದೂನೂರ ನಲವತ್ತನಾಲ್ಕು ರೂಪಾಯಿ 50 ಪೈಸೆ ಪರಿಹಾರವನ್ನು ಹಂಚಿದರು. ಕರ್ನಾಟಕ ಪೊಲೀಸ್ ಆ್ಯಕ್ಟ್ ಕಲಂ 55ರ ಅನ್ವಯ ಜೆ.ವಿ. ನಾರಾಯಣ ಸ್ವಾಮಿ ತಂದೆ ವೆಂಕಟರಾಯಪ್ಪ ಮತ್ತು ವೆಂಕಟೇಶ್ ಅಲಿಯಾಸ್ ರೇಜರ್ ವೆಂಕಟೇಶ್ ತಂದೆ ಅಂಗಡಿ ನಾರಾಯಣಪ್ಪ ಚಿಂತಾಮಣಿ ಟೌನ್ ಇವರ ವಿರುದ್ಧ ಕೋಲಾರ ಜಿಲ್ಲಾ ಮಾಜಿಸ್ಟ್ರೇಟರಿಗೆ ದಿನಾಂಕ:3.1.84 ಮತ್ತು 31.1.84 ರಂದು ಗಡಿಪಾರು ಮಾಡಲು ವರದಿಯನ್ನು ಕಳುಹಿಸಲಾಗಿದೆ. ಈ ಸಂಬಂಧದಲ್ಲಿ ಕೋಲಾರ ಜಿಲ್ಲಾ ಮ್ಯಾಜಿಸ್ಟ್ರೇಟರ ಆಜ್ಞೆಯನ್ನು ನಿರೀಕ್ಷಿಸಲಾಗಿದೆ.

ಮಾನ್ಯ ಅಧ್ಯಕ್ಷರೆ, ಅಲ್ಲಿ ನಡೆದಿರತಕ್ಕ ಎಲ್ಲಾ ಘಟನೆಗಳ ಬಗ್ಗೆಯೂ ಸರ್ಕಾರ ಸೂಕ್ತ ಪರಿಹಾರಗಳನ್ನು ಕಂಡುಹಿಡಿದಿದೆ. ಆದರೆ ಮಾನ್ಯ ಹಿರಿಯ ಸದಸ್ಯರಾದ ಸುಬ್ಬಯ್ಯನವರು ಮಾತನಾಡುತ್ತಾ ಸರ್ಕಾರ ಈ ದಿಸೆಯಲ್ಲಿ ವಿಫಲವಾಗಿದೆ ಎಂದು ಹೇಳಿದರು. ಆದರೆ ನಾವು ವಿಫಲವಾಗಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಬಯಸುತ್ತೇನೆ. ಈ ಒಂದು ಘಟನೆಯಲ್ಲಿ ಸರ್ಕಾರ ಗೂಂಡಾಗಳಿಗೆ ರಕ್ಷಣೆಯನ್ನು ಕೊಡುತ್ತಿದೆ ಎಂದು ಹೇಳಿದರು. ಆದರೆ ನಮ್ಮ ಸರ್ಕಾರದ ಸ್ಪಷ್ಟವಾದ ನಿಲುವನ್ನು ಹೇಳುತ್ತಿದ್ದೇನೆ, ಇದರಲ್ಲಿ ಯಾವ ಗೂಂಡಾಗಳಿಗೂ ನಾವು ರಕ್ಷಣೆ ಕೊಡುತ್ತಿಲ್ಲ.

**ಶ್ರೀ ಎ.ಕೆ. ಸುಬ್ಬಯ್ಯ:** ಮಾನ್ಯ ಉಪ ಸಭಾಪತಿಯವರೆ, ಮಾನ್ಯ ಸಚಿವರ ಹೇಳಿಕೆಯಲ್ಲಿ ಒಂದೆರಡು ಕಡೆ ಸಂಶಯ ಬರುತ್ತದೆ. ಅದು ಏನೆಂದರೆ:

"ವಿನೋಭಾ ಕಾಲೋನಿಯ ಹರಿಜನರ ಮೇಲೆ ಹಲ್ಲೆ ಮಾಡಿದ ಅಪಾದಿತರಲ್ಲಿ ಅನೇಕರು ಚೆನ್ನಶೆಟ್ಟಿಹಳ್ಳಿಯ ರೌಡಿಗಳೆಂದು ತಿಳಿದು ಬಂದಿದೆ. ಅವರ ಮೇಲೆ ಸಿ.ಆರ್.ಪಿ.ಸಿ. ಕಲಂ 110ರ ಅನ್ವಯ ಕ್ರಮ ಜರುಗಿಸಲಾಗಿದೆ." ಎಂಬುದು. ಅಂದರೆ ಇವರು ಯಾವ ಗುನ್ನೆಯ ಪ್ರಕಾರ ಕೇಸು ಹಾಕಿದ್ದಾರೆ? ಅದರಲ್ಲಿ ಇವರು ಅಪರಾಧಿಗಳಲ್ಲ ಎಂದು ತಿಳಿದು ಇವರ ಮೇಲೆ ಬೇರೆ ರೀತಿ

ಕ್ರಮವನ್ನು ತೆಗೆದು ಕೊಂಡಿರುವಂತೆ ಕಾಣುತ್ತದೆ. ಯಾರು ಗಟ್ಟಿಗರು ಇರುತ್ತಾರೆ. ಅವರ ಮೇಲೆ ಏನು ಕೇಸು ಹಾಕಿದರೂ ಅದು ಏನೂ ಆಗುವುದಿಲ್ಲ. ಇಲ್ಲಿ ನಿಮ್ಮ ಹೇಳಿಕೆಯ ಪ್ರಕಾರ ಅವರು ಅಪರಾಧಿಗಳಲ್ಲ ಎನ್ನುವ ಭಾವನೆ ಬರುತ್ತದೆ. ಅಂದಮೇಲೆ ಈ ದೃಷ್ಟಿಯಿಂದ ನೀವು ಅವರನ್ನು ಬಿಟ್ಟಿದ್ದೀರಾ? ಆ ಹರಿಜನರ ಕಾಲೋನಿಯಲ್ಲಿ ಇನ್ನೂ ಭಯದ ವಾತಾವರಣವೇ ಇದೆಯೋ ಅಥವಾ ಶಾಂತ ವಾತಾವರಣ ಇದೆಯೋ? ತಿಳಿಸಬೇಕು.

**ಶ್ರೀ ರಮೇಶ್ ಜಿಗಜಿಣಗಿ:** ಹರಿಜನರ ಕಾಲೋನಿಯಲ್ಲಿ ಈಗ ಶಾಂತ ವಾತಾವರಣ ಇದೆ. ಅಲ್ಲಿ ಇನ್ನೂ ರಕ್ಷಣೆ ಕೊಡುವ ಅವಶ್ಯಕತೆ ಇದೆ ಎಂದು ತಿಳಿದುಬಂದರೆ ನಾವು ಅದನ್ನೂ ಕೊಡುತ್ತೇವೆ. ಇನ್ನು ಈ ಪ್ರಕರಣದಲ್ಲಿರತಕ್ಕ ರೌಡಿಗಳ ಮೇಲೆ ಕೋರ್ಟಿನಲ್ಲಿ ಕೇಸು ನಡೆಯುತ್ತಿದೆ. ಆದರೆ ಇವರು ಜಾಮೀನು ಮೇಲೆ ಬಿಡುಗಡೆಯಾಗಿದ್ದಾರೆ.

# ಕೋಮು ಸೌಹಾರ್ದ ಕದಡುವ ದುಷ್ಟ ಶಕ್ತಿಗಳನ್ನು ಮಟ್ಟ ಹಾಕಬೇಕು

**22ನೇ ಮಾರ್ಚ್ 1984**

**ಶ್ರೀ ಎ.ಕೆ. ಸುಬ್ಬಯ್ಯ:** ಮಾನ್ಯ ಮಂತ್ರಿಯವರು ನೀಡಿದ ಹೇಳಿಕೆಯನ್ನು ನಾನು ಕೇಳಿದ್ದೇನೆ. ಅವರ ಹೇಳಿಕೆ ಪ್ರಕಾರ ಅಲ್ಲಿ ಮಸೀದಿ ಮೇಲೆ ಕಲ್ಲು ಹೊಡೆದುದರಿಂದ ಈ ಗಲಭೆ ಪ್ರಾರಂಭವಾಯಿತು ಎಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಒಂದು ದುಷ್ಟ ಗುಂಪು ದೇವಸ್ಥಾನದ ಮೇಲೆ ಮಸೀದಿ ಮೇಲೆ ಕಲ್ಲು ಹೊಡೆಯುವುದರಿಂದ ಇಂತಹ ಗಲಭೆಗಳು ನಿರ್ಮಾಣವಾಗಿ ಕಟ್ಟ ಕಡೆಗೆ ಜನರು ಸಾಯುತ್ತಾರೆ. ಇವತ್ತು ಯಾವ ಗುಂಪು ಯಾವ ದುರುದ್ದೇಶದಿಂದ ಆ ಮಸೀದಿಯ ಮೇಲೆ ಕಲ್ಲನ್ನು ಹೊಡೆಯಿತೋ ಇದು ಖಂಡನಾರ್ಹವಾದುದಾಗಿದೆ. ಇಂತಹ ಪ್ರವೃತ್ತಿ ನಿಲ್ಲದೇ ಹೋದರೆ ಶಾಂತಿ ನೆಲೆಸುವುದಕ್ಕಾಗುವುದಿಲ್ಲ. ಇವತ್ತು ಪ್ರಶ್ನೆ ಏನು ಎಂದರೆ, ಮಸೀದಿ ಮೇಲೆ ಕಲ್ಲು ಹೊಡೆದವರನ್ನು ಹಿಡಿಯುವುದಕ್ಕೆ ಈ ಸರ್ಕಾರಕ್ಕೆ ಶಕ್ತಿ ಇಲ್ಲವೇ ಎಂದು ಕೇಳಬೇಕಾಗುತ್ತದೆ. ಏಕೆಂದರೆ ಇವತ್ತು ಹೊಸ ಪ್ರವೃತ್ತಿ ಬೆಳೆದುಬರುತ್ತಿದೆ. ಸಾಮಾನ್ಯವಾಗಿ ಹಿಂದೆ ಹಿಂದೂ ದೇವಾಲಯಗಳ ಮೇಲೆ ಕಲ್ಲು ಹೊಡೆದರೆ ಗಲಾಟೆಗಳಾಗುತ್ತಿದ್ದವು. ಈಗ ಈ ಸರ್ಕಾರ ಬಂದ ಮೇಲೆ ಆ ಪ್ರವೃತ್ತಿ ಉಂಟಾಗುತ್ತಿದೆ. ಸರ್ಕಾರದಿಂದ ಯಾರಿಗೆ ರಕ್ಷಣೆ ಸಿಗುತ್ತದೆಯೋ ಅಂತಹವರಿಂದ ಈ ರೀತಿ ಘಟನೆ ನಡೆಯುವುದರಿಂದ ಕೋಮು ಸೌಹಾರ್ದ ಕೆಟ್ಟು ಹೋಗುತ್ತದೆ. ತಾವು ಅಧಿಕಾರದಲ್ಲಿ ಇರಲಿ ಅಥವಾ ಅಧಿಕಾರದಲ್ಲಿ ಇಲ್ಲದೇ ಇರಲಿ ಸಮಾಜದಲ್ಲಿ ಅಶಾಂತಿ ನಿರ್ಮಾಣ ಮಾಡತಕ್ಕಂತಹವರ ವಿರುದ್ಧ ಕಟ್ಟುನಿಟ್ಟಿನ ನಿರ್ಣಯವನ್ನು ತೆಗೆದುಕೊಳ್ಳುವುದು ನಿಮ್ಮ ಜವಾಬ್ದಾರಿ ಇದೆ. ಇವತ್ತು ಶಾಂತಿಯನ್ನು ಕದಡಿದ ದುಷ್ಟ ಶಕ್ತಿಗಳು ಯಾವುದೇ ಇರಲಿ, ಇವರ ಮೇಲೆ ಕಾರ್ಯಾಚರಣೆ ಮಾಡುವುದರಿಂದ ಸರ್ಕಾರ ಇರಲಿ ಅಥವಾ ಹೊಗಲಿ ಅಥವಾ ಬೇರೆ ಯಾವುದೇ ಸರ್ಕಾರ ಬರಲಿ. ಆ ಬಗ್ಗೆ ಚಿಂತನೆ ಮಾಡದೇ ಯಾರ ಒತ್ತಡಕ್ಕೂ ಮಣಿಯದೆ ಇಂತಹವರನ್ನು ಶಿಕ್ಷೆಗೆ ಒಳಪಡಿಸುವುದಕ್ಕೆ ಹಿಂಜರಿಯಬಾರದು. ಇನ್ನೂ ಅಲ್ಲಿ ಗಂಭೀರವಾದ ಪರಿಸ್ಥಿತಿ ಇರುವುದರಿಂದ ಅವರು ಹೋಗಬೇಕಾಗುತ್ತದೆ. ಅದಕ್ಕಿಂತಾ ಮೊದಲು ಈ ಬಗ್ಗೆ ಒಂದು ಶಾಸನ ಸಮಿತಿಯನ್ನು ಮಾಡಿ ಅಲ್ಲಿ ಆಗಿರತಕ್ಕ

ವಿದ್ಯಮಾನಗಳನ್ನು ತಿಳಿಯಬೇಕಾಗುತ್ತದೆ. ಹಾಗೂ ಅಲ್ಲಿ ಪ್ರಮುಖರ ಶಾಂತಿ ಸಮಿತಿಯನ್ನು ನೇಮಕ ಮಾಡಿ ನಾವೆಲ್ಲರೂ ಸೇರಿ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವ ಬಗ್ಗೆ ಭೇಟಿ ಕೊಡಬೇಕಾದುದು ಅವಶ್ಯಕ ಇದೆ. ಅಲ್ಲಿ ಪರಸ್ಪರ ದ್ವೇಷದಿಂದ ಪರಿಸ್ಥಿತಿ ಇನ್ನೂ ವಿಕೋಪಕ್ಕೆ ಹೋಗುವ ಮುನ್ನ ನಾವೆಲ್ಲರೂ ಸೇರಿ ಒಟ್ಟಿಗೆ ಕೆಲಸ ಮಾಡಬೇಕಾಗಿದೆ. ಈ ದೃಷ್ಟಿಯಿಂದ ಇನ್ನಾದರೂ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. ಈ ಬಗ್ಗೆ ಸರ್ಕಾರ ತೀವ್ರಗತಿಯಿಂದ ಆಲೋಚನೆ ಮಾಡಬೇಕೆಂದು ಹೇಳುತ್ತೇನೆ.

# ವಿಮಾನದಲ್ಲಿ ಔಷಧ ; ಪೆಸ್ಟ್ ಡಿಸೀಸಸ್ ಬಿಲ್
**14ನೇ ಸೆಪ್ಟೆಂಬರ್ 1968**

**ಶ್ರೀ ಎ.ಕೆ. ಸುಬ್ಬಯ್ಯ** (ಸ್ಥಾನೀಯ ಪ್ರಾಧಿಕಾರಿ ಕ್ಷೇತ್ರ): ಮಾನ್ಯ ಸಭಾಪತಿಗಳೆ, ಬೆಳೆಗೆ ತಗಲತಕ್ಕ ರೋಗ ಹಾಗೂ ಕ್ರಿಮಿಕೀಟಗಳ ಹಾವಳಿಯನ್ನು ತಡೆಗಟ್ಟುವ ಸಲುವಾಗಿ ಒಂದು ಕಾಯದೆಯನ್ನು ಮಾಡಿ ಇಲ್ಲಿ ತಂದಿರುವ ಬಿಲ್ಲನ್ನು ವಿಮರ್ಶೆ ಮಾಡುತ್ತಿದ್ದೇವೆ. ಕಾಯದೆ ಮಾಡತಕ್ಕದ್ದು ವಿಧಾನಮಂಡಲದ ಒಂದು ಪ್ರಾಮುಖ್ಯವಾದ ಜವಾಬುದಾರಿಯೆಂದು ನಾವು ತಿಳಿದುಕೊಂಡಿದ್ದೇವೆ. ಈ ಕಾಯದೆಯನ್ನು ಮಾಡತಕ್ಕ ಜವಾಬ್ದಾರಿಯು ನಮ್ಮ ಮೇಲೆ ಇರುವುದರಿಂದ ಇದರ ಹಿನ್ನೆಲೆಯೇನು ಎನ್ನುವುದನ್ನು ಬಹಳ ಎಚ್ಚರಿಕೆಯಿಂದ ವಿಮರ್ಶೆ ಮಾಡಿ ಇತ್ಯರ್ಥ ಮಾಡುವುದೊಳ್ಳೆಯದು. ನಾವು ಈ ದೇಶಕ್ಕೆ ಬೇಕಾಗಿರುವ ಕಾನೂನನ್ನು ಇಲ್ಲಿ ಅನೇಕ ಬಾರಿ ಮಾಡಿದ್ದೇವೆ. ಇಂತಹ ಕಾನೂನುಗಳನ್ನು ಈ ದೇಶದಲ್ಲಿ ಜಾರಿಗೆ ಕೊಡತಕ್ಕ ಸಂದರ್ಭಗಳಲ್ಲಿ ನೋಡಿದರೆ ಇದು ದೂರದೃಷ್ಟಿತ್ವದಿಂದ ಕೂಡಿಲ್ಲ ಎನ್ನುವುದು ಕಂಡುಬರುತ್ತದೆ. ಕೆಲವೊಂದು ಕಾನೂನು ಜಾರಿಗೆ ಮಾಡಿ ಕೊಟ್ಟ ಸಂದರ್ಭದಲ್ಲಿ ನಮ್ಮ ಅನುಭವಕ್ಕೆ ಬಂದಿರುವುದು ಲಂಚಗುಳಿತನ ಹಾಗೂ ಭ್ರಷ್ಟಾಚಾರಗಳು. ಕಾನೂನುಗಳನ್ನು ಸಾಮಾನ್ಯವಾಗಿ ಎರಡು ವರ್ಗಗಳಾಗಿ ವಿಂಗಡಿಸಬಹುದು. ಮೊದಲನೆಯದು ಕಾನೂನು ಸಮಾಜದ ಹಿತದೃಷ್ಟಿಯಿಂದ ಮಾಡತಕ್ಕದ್ದು. ಎರಡನೆಯದು ಆಡಳಿತ ವ್ಯವಸ್ಥೆಗೋಸ್ಕರ ಮಾಡತಕ್ಕ ಕಾನೂನುಗಳು. ಆಗ ಸಮಾಜದಿಂದ ಕೆಲವೊಂದು ಪ್ರತಿಬಂಧಕಗಳು ಬರುತ್ತವೆ. ಯಾವ ಕಾನೂನನ್ನೇ ಮಾಡಲಿ, ಸಮಾಜಕ್ಕೆ ಅಥವಾ ಜನರಿಗೆ ಅನುಕೂಲವಾಗುವ ಹಾಗೆ ಮಾಡುತ್ತೇವೆ ಎಂದರೆ, ಸರ್ವ ಸಾಮಾನ್ಯವಾಗಿ ನಾವು ನಿರೀಕ್ಷಿಸಿದಷ್ಟು ಸಹಕಾರ ಜನರಿಂದ ನಮಗೆ ಸಿಗುವುದಿಲ್ಲ. ಈ ದೃಷ್ಟಿಯಿಂದ ಸಮಾಜದ ಮೇಲೆ ಜನತೆಯ ಮೇಲೆ ಕಾನೂನುಗಳನ್ನು ಹೊರಿಸುವಾಗ ಯಾವ ಕಾನೂನು ಮಾಡಿದರೂ ಮೊದಲು ಅಂತಹ ಕಾನೂನನ್ನು ಸರಿಯಾಗಿ ವಿಚಾರ ಮಾಡುವುದು ಬಹಳ ಅತ್ಯಗತ್ಯ. ನಮ್ಮ ಕಾನೂನು ಪಂಡಿತರು ಇದನ್ನು ಅರಿಯಬೇಕಾದುದು ಅವಶ್ಯಕ. ಪೊಲೀಸು ಖಾತೆಯಲ್ಲಿ ಲಂಚ ಎನ್ನುವುದು ತಾಂಡವವಾಡುತ್ತಿದೆ. ಆದರೆ ಇಲ್ಲಿ ಕೇಸುಗಳನ್ನು ಹಾಕಿ ಕೋರ್ಟುಗಳಿಗೆ ಹೋದಾಗ ಅಲ್ಲಿ ಸಾಕ್ಷಿ ಕೊಡುವಾಗ ಜನರನ್ನು ಕರೆದುಕೊಂಡು ಹೋದರೆ ಸರಕಾರಕ್ಕೆ ವಿರೋಧವಾಗಿ ಸಾಕ್ಷಿ ಹೇಳುತ್ತಾರೆ. ಈಗ ಆಹಾರ ಇಲಾಖೆಯಲ್ಲಿ ಫುಡ್ ಡಿಕ್ಲರೇಷನ್ ಆರ್ಡರು ಎಂದು ಮಾಡಿದ್ದಾರೆ. ಇದರಲ್ಲಿ ಯಾರಾದರೂ ಸರಿಯಾಗಿ ಅವರ ಸ್ಟಾಕನ್ನು ಡಿಕ್ಲೇರು ಮಾಡಿಕೊಳ್ಳದೇ ಇದ್ದರೆ ಅಂತಹವರ ಮೇಲೆ

ಕೇಸು ಹಾಕುತ್ತಾರೆ. ಅವರು ಆ ರೀತಿ ಸಮಾಜಕ್ಕೆ ವಿರೋಧವಾಗಿ ಕೆಲಸ ಮಾಡಿದ್ದಾರೆಂದು ದೂರು ಕೊಟ್ಟರೆ ಕೆಲವು ಸಂದರ್ಭದಲ್ಲಿ ಸರಕಾರದ ಪರವಾಗಿ ಸಾಕ್ಷಿ ಹೇಳಬೇಕೆಂದು ಕೋರ್ಟಿಗೆ ಕರೆದುಕೊಂಡು ಬಂದರೆ, ಅವರು ಸರಕಾರದ ಪರವಾಗಿ ಸಾಕ್ಷಿ ಕೊಡುವುದಿಲ್ಲ. ಸಾಮಾನ್ಯವಾಗಿ ಜನರು ಅಧಿಕಾರಿಗಳೊಡನೆ ಸಹಕರಿಸುತ್ತಿಲ್ಲ ಎನ್ನುವುದಕ್ಕಾಗಿ ಇದನ್ನು ಹೇಳುತ್ತಿದ್ದೇನೆ. ಸರಕಾರ ಮಾಡುವ ಕಾನೂನುಗಳು ಸರಿಯಾಗಿಲ್ಲ ಎಂದು ವಕೀಲರು ಪ್ರಶ್ನಿಸುತ್ತಿರುವುದರಿಂದ ನಮಗೆ ನಿರೀಕ್ಷಿಸಿದಷ್ಟು ಪರಿಣಾಮ ಇದರಿಂದಾಗುತ್ತಿಲ್ಲ. ಕೇವಲ ಲಂಚಗುಳಿತನ ಹಾಗೂ ಭ್ರಷ್ಟಾಚಾರಗಳು ದೇಶದಲ್ಲಿ ಎದ್ದು ಕಾಣುತ್ತಿವೆ. ಕಾನೂನುಗಳ ಸಂಖ್ಯೆ ಆದಷ್ಟೂ ಕಡಿಮೆ ಇರಬೇಕು. ಎಷ್ಟು ಕಡಿಮೆ ಇದ್ದರೆ ಅಷ್ಟು ಆಡಳಿತ ಚೆನ್ನಾಗಿ ನಡೆಯುತ್ತದೆ ಎಂದು ಆಡಳಿತ ಮಾಡುವವರು ತಿಳಿದುಕೊಳ್ಳಬೇಕಾಗಿದೆ. ಕೋರ್ಟು ಹಾಗೂ ವಕೀಲರು ಟೀಕೆ ಮಾಡಲು ಅವಕಾಶ ಕೊಡುವಂತಹ ಕಾನೂನುಗಳನ್ನು ಮಾಡಲು ಹೋಗಬಾರದು. ಜನತೆಗೆ ಸೌಕರ್ಯವಾಗುವಂತಹ ಕಾನೂನು ಮಾಡಲು ತಕ್ಕ ಕಾರ್ಯಕ್ರಮ ತೆಗೆದುಕೊಳ್ಳದಿದ್ದರೆ ಅದರಿಂದ ನಾವು ನಿರೀಕ್ಷಿಸುವಷ್ಟು ಫಲ ದೊರೆಯುವುದಿಲ್ಲ. ಜನತೆಗೆ ಸೌಕರ್ಯವಾಗಬೇಕೆಂಬ ದೃಷ್ಟಿಯಲ್ಲಿ ಸಮಾಜ ವ್ಯವಸ್ಥೆ ನಮ್ಮಲ್ಲಿ ಪುರಾತನ ಕಾಲದಿಂಲೂ ನಡೆದುಕೊಂಡು ಬಂದಿದೆ. ಕರ್ತವ್ಯ ಭಾವನೆ ಅನ್ನುವುದು ಜೀವನದ ವಿವಿಧ ಭಾಗಗಳಲ್ಲಿ ಒಂದು ಭಾಗ ಎಂಬುದಾಗಿ ತಿಳಿದುಕೊಂಡು ನಾವು ನಮ್ಮ ಕರ್ತವ್ಯಗಳನ್ನು ಮಾಡುತ್ತಾ ಬಂದಿದ್ದೇವೆ. ಆದರೆ ಈ ದಿವಸ ನಮ್ಮ ಮುಂದೆ ಇರತಕ್ಕ ಮಸೂದೆಯ ಉದ್ದೇಶ ಏನಿದೆ ಎಂದರೆ ಬೆಳೆಗಳಿಗೆ ರೋಗರುಜಿನಗಳು ತಗುಲಿದಾಗ ಅವುಗಳನ್ನು ತಡೆಗಟ್ಟುವುದಕ್ಕೆ ಎಲ್ಲರೂ ಸರ್ವ ಪ್ರಯತ್ನಗಳನ್ನೂ ನಡೆಸಬೇಕು ಎಂಬುದು ಬಹಳ ಒಳ್ಳೆಯದು. ಆದರೆ ಅಂಥ ಕಾಯಿಲೆಗಳನ್ನು ತಡೆಗಟ್ಟತಕ್ಕ ವಿಚಾರದಲ್ಲಿ ಆ ಒಂದು ವಿಶಿಷ್ಟ ವರ್ಗ ತನ್ನ ಕರ್ತವ್ಯವನ್ನು ಪಾಲಿಸದಿದ್ದರೆ ಈ ಕಾನೂನು ಪ್ರಕಾರ ಅವರಿಗೆ ಶಿಕ್ಷೆ ವಿಧಿಸಲಾಗುತ್ತದೆ ಅನ್ನುವುದನ್ನು ಈ ಶಾಸನದಲ್ಲಿ ಹೇಳಿದೆ ಎಂಬುದಾಗಿ ನಾನು ಅರ್ಥ ಮಾಡಿಕೊಂಡಿದ್ದೇನೆ. ಜನರ ಮೇಲೆ ನಿರ್ಬಂಧ ಹೊರಿಸತಕ್ಕ ಒಂದು ಕಾನೂನು ಇದು. ಆದರೆ ಇದನ್ನೆಲ್ಲಾ ಸರಿಪಡಿಸತಕ್ಕ ಜವಾಬ್ದಾರಿ ಸರ್ಕಾರದವರದು. ಆದರೆ ಈಗ ಅವರು ಆ ಕರ್ತವ್ಯವನ್ನು ಬೇರೆಯವರ ಮೇಲೆ ಹಾಕುವುದಕ್ಕೆ ಹೊರಟಿದ್ದಾರೆ.

ಕರ್ತವ್ಯ ಭಾವನೆ ಮರೆತ ಕಡೆ ಕಾನೂನು ಅಷ್ಟು ಸರಿಯಾಗಿ ಕೆಲಸ ಮಾಡಲಾರದು. ಸರ್ಕಾರದವರು ಕಾನೂನು ಮೂಲಕವೇ ಎಲ್ಲಾ ಕೆಲಸಗಳನ್ನೂ ಮಾಡುತ್ತೇವೆ ಎನ್ನುವುದು ಸರಿಯಲ್ಲ. ಈ ದಿವಸ ಎಲ್ಲೆಲ್ಲಿ ಹಣದ ಸಂಪಾದನೆಗೆ ಮಾರ್ಗವಿದೆಯೋ ಅಲ್ಲೆಲ್ಲಾ ಆ ಬಾಬ್ತು ತನಗೇ ಇರಬೇಕೆಂದು ಸರ್ಕಾರ

ಕೈಹಾಕುವುದಕ್ಕೆ ಹೊರಟಿದೆ. ಈ ದಿವಸ ಇಂಥಾ ಒಂದು ಬ್ಯಾಂಕುಗಳನ್ನು ನಡೆಸುವುದರಿಂದ ಅದರಲ್ಲಿ ಲಾಭ ಇದೆ ಎಂದರೆ ಅದಕ್ಕೆ ಕೈಹಾಕುವುದು, ಹೀಗೆ ದುಡ್ಡು ಎಲ್ಲಿದೆ ಅಂದರೆ ಅಲ್ಲಿಗೆ ಸರ್ಕಾರ ಕೈಹಾಕುವುದು, ಅದರ ಒಂದು ಮೂಲ ಉದ್ದೇಶವಾಗಿದ್ದಾಗ ಈ ರೋಗರುಜಿನಗಳನ್ನು ತಡೆಗಟ್ಟತಕ್ಕ ಬಾಬ್ತನ್ನೂ ಸರ್ಕಾರವೇ ವಹಿಸಬೇಕು. ಆದರೆ ಸಂದರ್ಭ ಇಲ್ಲಿ ಹಾಗಿಲ್ಲ. ಆ ರೋಗರುಜಿನಗಳನ್ನು ತಡೆಗಟ್ಟತಕ್ಕ ಕಾರ್ಯವನ್ನು ಜನತೆಗೆ ಕಾನೂನು ಮೂಲಕ ಒಪ್ಪಿಸಿದ್ದಾರೆ. ಖರ್ಚು ಬರತಕ್ಕ ಬಾಬ್ತುಗಳೆಲ್ಲಾ ಜನತೆಗೆ, ಆದಾಯ ಬರತಕ್ಕ ಬಾಬ್ತುಗಳೆಲ್ಲಾ ಸರ್ಕಾರಕ್ಕೆ. ಜನರು ಈಗಾಗಲೇ ಸರ್ಕಾರಕ್ಕೆ ಭೂಕಂದಾಯದ ರೂಪದಲ್ಲಿ, ವರಮಾನ ತೆರಿಗೆಯ ರೂಪದಲ್ಲಿ ಸರ್ಕಾರಕ್ಕೆ ದುಡ್ಡನ್ನು ತೆತ್ತೂ ತೆತ್ತೂ ಅವರು ಪಾಪರ್ ಸರ್ಟಿಫಿಕೇಟನ್ನು ಪಡೆಯುವ ಪರಿಸ್ಥಿತಿಗೆ ಬಂದಿದ್ದಾರೆ. ಜನತೆಯನ್ನು ಅಷ್ಟು ಒಂದು ನಿಸ್ಸಾರ ಮಟ್ಟಕ್ಕೆ ಇಳಿಸಲಾಗಿದೆ.

ಇಂತಹ ಕಾನೂನುಗಳನ್ನು ಮಾಡುವುದರಿಂದ ಕರ್ತವ್ಯದ ಭರವಸೆ ಜನತೆಯಿಂದ ಹೊರಟು ಹೋಗುತ್ತದೆ. ಆದ್ದರಿಂದ ಕಾನೂನಿನ ಮೂಲಕ ಇಂಥ ಕೆಲಸಗಳನ್ನು ಮಾಡಬಾರದು. ಅದರ ಬದಲು ಜನರಲ್ಲಿ ನೈತಿಕಮಟ್ಟ ಉಳಿಯುವಂಥ ಅವಕಾಶವನ್ನು ಕಲ್ಪಿಸಿಕೊಡಬೇಕು. ಇದರಲ್ಲಿ ಜನತೆಯ ಕಾರ್ಯ ಯಾವುದಿದೆ ಅದನ್ನು ಅವರು ಮಾಡಬೇಕು ಎನ್ನುವುದೇ ಮುಖ್ಯವಾದ ವಿಚಾರ. ಹಾಗೆ ಮಾಡಬೇಕಾದರೆ ಪ್ರಾಪಗ್ಯಾಂಡ ಮಾಡಿ, ಜನತೆಯ ಮನಸ್ಸಿಗೆ ನಾಟುವಂತೆ ಹೇಳಿ ಅವರ ಮನಸ್ಸನ್ನು ಪರಿವರ್ತನೆ ಮಾಡಬೇಕು. ಕಾಯಿಲೆ ಬಂದಾಗ ಸರ್ಕಾರ ಜನತೆಯಿಂದ ಸಹಕಾರ ತೆಗೆದುಕೊಳ್ಳಬೇಕು. ಹುಳು ಮತ್ತು ಕ್ರಿಮಿಕೀಟಗಳಿಂದ ಬೆಳೆ ನಾಶವಾಗತಕ್ಕ ಸಂದರ್ಭದಲ್ಲಿ ಸರ್ಕಾರ ಆ ಕ್ರಮ ತೆಗೆದುಕೊಳ್ಳುವುದಕ್ಕೆ ನ್ಯಾಷನಲೈಸ್ ಮಾಡಲಿ. ಬಸ್ ಮಾರ್ಗಗಳನ್ನು ರಾಷ್ಟ್ರೀಕರಣ ಮಾಡುತ್ತಿದ್ದೀರಿ, ಪಠ್ಯಪುಸ್ತಕಗಳನ್ನು ರಾಷ್ಟ್ರೀಕರಣ ಮಾಡುತ್ತಿದ್ದೀರಿ. ಲಾಭ ಬರತಕ್ಕ ಉದ್ಯಮಗಳನ್ನೆಲ್ಲ ರಾಷ್ಟ್ರೀಕರಣ ಮಾಡಲಿಕ್ಕೆ ಹೊರಟಾಗ ರೋಗರುಜಿನಗಳು ಬಂದಾಗ ಅದನ್ನು ತಡೆಗಟ್ಟಲು ರಾಷ್ಟ್ರೀಕರಣ ಮಾಡಿ ಅದರ ಸಂಪೂರ್ಣ ಜವಾಬ್ದಾರಿಯನ್ನು ಸರ್ಕಾರವೇ ತೆಗೆದುಕೊಳ್ಳಲಿ.

ಹುಳಹುಪ್ಪಟೆಗಳು ಬಿದ್ದು ಬೆಳೆಗಳು ನಾಶವಾಗುವುದು ತಡೆಗಟ್ಟಲು ವಿಮಾನದಲ್ಲಿ ಔಷಧಿಗಳನ್ನು ಸ್ಪ್ರೇ ಮಾಡತಕ್ಕ ಕಾರ್ಯಕ್ರಮವನ್ನು ಸರ್ಕಾರ ಮಂಡ್ಯ ಜಿಲ್ಲೆಯಲ್ಲಿ ತೆಗೆದುಕೊಂಡಿದ್ದು ಅದರ ಸಂಪೂರ್ಣ ಖರ್ಚನ್ನು ಸರ್ಕಾರ ವಹಿಸಿಕೊಂಡಿದೆ. ಜನತೆ ಸಹಕಾರ ಕೊಡಲಿಕ್ಕೆ ಯಾವತ್ತೂ ಸಿದ್ದವಾಗಿದ್ದಾರೆ. ರಾಷ್ಟ್ರೀಯ ರಕ್ಷಣಾ ನಿಧಿ ಸಂಗ್ರಹ ಕಾಲದಲ್ಲಿ ಸರ್ಕಾರ ಹಣ ಕೇಳಿತು. ಜನ ಬೇಕಾದಷ್ಟು

ಹಣವನ್ನು ಕೊಟ್ಟರು. ದೇಶದ ಮೂಲೆ ಮೂಲೆಯಿಂದ ಹಣ ಕೊಟ್ಟು ಸರ್ಕಾರದೊಂದಿಗೆ ಸಹಕರಿಸಲು ಮುಂದೆ ಬಂದರು. ಅದಕ್ಕೆ ಒಂದು ಕಾನೂನು ಮಾಡಿದ್ದ ಪಕ್ಷದಲ್ಲಿ ಜನ ಆ ರೀತಿ ಸಹಕಾರವನ್ನು ಕೊಡುತ್ತಿದ್ದರೇ? ಕಾನೂನು ಮುಖಾಂತರ ಕಾರ್ಯಕ್ರಮ ತೆಗೆದುಕೊಳ್ಳಲು ಪ್ರಯತ್ನ ಮಾಡಿದಾಗಲೆಲ್ಲ ಕಾನೂನನ್ನು ಪ್ರತಿಭಟನೆ ಮಾಡಬೇಕು, ವಿರೋಧಿಸಬೇಕು, ಮೆರವಣಿಗೆ ಹೋಗಬೇಕು ಎನ್ನತಕ್ಕ ಭಾವನೆ ಜನರಲ್ಲಿ ಬರುತ್ತದೆ. ಆದ್ದರಿಂದ ಅಂಥ ಕಾನೂನುಗಳನ್ನು ಮಾಡಬಾರದು. ಈಗ ನಮ್ಮ ಮುಂದೆ ಇರುವ ಕಾನೂನು ಸಮಾಜದ ಮೇಲೆ ಪ್ರತಿಬಂಧಕವನ್ನು ಹೇರುತ್ತದೆ. ಈ ರೀತಿಯಾಗಿ ಪ್ರತಿಬಂಧಕಗಳನ್ನು ಹೇರುತ್ತ ಹೋದರೆ ನಾಳೆಯ ದಿನ ಊಟ ಮಾಡಲಿಕ್ಕೇ ಬೇಕು, ನೀರು ಕುಡಿಯಲಿಕ್ಕೇ ಬೇಕು, ಸ್ನಾನ ಮಾಡಲಿಕ್ಕೇ ಬೇಕು ಎನ್ನುವ ಪ್ರತಿಬಂಧಕಗಳನ್ನು ತರುವುದಕ್ಕೂ ಅವಕಾಶವಿರುತ್ತದೆ. ಈ ರೀತಿಯಾದ ಕಾನೂನನ್ನು ಮಾಡುತ್ತ ಹೋದರೆ ಇದಕ್ಕೆ ಅಂತ್ಯವೆಲ್ಲಿ? ಈ ರೀತಿಯ ಕಾನೂನು ಮಾಡಿದಂತೆಲ್ಲ ಜನತೆಯಿಂದ ಅದಕ್ಕೆ ವಿರೋಧ ಬರುತ್ತದೆ. ಇದು ಕಾನೂನಿನಿಂದ ಬಗೆಹರಿಸತಕ್ಕ ಸಮಸ್ಯೆಯಲ್ಲ. ಸರಕಾರ ತನ್ನ ಜವಾಬ್ದಾರಿಯನ್ನು ನಿರ್ವಹಿಸುವುದಕ್ಕೆ ಜನತೆಯ ಸಹಕಾರವನ್ನು ತೆಗೆದುಕೊಳ್ಳಬೇಕು. ಜನತೆ ಸಹಕಾರ ಕೊಡದೆ ಇದ್ದರೆ ಅದಕ್ಕೆ ಏನಾದರೂ ಒಂದು ಉಪಾಯ ಮಾಡಬೇಕು. ಜನತೆ ಸಹಕಾರ ಮಾಡಬೇಕು, ಮಾಡದೆ ಇದ್ದರೆ ಪ್ರತಿಬಂಧಕವಿದೆ ಎನ್ನುವ ರೀತಿಯಲ್ಲಿ ಮಾಡಬೇಕು. ಹಾಗಿಲ್ಲದೆ ರೈತರು ಅಥವಾ ಜಮೀನು ಮಾಲೀಕರು ಆ ಕಾರ್ಯವನ್ನು ಮಾಡಬೇಕು ಎಂದು ಹೇಳುವುದು ಸಮಂಜಸವಲ್ಲ. 'ಅಫೆಕ್ಟೆಡ್ ಏರಿಯಾ' ಎಂದು ನೋಟಿಫೈ ಮಾಡಿದ ಮೇಲೆ, ಜನತೆಗೆ ನೋಟೀಸ್ ಕೊಟ್ಟು, ಅವರು ಆ ಕಾರ್ಯ ಮಾಡದೆ ಇದ್ದರೆ ಅವರ ಮೇಲೆ ಮೊಕದ್ದಮೆ ಹಾಕಿ ಸರ್ಕಾರ ಕ್ರಮ ಕೈಗೊಳ್ಳುವುದು, ಅವರಿಂದ ನಷ್ಟವನ್ನು ವಸೂಲ್ಮಾಡುವುದು, ಈ ಕೆಲಸ ಸರಿಯಾಗಿ ಆಗುವುದಿಲ್ಲ. ಈ ರೀತಿಯ ಬಾಕಿಯನ್ನು ಸರ್ಕಾರ ಭೂಕಂದಾಯದ ಬಾಕಿಯಂತೆ ವಸೂಲ್ಮಾಡುತ್ತದೆ ಎಂದೂ ಇದರಲ್ಲಿ ಹಾಕಿದ್ದಾರೆ. ಸರ್ಕಾರ ಜನತೆಯಿಂದ ದುಡ್ಡು ತೆಗೆದುಕೊಳ್ಳುತ್ತಿರುವುದು ಸಾರ್ವಜನಿಕ ಕೆಲಸಗಳನ್ನು ಮಾಡುವುದಕ್ಕೆ. ಇಂಥ ಆದಾಯದಲ್ಲಿ ಸಾರ್ವಜನಿಕ ಕೆಲಸಕಾರ್ಯಗಳು ನಡೆಯಬೇಕು ಎಂದು ಅನೇಕ ರೀತಿಯಲ್ಲಿ ಜನತೆ ಸರ್ಕಾರಕ್ಕೆ ತೆರಿಗೆ ಕೊಡುತ್ತ ಇದೆ. ಸರ್ಕಾರದ ಸಿಬ್ಬಂದಿ ಬಹಳ ಬೆಳೆದಿದೆ. ಸರ್ಕಾರ ತನ್ನ ಸಿಬ್ಬಂದಿಯ ಮುಖಾಂತರ ಈ ರೋಗಗಳನ್ನು ತಡೆಗಟ್ಟಬೇಕು. ಜನತೆಯ ಸಹಕಾರಕ್ಕೋಸ್ಕರ ಕರೆ ಕೊಡಬೇಕು. ಅದರಿಂದ ಯಾವ ಮುಖ್ಯ ಉದ್ದೇಶದಿಂದ ಈ ಕಾನೂನನ್ನು ತಂದಿದ್ದಾರೆ, ಆ ಉದ್ದೇಶ ಸಾಧನೆ ಮಾಡಬೇಕು. ಈಗ ನಮ್ಮ ಮುಂದೆ ಇರುವ ಕಾನೂನನ್ನು ತರುವ ಅಗತ್ಯವಿಲ್ಲ.

# ತೆರಿಗೆ ಹಾಕುವುದಕ್ಕೂ ತತ್ವ ಬೇಕು

**19ನೇ ಏಪ್ರಿಲ್ 1968**

**ಶ್ರೀ ಎ.ಕೆ. ಸುಬ್ಬಯ್ಯ:** ಮಾನ್ಯ ಸಭಾಪತಿಗಳೇ, 1968ನೇ ಇಸವಿ ಮೈಸೂರು ಇರ್ರಿಗೇಷನ್ (ಲೆವಿ ಆಫ್ ಬೆಟರ್‌ಮೆಂಟ್, ಕಾಂಟ್ರಿಬ್ಯೂಷನ್ ಅಂಡ್ ವಾಟರ್ ರೇಟ್ ಅಮೆಂಡ್‌ಮೆಂಟ್) ಬಿಲ್ ಏನು ಇದೆ ಇದರ ಪ್ರಕಾರ ಈ ಮೂಲ ಕಾಯಿದೆಯಲ್ಲಿ ನಿಶ್ಚಯ ಮಾಡಿದಂಥ 300 ರೂಪಾಯಿ ಪರಮಾವಧಿಯ ಮಿತಿಯನ್ನು 500 ರೂಪಾಯಿಗೆ ಏರಿಸುವುದಕ್ಕೆ ಇದನ್ನು ತಂದಿದ್ದಾರೆ. ಹೀಗೆ ಕಾಯಿದೆಗಳು ಬದಲಾವಣೆಯಾಗುತ್ತಾ ಹೋದರೆ ಕೆಲವೊಂದು ವರ್ಷದಲ್ಲಿ ಒರಿಜಿನಲ್ ಕಾಯಿದೆ ಹೋಗಿ ಹೊಸ ಕಾಯಿದೆ ಬರುತ್ತದೆ. ಕಾಯಿದೆ ಬದಲಾವಣೆ ಮಾಡುವುದರಲ್ಲಿ ಮೈಸೂರು ಸರ್ಕಾರದವರು ಬಹಳ ಮುಂದೆ ಹೋಗಿದ್ದಾರೆ. ಪರಮಾವಧಿ ಮಿತಿ 500 ರೂಪಾಯಿಗಳಿದ್ದರೆ ಶ್ರೀಮಾನ್ ಶಾಮಯ್ಯಗೌಡರು ಹೇಳಿದ ಹಾಗೆ ತೆರಿಗೆ ನಿಶ್ಚಯ ಮಾಡುವಾಗ ಪರಮಾವಧಿ ಎಂದು ಹೇಳಿರತಕ್ಕ 500 ರೂಪಾಯಿಯನ್ನೇ ಹಾಕುತ್ತಾರೆ. ಜನರಮೇಲೆ ಈ ತೆರಿಗೆಯನ್ನು ನಿಶ್ಚಯಿಸುವುದಕ್ಕೂ ಕೂಡ ಒಂದು ತತ್ವ ಬೇಕು. ಮಾನ್ಯ ಸದಸ್ಯರಾದ ಆಂಜನಪ್ಪನವರು ಹೇಳಿದರು, ಬಹು ಮುಖ್ಯವಾದ ತೆರಿಗೆ ಜನರಮೇಲೆ ವಿಧಿಸಲ್ಪಟ್ಟಿದೆ ಎಂದು. ಭಾರತದಲ್ಲಿ ಸಾಮಾನ್ಯ ಜನರಮೇಲೆ ಹೇರಿರುವಷ್ಟು ತೆರಿಗೆಯನ್ನು ಪ್ರಪಂಚದಲ್ಲಿ ಇನ್ನು ಯಾವ ಭಾಗದ ಜನರಮೇಲೂ ಹೇರಿಲ್ಲಾ. ಈ ರೀತಿ ತೆರಿಗೆ ಹಾಕುತ್ತಾ ಹೋದರೆ ಕೊಡುವ ತಾಕತ್ತು ಜನರಿಗೆ ಇದೆಯೇ ಎಂಬುದನ್ನು ನೋಡಬೇಕು. ತೆರಿಗೆ ಹೇರುವುದರಲ್ಲೂ ಕೂಡ ಒಂದು ಮಿತಿ ಇದೆ. ಹಸುವು ಎಷ್ಟು ಹಾಲು ಕೊಡುತ್ತದೋ ಅಷ್ಟು ಮಾತ್ರ ಕರಿಯಬೇಕು. ಅನೇಕ ತೆರಿಗೆಗಳು ವಸೂಲಾಗದೆ ಉಳಿದಿವೆ. ಅನೇಕ ಕಡೆ ಬರೀ ಕಾಲುವೆ ಮಾತ್ರ ಇದೆ. ನೀರು ಇರುವುದಿಲ್ಲ. ಆದಾಗ್ಯೂ ಅವಕ್ಕೆ ತೆರಿಗೆಯನ್ನು ವಿಧಿಸಿದ್ದೀರಿ. ನೀವು ಕಟ್ಟಿದಂಥ ಕಾಲುವೆಗಳು ಒಡೆದುಹೋಗಿವೆ. ನಾವು ಯಾವುದೇ ಒಂದು ಸ್ಕೀಮನ್ನು ತೆಗೆದುಕೊಂಡರೂ ಸರ್ಕಾರ ಖರ್ಚು ಮಾಡಿರುವ ಹಣಕ್ಕೆ ಸಾಕಷ್ಟು ಫಲ ಬರುತ್ತಿಲ್ಲ. ವಿರಾಜಪೇಟೆಯಲ್ಲಿ ವಾಟರ್ ವರ್ಕ್ಸ್ ಉದ್ಘಾಟನೆ ಬಹಿರಂಗವಾಗಿ ಆಯಿತು. ಅಲ್ಲಿ ಮಂತ್ರಿಗಳು ಬಹಳ ವಿಜೃಂಭಣೆಯಿಂದ ಭಾಷಣ ಮಾಡಿದರು. ಅವರ ಭಾಷಣದಲ್ಲಿ ಹೇಳಿದರು, ನಾನು ಹೊರಟುಹೋದ ಮೇಲೂ ಈ ವಾಟರ್ ಸಪ್ಲೈವರ್ಕ್ಸ್ ಚೆನ್ನಾಗಿ ನಡೆಯಬೇಕು, ಇದು ನಿಂತು ಹೋಗಬಾರದು ಎಂದು.

ಮಂತ್ರಿಗಳ ಬಾಯಿಂದ ಯಾವ ಸಮಯದಲ್ಲಿ ಈ ಮಾತು ಬಂತೋ ಅದು ಆಗಲೇ ನಿಂತು ಹೋಯಿತು. ಈಗ ಜೈಲು ಕಟ್ಟಡ ಕಟ್ಟಿಸುತ್ತಿದ್ದಾರೆ. ಅದೂ ಕೂಡ ಒಡೆಯುತ್ತಾ ಇದೆ. ಈ ರೀತಿ ಯೋಜನೆಗಳಾದರೆ ಯಾವ ಯೋಜನೆಯೂ ಸಫಲವಾಗುವುದಿಲ್ಲ. ಯಾವುದರಲ್ಲೂ ಸಫಲತೆ ಕಾಣಬರುತ್ತಾ ಇಲ್ಲ. ತೆರಿಗೆ ಮಾತ್ರ ಹನುಮಂತನ ಬಾಲದಂತೆ ಹೆಚ್ಚಿಕೊಂಡು ಹೋಗುತ್ತಿವೆ. ಕಾಂಗ್ರೆಸ್ಸಿನವರು ಜನಸಾಮಾನ್ಯರ ಮೇಲೆ ತೆರಿಗೆಯನ್ನು ಕಡಿಮೆ ಆಗುವ ಹಾಗೆ ಮಾಡಬೇಕು. ಕಳೆದ ವರ್ಷ ಜನರು ಕಷ್ಟ ಜೀವನವನ್ನು ನಡೆಸುತ್ತಾ ಇದ್ದರು. ಇವೊತ್ತು ಜನರಿಗೆ ಸುಖ ಸಿಕ್ಕಬೇಕಾದರೆ ತೆರಿಗೆ ಕಡಿಮೆ ಮಾಡಬೇಕೆ ವಿನಃ ಜಾಸ್ತಿ ಮಾಡಬಾರದು. ಜನ ಸಾಮಾನ್ಯರಲ್ಲಿ ಕಷ್ಟಕಾರ್ಪಣ್ಯಗಳು ಜಾಸ್ತಿಯಾಗುತ್ತಾ ಇರುವುದರ ಕಡೆ ಸರ್ಕಾರದ ಲಕ್ಷ್ಯವೇ ಇಲ್ಲ. ತೆರಿಗೆಯ ಪರಮಾವಧಿ ಮಿತಿಯನ್ನು ಹೆಚ್ಚು ಮಾಡಿ ನೀವು ಆಡಳಿತದಲ್ಲಿ ವಿಫಲತೆನ್ನು ಪಡೆದಿದ್ದೀರಿ ಎಂದು ಕಾಣುತ್ತದೆ. ಮಾನ್ಯ ಮಂತ್ರಿಗಳು ಇದನ್ನು ಗಮನದಲ್ಲಿಟ್ಟುಕೊಂಡು ಜನರ ಮೇಲೆ ಹೆಚ್ಚು ತೆರಿಗೆ ವಿಧಿಸಕೂಡದು. ನೀವು ಪ್ರಗತಿಶೀಲ ಉದ್ಯಮಗಳನ್ನು ಕಾಪಾಡುವುದರ ಕಡೆಗೆ ಗಮನ ಹರಿಸಬೇಕು. ಈಗ ಸರ್ಕಾರದವರು ಈ ಅಮೆಂಡ್‌ಮೆಂಟ್ ತಂದು ನೀವು ಪರಮಾವಧಿ ಮಿತಿಯನ್ನು ಹೆಚ್ಚಿಸಲು ಹೊರಟಿರುವುದು ಸರಿಯಲ್ಲ.

# ಪ್ರಜಾಪ್ರಭುತ್ವ ತತ್ವಕ್ಕೆ ಕೊಡಲಿ ಪೆಟ್ಟು

**17ನೇ ಸೆಪ್ಟೆಂಬರ್ 1968**

**ಶ್ರೀ ಎ.ಕೆ. ಸುಬ್ಬಯ್ಯ:** ಈ ದಿವಸ ಮೈಸೂರು ಅರ್ಬನ್ ಡೆವಲಪ್‌ಮೆಂಟ್ ಬೋರ್ಡ್ಸ್ ಬಿಲ್, 1967, ವಿಮರ್ಶೆಗೋಸ್ಕರ ನಮ್ಮ ಮುಂದೆ ಇದೆ. ಸರ್ಕಾರ ನಮಗೆ ತಿಳಿಸಿರತಕ್ಕ ಅಭಿಪ್ರಾಯದ ಪ್ರಕಾರ ಸ್ಥಳೀಯ ಸಂಸ್ಥೆಗಳಿರುವ ಪ್ರದೇಶದಲ್ಲಿ ಚುನಾಯಿತ ಸದಸ್ಯರು ಆಡಳಿತ ನಡೆಸುತ್ತಿರುವ ಸಂದರ್ಭದಲ್ಲಿ ನಿರೀಕ್ಷಿಸುವಂಥ ಅಭಿವೃದ್ಧಿ ಕಾರ್ಯಗಳು ಅವರಿಂದ ಆಗುತ್ತಿಲ್ಲ. ಅದಕ್ಕೋಸ್ಕರ ಕೆಲವೊಂದು ಪ್ರದೇಶಗಳಲ್ಲಿ ಎಂದರೆ '50 ಸಾವಿರಕ್ಕಿಂತ ಹೆಚ್ಚಿನ ಜನಸಂಖ್ಯೆ ಇರತಕ್ಕ ಪ್ರದೇಶಗಳಲ್ಲಿ ಅಭಿವೃದ್ಧಿ ಮಂಡಲಿಗಳನ್ನು ಸ್ಥಾಪಿಸಿ ಅವುಗಳ ಮೂಲಕ ಅಭಿವೃದ್ಧಿ ಕಾರ್ಯ ನಡೆಸಬೇಕು ಎನ್ನುವ ಉದ್ದೇಶದಿಂದ ಈ ಮಸೂದೆಯನ್ನು ತರಲಾಗಿದೆ' ಎಂದು ಸರ್ಕಾರದವರು ತಿಳಿಯಪಡಿಸಿದ್ದಾರೆ. ಪ್ರಜಾಪ್ರಭುತ್ವದಲ್ಲಿ ಆಡಳಿತ ವಿಕೇಂದ್ರೀಕರಣದ ಅತ್ಯಂತ ಅಮೂಲ್ಯವಾದ ಸಿದ್ಧಾಂತವನ್ನು ನಾವೆಲ್ಲ ಒಪ್ಪಿಕೊಂಡಿದ್ದೇವೆ. ಈ ಮಸೂದೆಯು ಆಡಳಿತ ವಿಕೇಂದ್ರೀಕರಣದ ಯಾವ ಒಂದು ಅಮೂಲ್ಯವಾದ ಸಿದ್ಧಾಂತವಿದೆಯೋ ಅದಕ್ಕೆ ಅಡ್ಡಗಾಲು ಹಾಕುತ್ತದೆ ಎಂದು ನನಗನ್ನಿಸುತ್ತದೆ. ಕೆಲವೊಂದು ಸ್ವಯಂ ಪ್ರಭುತ್ವ ಪಡೆದಿರಕತಕ್ಕ ಸಂಸ್ಥೆಗಳು ಕೆಲಸ ಮಾಡಲಿಲ್ಲ. ಅದಕ್ಕೋಸ್ಕರ ಈ ಅಭಿವೃದ್ಧಿ ಸಮಿತಿಗಳ ಬಿಲ್ಲನ್ನು ತೆಗೆದುಕೊಂಡು ಬಂದಿದ್ದೇವೆ ಎಂದು ಹೇಳಿದ್ದಾರೆ. ಆದರೆ ಇದರಿಂದ ನಡೆದೀತು ಎಂದು ಹೇಳಲಿಕ್ಕೆ ಬರುವುದಿಲ್ಲ. ನೈತಿಕ ಮಟ್ಟವನ್ನು ಪಡೆಯದ ಜನ ಎಲ್ಲಿಯವರೆಗೆ ಆಡಳಿತ ಸ್ಥಾನವನ್ನು ಆಕ್ರಮಿಸಿರುತ್ತಾರೋ ಅಲ್ಲಿಯವರೆಗೂ ಯಾವ ಬಿಲ್, ಯಾವ ಕಾನೂನು ತರುವುದೂ ಕೂಡ ಅಭಿವೃದ್ಧಿ ಕಾರ್ಯವನ್ನು ಮಾಡಲಿಕ್ಕೆ ಸಹಕಾರಿಯಾಗಲಾರದು. ಲೋಕಲ್ ಅಥಾರಿಟೀಸ್ ಮೂಲಕ ಅಭಿವೃದ್ಧಿ ಮಾಡಲಿಕ್ಕೆ ಸಾಕಷ್ಟು ಅವಕಾಶವಿದೆ. ಮಾನ್ಯ ಸದಸ್ಯರಾದ ಜಿ.ಎ. ಗೌಡ ಅವರು ಹೇಳಿದ ಹಾಗೆ ಅಭಿವೃದ್ಧಿ ಸಮಿತಿಗಳು ಎಂದು ಮಾಡಿಕೊಳ್ಳಬಹುದು ಮತ್ತು ಅವರ ಮುಖಾಂತರ ಕೆಲಸ ಮಾಡಬಹುದು. ಅವರು ಕೆಲಸ ಮಾಡಲಿಲ್ಲವೆಂದರೆ ಏನು ಮಾಡಬೇಕು ಎಂದು ಕೇಳಬಹುದು. ಅಭಿವೃದ್ಧಿ ಮಂಡಲಿಗಳೂ ಕೆಲಸ ಮಾಡಲಿಲ್ಲ ಎಂದರೆ ಮಾಡುವುದಾದರೂ ಏನು? ಪ್ರತಿಯೊಂದಕ್ಕೂ ಒಂದೊಂದು ಕಮಿಟಿಯನ್ನು ನೇಮಿಸುತ್ತ ಹೋದರೆ ಆಗುವುದಿಲ್ಲ. ಒಂದು ವಿಚಾರಕ್ಕೆ ಒಂದು ಕಮಿಟಿಯನ್ನು ನೇಮಿಸುವುದು, ಅವರು ಏನು ಕೆಲಸ ಮಾಡಿದರು ಎನ್ನುವುದು ಗೊತ್ತಿಲ್ಲವೆಂದು ಅದನ್ನು ನೋಡಲಿಕ್ಕೆ ಮತ್ತೊಂದು

ಕಮಿಟಿಯನ್ನು ಮಾಡುವುದು, ಅದೂ ತನ್ನ ವರದಿಯನ್ನು ಕೊಡಲಿಲ್ಲ ಎಂದು ಅದರ ಮೇಲೆ ಮತ್ತೊಂದು ಕಮಿಟಿಯನ್ನು ನೇಮಕ ಮಾಡುವುದು. ಈ ರೀತಿಯ ಆಡಳಿತ ವ್ಯವಸ್ಥೆ ನಮ್ಮಲ್ಲಿ ಮುಂದುವರಿಯುತ್ತಿದೆ. ಲೋಕಲ್ ಅಥಾರಿಟೀಸ್ ಕೆಲಸ ಮಾಡಲಿಲ್ಲ ಎಂದು ಡೆವಲಪ್‌ಮೆಂಟ್ ಬೋರ್ಡ್ಸ್ ಬಿಲ್ ತಂದಿದ್ದಾರೆ. ಅದೂ ಕೆಲಸ ಮಾಡಲಿಲ್ಲ ಎಂದರೆ ಮುಂದೆ ಏನು ಮಾಡಬೇಕು? ಅದರ ಬಗ್ಗೆ ನಮಗೆ ಗೊತ್ತಾಗುತ್ತಿಲ್ಲ. ಈ ದೃಷ್ಟಿಯಿಂದ ವಿಚಾರ ಮಾಡಿದರೆ ಅನೇಕ ಕಡೆ ಲೋಕಲ್ ಅಥಾರಿಟೀಸ್ ಕೆಲಸ ಮಾಡದೇ ಇರುವ ಸಂದರ್ಭದಲ್ಲಿ ಮಾನ್ಯ ಸದಸ್ಯರು ಈಗಾಗಲೇ ಹೇಳಿದ ಹಾಗೆ ಸರ್ಕಾರವರು ಅಂಥ ಸಂಸ್ಥೆಗಳನ್ನು ಸೂಪರ್ ಸೀಡ್ ಮಾಡಿದ್ದಾರೆಯೇ? ಆ ಕೆಲಸವನ್ನು ಏಕೆ ಮಾಡಿಲ್ಲ? ಎಂದು ಕೇಳಬೇಕಾಗುತ್ತದೆ.

ಆದರೆ ಇದು ಕಾರ್ಯಗತವಾಗುವಾಗ ಸರ್ಕಾರದವರು ಅಲ್ಲಲ್ಲಿ ಅಡ್ಡಗಾಲು ಹಾಕುತ್ತಾರೆ. ಆದುದರಿಂದ ಈ ಮಸೂದೆಯನ್ನು ಒಳ್ಳೆಯ ಉದ್ದೇಶದಿಂದ ತಂದಿದ್ದರೂ ಈ ಮಸೂದೆ ಸಫಲವಾಗುವುದಿಲ್ಲ. ಇದರಲ್ಲಿ ಏನೋ ಒಂದು ಉದ್ದೇಶ ಇದೆ ಎಂದು ನನಗೆ ಮನವರಿಕೆಯಾಗಿದೆ. ಆಡಳಿತ ವಿಕೇಂದ್ರೀಕರಣದಿಂದ ಈ ಸ್ಥಳೀಯ ಸಂಸ್ಥೆಗಳು ಚೆನ್ನಾಗಿ ಬೆಳೆದು ಮೇಲಿನವರ ಹತೋಟಿ ತಪ್ಪಿ ಹೋಗುತ್ತದೆ ಎನ್ನುವ ಸಮಸ್ಯೆ ಸರ್ಕಾರಕ್ಕೆ ಇದೆ. ಆದುದರಿಂದ ಸರ್ಕಾರದವರು ಅಂತಹ ಸಂಸ್ಥೆಗಳ ಮೇಲೂ ಸಹ ತಮ್ಮ ಹತೋಟಿಯನ್ನು ಉಳಿಸಿಕೊಳ್ಳಲು ಪ್ರಯತ್ನ ಮಾಡುತ್ತಿದ್ದಾರೆ. ಅಲ್ಲಿ ಅಭಿವೃದ್ಧಿ ಕಾರ್ಯಗಳಿಗೆ ಅಡ್ಡಗಾಲು ಹಾಕುತ್ತಾರೆ. ಅಂತಹ ಸಂಸ್ಥೆಗಳನ್ನು ನಪುಂಸಕ ಸಂಸ್ಥೆಗಳನ್ನಾಗಿ ಮಾಡಿಬಿಡುತ್ತಾರೆ. ಸರ್ಕಾರದವರು ಅಂತಹ ಸಂಸ್ಥೆಗಳನ್ನು ಚಲಾವಣೆ ಮಾಡಿ ತಮಗೆ ಬೇಕಾದವರನ್ನೆಲ್ಲಾ ಸೇರಿಸುತ್ತಾರೆ. ಹೀಗೆ ಆದ ಮೇಲೆ ಅದರಲ್ಲಿ ಚುನಾಯಿತರಾದ ಸದಸ್ಯರು ಇರುವುದು ಮತ್ತು ಅಂತಹ ಚುನಾಯಿತ ಸಂಸ್ಥೆಗಳು ಇರುವುದು ಏನು ಪ್ರಯೋಜನ? ಸರ್ಕಾರದವರೇ ಛೇರ್ಮನ್‌ರವರನ್ನು ನೇಮಿಸುತ್ತಾರೆ ಅವರದ್ದೇ ಸಂಪೂರ್ಣ ಅಧಿಕಾರ ಇರುತ್ತದೆ. ಇದು ಯಾರಿಗೂ ಅರ್ಥವಾಗುವುದಿಲ್ಲ. ಸರ್ಕಾರದವರು ಈ ಒಳಮರ್ಮವನ್ನು ಇಟ್ಟುಕೊಂಡು ಅಂತಹ ಮಸೂದೆ ತರುವುದು ಒಳ್ಳೆಯದಲ್ಲ. ಇದು ಪ್ರಜಾಪ್ರಭುತ್ವ ತತ್ವದ ಮೂಲಭೂತವಾದ ಹಕ್ಕಿಗೆ ಕೊಡಲಿಪೆಟ್ಟು ಬಿದ್ದಂತಾಗುತ್ತದೆ. ಆದುದರಿಂದ ಈಗ ಅಧಿಕಾರವನ್ನು ಹೆಚ್ಚು ಹೆಚ್ಚಾಗಿ ವಿಕೇಂದ್ರೀಕರಣ ಮಾಡಬೇಕು. ಅಧಿಕಾರ ವಿಕೇಂದ್ರೀಕರಣ ಮಾಡಿ ಪುನಃ ಅದನ್ನು ಕೇಂದ್ರೀಕರಿಸುವಂತೆ ಮಾಡಿದರೆ ಅದು ಪ್ರಜಾಪ್ರಭುತ್ವಕ್ಕೆ ಶೋಭಿಸುವುದಿಲ್ಲ. ಸರ್ಕಾರದವರು ಇದನ್ನು ಹಿಂತೆಗೆದುಕೊಳ್ಳಬೇಕೆಂದು ನಾನು ಒತ್ತಾಯ ಪಡಿಸುತ್ತೇನೆ.

# ತಿದ್ದುಪಡಿ ಮಸೂದೆಯು ಕನ್ನಡದಲ್ಲಿರಬೇಕು

## 3ನೇ ಏಪ್ರಿಲ್ 1969

**ಶ್ರೀ ಎ.ಕೆ. ಸುಬ್ಬಯ್ಯ** (ಪದವೀಧರರ ಕ್ಷೇತ್ರ): ನಾವು ಇತ್ತೀಚೆಗೆ ಅನೇಕ ತಿದ್ದುಪಡಿ ಮಸೂದೆಗಳನ್ನು ಸಭೆಯ ಮುಂದೆ ಅಂಗೀಕರಿಸತಕ್ಕ ಬಗ್ಗೆ ಸರ್ಕಾರಕ್ಕೆ ಒಂದು ಸೂಚನೆಯನ್ನು ತರುತ್ತಿದ್ದೇನೆ. ನಮ್ಮ ಈ ಎಲ್ಲಾ ಕಾನೂನುಗಳನ್ನು ನಮ್ಮ ರಾಜ್ಯಭಾಷೆಯಾದ ಕನ್ನಡದಲ್ಲಿ ಮಂಡಿಸಬೇಕಾದ್ದು ಅತಿ ಮುಖ್ಯವಾದುದ್ದು. ನಮ್ಮ ಸರ್ಕಾರದವರ ಅಭಿಪ್ರಾಯವೂ ಕೂಡ ಅದೇ ಇದೆ ಎಂದು ನಂಬಿಕೊಂಡಿದ್ದೇನೆ. ಹಾಗೆ ಕನ್ನಡಕ್ಕೆ ತರ್ಜುಮೆ ಮಾಡಿಸಿ ಈ ಸಭೆಗೆ ಹಂಚಬೇಕಾದ್ದುದು ಒಂದು ಮೂಲಭೂತವಾದ ಅಂಶ. ಇನ್ನಾದರೂ ಸರ್ಕಾರದವರು ಕನ್ನಡದಲ್ಲಿ ಈ ತಿದ್ದುಪಡಿ ಮಸೂದೆಗಳನ್ನು ಮಾಡಿಸಿ ಹಂಚುವುದಕ್ಕೆ ವ್ಯವಸ್ಥೆ ಮಾಡುವುದು ಒಳ್ಳೆಯದೆಂದು ಹೇಳುತ್ತೇನೆ. ನಾವು ಈ ದಿವಸ ಇಲ್ಲಿ ನಡೆಯತಕ್ಕ ಪ್ರಶ್ನೆಗಳನ್ನು ಯಾವ ರೀತಿ ಕನ್ನಡ ಮತ್ತು ಇಂಗ್ಲೀಷಿನಲ್ಲಿ ಅಚ್ಚನ್ನು ಹಾಕಿಸಿ, ಅವುಗಳನ್ನು ಇಲ್ಲಿ ಚಲಾವಣೆ ಮಾಡುತ್ತಿದ್ದೇವೋ ಹಾಗೆಯೆ ಈ ತಿದ್ದುಪಡಿ ಮಸೂದೆಗಳನ್ನು ಕೂಡ ಇಂಗ್ಲೀಷ್ ಮತ್ತು ಕನ್ನಡಗಳೆರಡರಲ್ಲೂ ಮಾಡಿಸಿದರೆ, ಮುಂದೆ ಈಗ ಇಂಗ್ಲೀಷಿನಲ್ಲಿರತಕ್ಕ ಎಲ್ಲ ಆ್ಯಕ್ಟ್‌ಗಳನ್ನೂ ಕನ್ನಡಕ್ಕೆ ತರ್ಜುಮೆ ಮಾಡುವುದಕ್ಕೆ ಸುಲಭವಾಗುತ್ತದೆ. ಹಾಗೂ ಇದೊಂದು ಅಡಿಗಲ್ಲಾಗಿರುತ್ತದೆಂದು ಹೇಳುವುದಕ್ಕೆ ಇಷ್ಟಪಡುತ್ತೇನೆ. ಸರ್ಕಾರದವರು ಈ ತಿದ್ದುಪಡಿಯನ್ನು ತರಲಿಕ್ಕೆ ಅವರ ಉದ್ದೇಶವೇನೆಂಬುದನ್ನು, ಈ ಬಿಲ್ಲಿನಲ್ಲಿ ಕೊಟ್ಟಿರತಕ್ಕ ಉದ್ದೇಶ ಮತ್ತು ಕಾರಣಗಳ ಸ್ಟೇಟ್‌ಮೆಂಟಿನಲ್ಲಿ ತಿಳಿಸಿದ್ದಾರೆ. ಇದನ್ನು ತರುವುದಕ್ಕೆ ಮುಖ್ಯ ಕಾರಣ ನಮ್ಮ ರಾಷ್ಟ್ರದ ಸರ್ವೋಚ್ಛ ನ್ಯಾಯಾಲಯದಲ್ಲಿ ಆಗಿರತಕ್ಕ ಒಂದು ತೀರ್ಮಾನಕ್ಕನುಸಾರವಾಗಿ ಒಂದು ವ್ಯವಹಾರಕ್ಕೆ ಎರಡು ರೀತಿಯಲ್ಲಿ ಪರಿಹಾರ ಪಡೆಯಬಹುದೆಂದು. ಅದರಲ್ಲಿ ಒಂದು-ಇಲಾಖೆಯ ಅಧಿಕಾರಿಯ ಮುಂದೆ ವಿವಾದವನ್ನು ತೆಗೆದುಕೊಂಡು ಹೋಗಿ ಅಲ್ಲಿ ಪರಿಹಾರ ಪಡೆಯಬಹುದು ಅನ್ನುವುದು; ಇನ್ನೊಂದು ಸಿವಿಲ್ ಕೋರ್ಟಿನ ಮುಂದೆ ಹೋಗಿ ಪರಿಹಾರವನ್ನು ಕೇಳಬಹುದು ಅನ್ನುವುದು. ಹೀಗೆ ಒಂದು ತಕ್ರಾರಿಗೆ ಎರಡು ಕಡೆಗಳಿಂದ ಪರಿಹಾರ ಪಡೆಯಬಹುದು ಎಂದು ತೀರ್ಮಾನ ಮಾಡಿರುವುದು ನಮ್ಮ ರಾಜ್ಯಾಂಗದ 17ನೇ ವಿಧಿಗನುಸಾರವಾಗಿ ನಮ್ಮ ಮೂಲಭೂತ ಹಕ್ಕುಗಳಿಗೆ ತೀರಾ ವಿರುದ್ಧವಾಗಿರುತ್ತದೆ. ಆದರೆ ಇದರ ಬಗ್ಗೆ ನನ್ನ ಪ್ರಮುಖ

ಆಕ್ಷೇಪಣೆಯೇನೆಂದರೆ-ಈ ಪರಿಹಾರಕ್ಕೆ ಸಂಬಂಧಪಟ್ಟ ಹಾಗೆ ಇಲಾಖೆಯ ಅಧಿಕಾರಿಯ ಮುಂದೆ ಹೋಗಿ ಅಲ್ಲಿಂದ ಒಂದು ಆಜ್ಞೆಯನ್ನು ಹೊರಡಿಸಿ ಅದರ ಪ್ರಕಾರ ಪರಿಹಾರ ಪಡಯಬಹುದು ಎಂದು ಹೇಳಿರತಕ್ಕದ್ದನ್ನು ನಾನು ತೀವ್ರವಾಗಿ ಆಕ್ಷೇಪಣೆ ಮಾಡುತ್ತೇನೆ ಮತ್ತು ಇದನ್ನು ವಿರೋಧಿಸುತ್ತೇನೆ. ನಾವೀದಿವಸ ಸಾಮಾನ್ಯವಾಗಿ ಎಲ್ಲರೂ ಭಾವಿಸಿರುವಂತೆ ಪ್ರಜಾಪ್ರಭುತ್ವದಲ್ಲಿ ನ್ಯಾಯಸ್ಥಾನಗಳು ಬಹಳ ಪ್ರಾಮುಖ್ಯವಾದ ಸ್ಥಾನಗಳನ್ನು ಪಡೆದಿರುತ್ತವೆ. ಹಾಗಿದ್ದರೂ ನಾವು ಇಲ್ಲಿ ಅನೇಕ ಕಾನೂನುಗಳನ್ನು ತಂದು ಜನತೆ ಸಿವಿಲ್ ಕೋರ್ಟುಗಳ ಮುಂದೆ ಹೋಗತಕ್ಕದ್ದನ್ನು ತಡೆಗಟ್ಟಲಾಗಿದೆ. ಉದಾಹರಣೆಯಾಗಿ ಅನೇಕ ಸಹಕಾರ ಸಂಸ್ಥೆಗಳ ರೆವಿನ್ಯೂ ಇಲಾಖೆಗೆ ಸಂಬಂಧಪಟ್ಟ ವಿಷಯಗಳು, ಲೇಬರ್ ವಿವಾದಗಳು ಇತ್ಯಾದಿ ವ್ಯವಹಾರಗಳಲ್ಲಿ ಜನರು ನ್ಯಾಯ ದೊರಕಿಸಿಕೊಳ್ಳಲು ಸಿವಿಲ್ ಕೋರ್ಟುಗಳ ಮುಂದೆ ಹೋಗುವುದಕ್ಕೆ ಇದ್ದ ಅವಕಾಶವನ್ನು ತಪ್ಪಿಸಲಾಗಿದೆ. ಇದರಿಂದ ಇಡೀ ದೇಶಕ್ಕೇ ಒಂದು ಬಹಳ ದೊಡ್ಡ ಅಪಾಯವುಂಟಾಗಿದೆ; ಹಾಗೂ ಅದರಿಂದ ಅನ್ಯಾಯವಾಗಿದೆ. ಈಗಾಗಲೇ ನನ್ನ ಕೆಲವು ಮಿತ್ರರು ಹೇಳಿರುವಂತೆ ಕೋರ್ಟನ್ನು ಬಿಟ್ಟು ಹೊರಗಡೆ ಇರತಕ್ಕ ಅಧಿಕಾರಿಗಳೇನಿದ್ದಾರೆ ಅವರಿಗೆ ಕಾನೂನಿನ ಪರಿಜ್ಞಾನವೇ ಇರುವುದಿಲ್ಲ. ಅನೇಕ ವೇಳೆ ನಾವು ತಹಶೀಲ್ದಾರ ಮತ್ತು ಡಿ.ಸಿ.ಗಳ ಮುಂದೆ ಹೋಗಿದ್ದಾಗ ಅವರಲ್ಲಿ ಕಾನೂನು ವಿಚಾರದಲ್ಲಿ ನಾವು ಎಷ್ಟೇ ವಾದ ಮಾಡಿದರೂ ಅದು ಅವರ ತಲೆಯೊಳಗೇ ಹೋಗುವುದಿಲ್ಲ. ಇಂಥಾ ನಿದರ್ಶನಗಳು ನಮಗೆ ಲೇಬರ್ ವ್ಯವಹಾರದಲ್ಲಿ ಮತ್ತು ಅರ್.ಟಿ.ಎ. ವ್ಯವಹಾರಗಳಲ್ಲಿ ಮನದಟ್ಟಾಗಿದೆ. ಹೀಗಾಗಿ ಈ ದಿವಸ ಇಂಥ ಒಂದು ಕಾನೂನಿನ ದೆಶೆಯಿಂದ ಸಾರ್ವಜನಿಕರಿಗೆ ಬಹಳ ಅನ್ಯಾಯಗಳಾಗುತ್ತಿವೆ. ಇದರಿಂದಲೇ ದೇಶದಲ್ಲಿ ಸ್ವಜನ ಪಕ್ಷಪಾತ ಹಾಗೂ ಲಂಚಕೋರತನಗಳು ಬೆಳೆಯುವುದಕ್ಕೆ ಅವಕಾಶವುಂಟಾಗಿದೆ. ಕಾರಣ ಜನರು ನಿಷ್ಪಕ್ಷವಾದ ನ್ಯಾಯ ದೊರಕಿಸಿಕೊಳ್ಳಲು ಸಿವಿಲ್ ಕೋರ್ಟುಗಳ ಮುಂದೆ ಹೋಗುವ ಹಾಗಿಲ್ಲ. ಹೀಗೆ ಈ ಒಂದು ಅವಕಾಶವನ್ನು ತಪ್ಪಿಸಿರತಕ್ಕದ್ದು ಬಹಳ ಅನ್ಯಾಯ. ಇದರಿಂದ ದೇಶಕ್ಕೇನೂ ಒಳ್ಳೆಯದಾಗುವುದಿಲ್ಲ. ಸುಪ್ರೀಂ ಕೋರ್ಟಿನವರು ಸಾಮಾನ್ಯ ಪರಿಹಾರಕ್ಕೆ ಸಿವಿಲ್ ಕೋರ್ಟಿನ ಮುಂದೆ ಒಂದು ದಾವಾ ತರಬಹುದು ಎಂದು ಹೇಳಿರುವುದನ್ನೂ ಉಳಿಸಿಕೊಂಡು ಅದರ ಜೊತೆಗೆ ಮತ್ತೊಂದು ಪರಿಹಾರ ಮಾರ್ಗವನ್ನು ಸೂಚಿಸಿದ್ದಾರೆ. ಆದರೆ ಅವರು ಹಾಗೆ ಮಾಡಬಾರದಿತ್ತು. ಆ ಎರಡನೇ ಮಾರ್ಗವನ್ನು ಅವರು ಕೈಬಿಟ್ಟು ಸಿವಿಲ್ ಕೋರ್ಟ್ ಒಂದನ್ನೇ

ಉಳಿಸಿಕೊಳ್ಳಬೇಕಾಗಿತ್ತು ಎಂಬುವುದು ನನ್ನ ವಾದ. ಆದರೆ ಪಾರ್ಟಿಗಳು ಅನೇಕ ವರ್ಷಗಳ ಕಾಲ ಕೋರ್ಟಿಗೆ ತಿರುಗಬೇಕಾಗುತ್ತದೆಂಬ ಒಂದು ಕಾರಣವನ್ನು ಕೆಲವರು ಎತ್ತಬಹುದು. ಆದರೆ ಅದಕ್ಕೆ ನನ್ನ ಸಲಹೆ ಇಷ್ಟೇ : ವಿವಾದಗಳನ್ನು ಇತ್ಯರ್ಥ ಮಾಡುವುದರಲ್ಲಿ ಎರಡು ವಿಧಾನಗಳುಂಟು. ಒಂದು ಸಮ್ಮರಿ ಟ್ರಯಲ್; ಇನ್ನೊಂದು ಒರಿಜಿನಲ್ ಸೂಟು; ದಾವಾ ದಾಖಲ್ಮಾಡಿಸಿಕೊಂಡು ಕೇಸನ್ನು ಹಿಯರ್ ಮಾಡುವುದು. ಈ ದಿವಸ ಸ್ಮಾಲ್‌ಕಾಸಸ್ ಕೋರ್ಟುಗಳಲ್ಲಿ 250 ರೂಪಾಯಿಗಳಿಗೆ ಒಳಗಿರತಕ್ಕ ದಾವಾಗಳನ್ನು ಸಮ್ಮರಿ ಟ್ರಯಲ್ ಮೂಲಕ ತೀರ್ಮಾನ ಮಾಡುತ್ತಾರೆ. ಈ ಸಮ್ಮರಿ ಟ್ರಯಲ್ ವಿಚಾರಣೆ ಅವಧಿ 6 ತಿಂಗಳಿಗಿಂತ ಹೆಚ್ಚಾಗಬಹುದು. ಭೂಸುಧಾರಣೆ ಇತ್ಯಾದಿ ಕೇಸುಗಳ ತೀರ್ಮಾನವನ್ನು ಸಮ್ಮರಿ ಟ್ರಯಲ್ ಮೂಲಕ ತೀರ್ಮಾನ ಮಾಡುವುದಕ್ಕೆ ಒಂದು ವ್ಯವಸ್ಥೆ ಮಾಡಿದರೆ ಬಹಳ ಚೆನ್ನಾಗಿತ್ತು. ಅದರಿಂದ ಡಿಲೇ ಪ್ರಶ್ನೆ ತಪ್ಪುತ್ತಿತ್ತು ಹಾಗೂ ನಿಷ್ಪಕ್ಷಪಾತದ ನ್ಯಾಯವನ್ನು ಪಡೆಯುವುದಕ್ಕೂ ಕೂಡ ಒಂದು ಅವಕಾಶವಿತ್ತು. ಹಾಗೆ ಮಾಡದಿರುವುದರಿಂದ ಈ ದಿವಸ ಅನೇಕ ಕೇಸುಗಳು ಕೋ ಆಪರೇಟಿವ್ ಟ್ರೈಬ್ಯುನಲ್ ಲೇಬರ್ ಮತ್ತು ಇನ್ನೂ ಕೆಲವು ಟ್ರೈಬ್ಯುನಲ್‌ಗಳಲ್ಲಿ ಅಂದರೆ ಕ್ವಾಸಿಜುಡಿಯಷಿಯಲ್ ಸಂಸ್ಥೆಗಳಲ್ಲಿ ಕೇಸುಗಳ ತೀರ್ಮಾನ ಬಹಳ ನಿಧಾನವಾಗುತ್ತಿರುವುದಕ್ಕೆ ಅನೇಕ ನಿದರ್ಶನಗಳಿವೆ.

**Mr. Deputy Chairman:-** It may amount to an allegation against the Officers who are not judges of a court.

**ಶ್ರೀ ಎ.ಕೆ. ಸುಬ್ಬಯ್ಯ:-** I am not saying this with reference to any particular individual; this is what is happening everywhere. ಬೇರೆ ಕೆಲಸದ ಜೊತೆಗೆ ಈ ಕೆಲಸವಿರುವುದರಿಂದ ಅವರಿಗೆ ಕಾನೂನು ಅರ್ಥಮಾಡಿ ಕೊಳ್ಳುವ ಚೈತನ್ಯವಿರುವುದಿಲ್ಲ. ಅವರು ಕಾನೂನಿನಲ್ಲಿ ತರಪೇತು ಪಡೆದಿರುವುದಿಲ್ಲ. ನಾನು ಡಾಕ್ಟರ್ ಕೆಲಸಮಾಡುತ್ತೇನೆಂದು ಹೇಳಿದರೆ ಹೇಗೆ ಸಾಧ್ಯವಾಗುವುದಿಲ್ಲವೋ ಹಾಗೆಯೇ ಅವರು ಕಾನೂನಿನಲ್ಲಿ ಪಂಡಿತರಲ್ಲ. Because they are not conversant with law, I am questioning their competency. ಹೀಗೆ ಅನೇಕ ಕಾರಣಗಳೂ ಸಹ ಇರಬಹುದು. ಈ ದೃಷ್ಟಿಯಿಂದ ಸಾಮಾನ್ಯವಾಗಿ ಕೋರ್ಟುಗಳಲ್ಲಿ ಹೋಗಿ ಅಭ್ಯಾಸವಿರುವ ಲಾಯರುಗಳು ಇಂತಹ ಅಧಿಕಾರಿಗಳ ಮುಂದೆ ಬರುವುದಕ್ಕೆ ಇಷ್ಟಪಡುವುದಿಲ್ಲ. ನಾವೂ ಕೂಡ ಅದನ್ನು ಅನುಭವಿಸಿದ್ದೇವೆ.

**Sri V.S. Hire Gowder (Local Authorities Constituency).-** Sir, just now my hon. friend was saying that legislation and amendments thereto should be brought in Kannada and that at least hereafter all the legislation should be translated into Kannada. Now he says that the officers of Class I mentioned in this amendment are not conversant with law. At the most I may agree that they my not have a judicious mind or a judicious background. If Class I officers do not understand law, how can a common man be conversant with the laws of the State?

**ಶ್ರೀ ಎ.ಕೆ. ಸುಬ್ಬಯ್ಯ:** ಅವರು ಏನು ಹೇಳಿದರೋ ಗೊತ್ತಾಗಲಿಲ್ಲ. ಅದಕ್ಕೋಸ್ಕರವೇ ಇದನ್ನು ಕನ್ನಡದಲ್ಲಿ ಮಾಡಿ ಎಂದು ಹೇಳುತ್ತೇನೆ. ಈ ರೀತಿ ಪದೇಪದೇ ಕಾನೂನುಗಳನ್ನು ಮಾಡಿ ಸಿವಿಲ್ ಕೋರ್ಟ್ ವ್ಯಾಪ್ತಿಯನ್ನು ಮೊಟಕುಗೊಳಿಸುವುದು ಒಳ್ಳೆಯ ಸಂಪ್ರದಾಯವಲ್ಲ. ಆದ್ದರಿಂದ ಈಗ ನಮ್ಮ ಮುಂದೆ ಇರತಕ್ಕ ವಿಧೇಯಕವನ್ನು ಈ ದೃಷ್ಟಿಯಿಂದ ನಾನು ಪೂರ್ಣವಾಗಿ ವಿರೋಧಿಸುತ್ತೇನೆ.

**ಶ್ರೀಮತಿ ಎಂ.ಆರ್. ಲಕ್ಷ್ಮಮ್ಮ:** ಸಮ್ಮರಿ ಡಿಸ್‌ಪೋಜಲ್‌ಗೆ 6 ತಿಂಗಳು ಆಗಿರುತ್ತದೆಂಬುದು ಗೊತ್ತಿರುತ್ತದೆ. ಪುನಃ ಅಂತಹ ಸಂದರ್ಭದಲ್ಲಿ ಆರು ತಿಂಗಳುಗಳ ಅವಕಾಶ ಕೊಟ್ಟರೆ ಅಲ್ಲಿಗೇನಾಯಿತು?

**ಶ್ರೀ ಎ.ಕೆ. ಸುಬ್ಬಯ್ಯ:** ಮಾನ್ಯ ಸದಸ್ಯರು ಹೇಳಿದ ಸಂದರ್ಭದಲ್ಲಿ ಆರು ತಿಂಗಳು ಅಲ್ಲ, ಇದೇ ಎರಡು ವರ್ಷಗಳು ಆಗುತ್ತದೆ. ಆ ರೀತಿ ಮಾಜಿಸ್ಟ್ರೇಟ್ ಕೋರ್ಟಿನಲ್ಲಿ ಆಗುವುದಿಲ್ಲ. ಆದ್ದರಿಂದ ಸರ್ಕಾರದವರು ಈ ವಿಧೇಯಕವನ್ನು ಹಿಂದಕ್ಕೆ ತೆಗೆದುಕೊಂಡು ಸಿವಿಲ್ ಕೋರ್ಟ್‌ಗಳಿಗೆ ಅವಕಾಶ ಕೊಡುವ ಹಾಗೆ ಬೇರೆ ತಿದ್ದುಪಡಿ ವಿಧೇಯಕವನ್ನು ಇಲ್ಲಿ ಮಂಡಿಸಬೇಕು.

# ಸಮಗ್ರ ತಿದ್ದುಪಡಿ ಅಗತ್ಯ

**8ನೇ ಏಪ್ರಿಲ್ 1969**

**ಶ್ರೀ ಎ.ಕೆ. ಸುಬ್ಬಯ್ಯ:** ಈಗ ಮೈಸೂರು ಕೋರ್ಟ್ ಫೀ ಅಂಡ್ ಸೂಟ್ಸ್ ವ್ಯಾಲ್ಯೂಯೇಷನ್ ತಿದ್ದುಪಡಿ ಮಸೂದೆಯನ್ನೇನು ಈ ಸಭೆಯ ಮುಂದೆ ತಂದಿದ್ದಾರೆ, ಇದರಿಂದ ಅನೇಕ ಜಟಿಲವಾದ ಪ್ರಶ್ನೆಗಳು ಉದ್ಭವವಾಗುತ್ತವೆ. ಈ ದೃಷ್ಟಿಯಿಂದ ಒಂದು ಸಮಗ್ರವಾದ ತಿದ್ದುಪಡಿಯನ್ನು ತರುವುದು ಅವಶ್ಯಕ ಇತ್ತು ಎನಿಸುತ್ತದೆ. ಈ ಕೋರ್ಟ್ ಫೀಜನ್ನು ಕೊಡುವಾಗ ಆಯಾ ಕೋರ್ಟಿನ ಜೂರಿಸ್‌ಡಿಕ್ಷನ್ ಪ್ರಕಾರ ಕೋರ್ಟ್ ಫೀಜನ್ನು ಕೊಡಬೇಕಾಗುತ್ತದೆ. ಈಗ ಮಾರ್ಕೆಟ್ ವ್ಯಾಲ್ಯೂ 10 ಸಾವಿರ ಬೆಲೆಬಾಳತಕ್ಕ ಜಮೀನಿಗೆ ಸಂಬಂಧಪಟ್ಟ ಕೇಸುಗಳು ಮುನ್ಸೀಫ್ ಕೋರ್ಟಿಗೆ ಬರುತ್ತವೆ. ಅದಕ್ಕೆ ಮೇಲ್ಪಟ್ಟಂಥ ಕೇಸುಗಳು ಸಿವಿಲ್ ಕೋರ್ಟಿಗೆ ಬರುತ್ತೆ. ಈಗ ಸಾಮಾನ್ಯವಾಗಿ ಒಂದು ಎಕರೆ ಭೂಮಿಗೆ 10 ಸಾವಿರ ರೂಪಾಯಿಗಳಿಂದ 15 ಸಾವಿರ ರೂಪಾಯಿಗಳವರೆಗೂ ಬೆಲೆ ಬಾಳುತ್ತದೆ, ಇಂಥಾ ಕೇಸುಗಳೆಲ್ಲವೂ ಡಿಸ್ಟ್ರೀಕ್ಟ್ ಕೋರ್ಟಿಗೆ ಬರುವಂಥಾ ಸಂದರ್ಭಗಳು ಬಂದಿವೆ. ಈಗ ಜಮೀನಿನ ಮಾರ್ಕೆಟ್ ವ್ಯಾಲ್ಯೂ ಜಾಸ್ತಿಯಾಗುತ್ತಿದೆ. ಈ ದೃಷ್ಟಿಯಿಂದ ಮುನ್ಸೀಫ್ ಕೋರ್ಟಿನ ಜ್ಯೂರಿಸ್‌ಡಿಕ್ಷನ್ ಅನ್ನು 10 ಸಾವಿರ ರೂಪಾಯಿಗಳಿಂದ 30 ಸಾವಿರ ರೂಪಾಯಿಗಳವರೆಗೆ ಏರಿಸತಕ್ಕಂಥ ಅವಶ್ಯಕತೆ ಇದೆ. ಈ ಸಂದರ್ಭದಲ್ಲಿ ಹೈಕೋರ್ಟಿನವರು ಒಂದು ಜಡ್ಜ್‌ಮೆಂಟ್ ಕೊಟ್ಟಿದ್ದಾರೆ. ಅದನ್ನೆಲ್ಲಾ ಪರಿಗಣಿಸಿ ಒಂದು ಸಮಗ್ರವಾದ ತಿದ್ದುಪಡಿಯನ್ನು ತರುವುದು ಅವಶ್ಯ ಇದೆ ಕೋರ್ಟಿನ ಜೂರಿಸ್‌ಡಿಕ್ಷನ್ ಮತ್ತು ಕೋರ್ಟ್ ಫೀ ವ್ಯಾಲ್ಯೂಯೇಷನ್ ಒಂದೇ ರೀತಿ ಇರಬೇಕು. ಜಮೀನನ್ನು ವಶಪಡಿಸಿಕೊಂಡಾಗ ನೀಡುವ ಪರಿಹಾರ ಧನ ಕಡಿಮೆಯಾದಲ್ಲಿ ಜಮೀನ್ದಾರ ಅಪೀಲು ಹೋಗಬೇಕಾದರೆ ಕೋರ್ಟಿನ ತೀರ್ಪಿನ ಮೊಬಲಗಿಗೂ ತಾನು ಕೇಳುವ ಮೊಬಲಗಿಗೂ ಇರುವ ವ್ಯತ್ಯಾಸದ ಮೇಲೆ ಫೀಜನ್ನು ಕೊಡಬೇಕೆನ್ನುವುದು ಸರಿಯಾದದ್ದಲ್ಲ. ಒಂದು ವೇಳೆ ಜಮೀನಿನ ಬೆಲೆ ಹೆಚ್ಚು ಬಾಳತಕ್ಕಂಥ ಸಂದರ್ಭ ಉದ್ಭವಿಸಿದರೆ, ದೊಡ್ಡ ಕೋರ್ಟಿಗೆ ಹೋಗಬೇಕು ಎಂದು ವಿಚಾರ ಮಾಡುವುದು ಸರಿ. ಈ ದೃಷ್ಟಿಯಿಂದ ಈ ಮಸೂದೆಗೆ ತಿದ್ದುಪಡಿಯನ್ನು ತರುವಂಥಾ ಕಾಲದಲ್ಲಿ ಅನೇಕ ತಿದ್ದುಪಡಿಗಳನ್ನು ತರುವಂಥಾ ಅವಶ್ಯಕತೆ ಇರುವುದರಿಂದ ಇದನ್ನೆಲ್ಲಾ ವಿಚಾರಿಸಿ ಒಂದು ಸಮಗ್ರವಾದ ತಿದ್ದುಪಡಿಯನ್ನು ತರಬೇಕು.

# ರೈತರ ಹಿತರಕ್ಷಣೆಗೆ ಸರ್ಕಾರ ಮುಂದೆ ಬರಬೇಕು

## (ಭೂ ಕಂದಾಯ ಶಾಸನ ತಿದ್ದುಪಡಿ ಮಸೂದೆ - 1969ನ್ನು ವಿರೋಧಿಸುತ್ತಾ)

## 11ನೇ ಏಪ್ರಿಲ್ 1969

**ಶ್ರೀ ಎ.ಕೆ. ಸುಬ್ಬಯ್ಯ:** ಈ ದಿವಸ ನಮ್ಮ ರಾಜ್ಯದ ಭೂಕಂದಾಯ ಶಾಸನದ ಎರಡನೇ ತಿದ್ದುಪಡಿಯನ್ನು ಚರ್ಚಿಸಲಿಕ್ಕೆ ನಮ್ಮ ಮುಂದೆ ಬಂದಿದೆ. ಈ ತಿದ್ದುಪಡಿ ಈಗಾಗಲೇ ಒಂದು ಇತಿಹಾಸವನ್ನು ನಿರ್ಮಾಣ ಮಾಡಿದೆ ಎಂದು ಹೇಳಿದರೆ ತಪ್ಪಾಗಲಾರದು. ಕೆಳಗಿನ ಮನೆಯಲ್ಲಿ ಈ ತಿದ್ದುಪಡಿ ಅಂಗೀಕಾರವಾದಂಥ ಸಮಯ, ಸಂದರ್ಭ, ಆ ಸನ್ನಿವೇಶಗಳನ್ನು ಗಮನಿಸಿದಾಗ ಇದು ಮಾನ್ಯ ರೆವೆನ್ಯೂ ಮಂತ್ರಿಗಳು ಹೇಳುವಷ್ಟು ಸರಳವಾದ ತಿದ್ದುಪಡಿಯಲ್ಲ. ಇದು ಕರಾಳ ಶಾಸನ. ರೈತರ ಹಣದ ಮೇಲೆ ನಗ್ನ ನರ್ತನ ಮಾಡಲಿಕ್ಕೆ ಇರತಕ್ಕ ಮುಕ್ತ ಅವಕಾಶ ಇದರಿಂದ ಆಗುತ್ತದೆ ಎಂದು ಈ ಸಂದರ್ಭದಲ್ಲಿ ಹೇಳಬೇಕಾಗುತ್ತದೆ. ಮಾನ್ಯ ರೆವೆನ್ಯೂ ಮಂತ್ರಿಗಳು ನೇರ ಪ್ರಶ್ನೆ ಹಾಕಿದರು. ವಿರೋಧ ಪಕ್ಷದವರು ಅನ್‌ಡೆಮೋಕ್ರಾಟಿಕ್ಸ್ ಆಗಿ ಹೋಗುತ್ತಿದ್ದಾರೆ ಎಂದು, ವಿರೋಧಪಕ್ಷದವರು ಪ್ರಜಾಪ್ರಭುತ್ವ ತತ್ವವಾದದ ವಿರೋಧವಾಗಿ ಏಕೆ ಹೋಗುತ್ತಾರೆಂದರೆ ರೈತರ ಹಿತರಕ್ಷಣೆಯನ್ನು ಮಾಡಬೇಕು ಪ್ರಜಾಪ್ರಭುತ್ವ ನೀತಿಗೆ ಅನುಸಾರವಾಗಿ, ಕಾನೂನುಬದ್ಧವಾಗಿ ಹೋರಾಟ ಮಾಡಬೇಕು ಎಂಬ ಕಾರಣದಿಂದ. ರೈತರ ಬಗ್ಗೆ ನಿಮಗೆ ಮಾತ್ರ ಅಭಿಮಾನವಿದೆ. ನಮಗೆ ಇಲ್ಲವೇ? ಎಂದಿಗೂ ನಾವೂ ರೈತರ ಹಿತಚಿಂತಕರಾಗಿ ಚಿಂತಿಸುವುದಕ್ಕೆ ಇದ್ದೇವೆ. ಅವರಿಗೋಸ್ಕರ ಹೋರಾಟ ಮಾಡುವುದಕ್ಕೆ ನೀವೇ ರೈತರ ವಾರಸುದಾರರೇನು ಎಂಬುದಾಗಿ ತಾವು ಪ್ರಶ್ನೆ ಮಾಡಬಹುದು. ತಾವು ಕೂಡ ರೈತರ ವಾರಸುದಾರರಿದ್ದೀರಿ. ಹಿತರಕ್ಷಣೆ ಮಾಡ ಬೇಕಾದವರಿದ್ದೀರಿ.. ರೈತರ ಬಗ್ಗೆ ತಮಗೂ ಅಭಿಮಾನವಿದೆ. ಪ್ರೀತಿ ಇದೆ ಎನ್ನುವುದನ್ನು ನಾನೂ ಒಪ್ಪುತ್ತೇನೆ. ಆದರೆ ನಿಮಗೆ ರೈತರಿಗಿಂತಲೂ ಕೂಡ ದುಡ್ಡಿನ ಬಗ್ಗೆ ಯಥೇಷ್ಟವಾದ ವ್ಯಾಮೋಹವಿದೆ. ದುಡ್ಡಿನಮೇಲೆ ಇರತಕ್ಕ ಇವರ ಅಭಿಮಾನವನ್ನು ರೈತರ ಅಭಿಮಾನಕ್ಕೆ ಹೋಲಿಸಿದರೆ, ಇದು ಅದನ್ನು ಸಂಪೂರ್ಣವಾಗಿ ನುಂಗಿಬಿಡುತ್ತದೆ. ನಮ್ಮ ಸರ್ಕಾರ ದುಡ್ಡಿನ ಸರ್ಕಾರ ಎಂದು ಹೇಳಬೇಕಾಗುತ್ತದೆ. ದುಡ್ಡಿಗಾಗಿ ಇರುವ ಸರ್ಕಾರ, ದುಡ್ಡು ಎಲ್ಲಿ ಸಿಕ್ಕಿದರೆ ಅಲ್ಲಿ ದುಡ್ಡನ್ನು ತೆಗೆಯಬೇಕು ಎಂದು ಹೇಳುವಾಗ ರೈತರ ಮೇಲಿನ ಅಭಿಮಾನ ಹೊರಟು ಹೋಗಿ ಅವರ ಶೋಷಣೆಗೆ ಸರ್ಕಾರ ಸಿದ್ಧವಾಗಿ ಇರಬೇಕಾದರೆ,

ವಿರೋಧ ಪಕ್ಷದವರು ಉಗ್ರ ಹೋರಾಟವನ್ನು ಈ ಸಂದರ್ಭದಲ್ಲಿ ಮಾಡಲೇಬೇಕಾಗುತ್ತದೆ. ಪ್ರಜಾಪ್ರಭುತ್ವದಲ್ಲಿ ನಮ್ಮದು ಬಹುಮತವಿರತಕ್ಕ ಪಕ್ಷ ನಾವು ಬೇಕಾದದ್ದು ಮಾಡಿಕೊಂಡು ಹೋಗುತ್ತೇವೆ ಎಂದು ತಾವು ಹೇಳಬಹುದು. ಆದರೆ ಪ್ರಜಾಪ್ರಭುತ್ವವೆಂದರೆ ಅದಲ್ಲ. ಜನಸಾಮಾನ್ಯರ ಪ್ರತಿಯೊಂದು ಅಭಿಪ್ರಾಯಗಳನ್ನೂ ಗಣನೆಗೆ ತೆಗೆದುಕೊಂಡು ಸರ್ಕಾರ ಒಂದು ಇತ್ಯರ್ಥ ಕೈಗೊಳ್ಳಬೇಕಾಗುತ್ತದೆ. ಇನ್ನು ಕಾನೂನಿಗೆ, ಘಟನೆಗೆ ವಿರೋಧವಾದ ರೀತಿಯಲ್ಲಿ ನಾವು ನಡೆಯುತ್ತೇವೆಂದು ಅವರು ಹೇಳಿದರೆ ಅದನ್ನು ನಾವು ಒಪ್ಪಲಿಕ್ಕೆ ತಯಾರಿಲ್ಲ. ಕೆಲವು ಸಂದರ್ಭಗಳಲ್ಲಿ ಉಗ್ರವಾದ ರೀತಿಯಲ್ಲಿ ಪ್ರತಿಭಟನೆ ಮಾಡುತ್ತಿದ್ದೇವೆಂದು ಹೇಳಿದ್ದಾರೆ. ಅದನ್ನು ಒಪ್ಪಬಹುದು. ಅದಕ್ಕೆ ಕಾರಣವೇನು? ನಿಮಗೆ ಒಳ್ಳೆಯ ಭಾಷೆ, ಯೋಗ್ಯವಾಗಿರತಕ್ಕ ಭಾಷೆ, ಅರ್ಥವಾಗಲಿಲ್ಲವೆಂದರೆ ನಿಮಗೆ ಯಾವ ಭಾಷೆ ಅರ್ಥವಾಗುತ್ತದೆಂದು ನಾನು ಕೇಳಬೇಕಾಗುತ್ತದೆ. ಈ ಬಿಲ್ಲಿನಲ್ಲಿ ಎರಡು ಅಂಶಗಳು ಅಡಕವಾಗಿವೆ, ಒಂದನೆಯದು ರೈತರ ಹಿತರಕ್ಷಣೆ, ಎರಡನೆಯದು ಕಾನೂನಿನಲ್ಲಿ ಅಳವಡಿಸುವ ಕಾನೂನುಬದ್ಧವಾದ ವಿಚಾರ. ದೇಶದಲ್ಲಿ ಶೇಕಡ 80 ರಷ್ಟು ರೈತರಿದ್ದಾರೆ, ರೈತರು ದೇಶದ ಬೆನ್ನು ಮೂಳೆ ಎಂದು ಹೇಳುತ್ತಾರೆ. ಆದರೆ ಅವನಲ್ಲಿ ಮೂಳೆ ಮಾತ್ರ ಇದೆ, ಮಾಂಸವಿಲ್ಲ. ಇದು ಜನಸಾಮಾನ್ಯರಿಗೆ ಸಂಬಂಧಪಟ್ಟ ಪ್ರಶ್ನೆ.

ಅಮೇರಿಕಾ ದೇಶ ಪ್ರಜಾಪ್ರಭುತ್ವದ ತುಟ್ಟತುದಿಯಲ್ಲಿರುವ ದೇಶ. ಆ ದೇಶದಲ್ಲಿ ಶ್ವೇತಭವನದ ಮುಂದೆ ನಾಲ್ಕೈದು ಜನರು ಕಪ್ಪು ಬಾವುಟವನ್ನು ಹಿಡಿದುಕೊಂಡು ಆ ಕಡೆ ಈ ಕಡೆ ಓಡಾಡಿದರೆ ಮಾರನೆಯ ದಿವಸ ಏಕೆ ಓಡಾಡುವುದು, ಏತಕ್ಕೋಸ್ಕರ ಪ್ರತಿಭಟನೆ ಮಾಡುತ್ತಿದ್ದಾರೆ ಎಂಬುದನ್ನು ವಿಚಾರಿಸಿ ಸರಕಾರ ಸೂಕ್ತವಾದ ಪರಿಹಾರ ನೀಡುವುದು. ಅದಕ್ಕೆ ಪ್ರಜಾಪ್ರಭುತ್ವ ಎಂದು ಹೇಳುವುದು ಯೋಗ್ಯವಾಗಿದೆ. ನಮ್ಮ ಪ್ರಜಾಪ್ರಭುತ್ವದಲ್ಲಿ ನಾವೆಷ್ಟು ಸಾರಿ ಪ್ರತಿಭಟನಾ ಸಭೆಗಳನ್ನು ಮಾಡಿಲ್ಲ, ಎಷ್ಟು ಸಾರಿ ಕಪ್ಪು ಬಾವುಟ ಹಿಡಿಯಲಿಲ್ಲ, ಎಷ್ಟು ಸಾರಿ ಠರಾವು ಪಾಸುಮಾಡಿ ಸರಕಾರದಲ್ಲಿ ಮನವಿ ಸಲ್ಲಿಸಿಲ್ಲ. ಇದೆಲ್ಲಾ ಮಾಡಿದ್ದರೂ ಕೂಡ ಏನೂ ಆಗಲಿಲ್ಲ. ಕಡೆಗೆ ಘೇರಾವೋ ಮಾಡಬೇಕಾಗುತ್ತದೆ. ಮಸೂದೆಯನ್ನು ತಂದ ಹಿನ್ನೆಲೆಯನ್ನು ಸ್ವಲ್ಪ ಗಮನಿಸಿದರೆ ಅರ್ಥವಾಗುತ್ತದೆ. ನಾವು ಅರ್ಥವಾಗುವ ಭಾಷೆಯನ್ನು ಕಲಿತಿದ್ದೇವೆ. ಈ ಭೂಕಂದಾಯದ ವಿಚಾರದಲ್ಲಿ 1965ನೆಯ

ಇಸವಿಯಿಂದೀಚೆಗೆ ಸರಕಾರದ ನಿಲುವನ್ನು ನಾವು ಸರಕಾರ ಹೊರಡಿಸಿದ ಸುತ್ತೋಲೆ, ನೋಟೀಫಿಕೇಷನ್ ಆಜ್ಞೆ ಮುಂತಾದವನ್ನು ನೋಡಿದರೆ ಸರಕಾರದ ಮನಸ್ಸಿನಲ್ಲೇನಿದೆಯೆಂಬುದು ಅರ್ಥವಾಗುತ್ತದೆ. ಕೇವಲ ಹಣ ವಸೂಲಿ ಜಾಸ್ತಿ ಮಾಡಿದ್ದಾರೆ, ಅದಕ್ಕಾಗಿ ಭೂ ಕಂದಾಯವನ್ನು ಹೊಸ ದರದಲ್ಲಿ ವಸೂಲುಮಾಡಬೇಕೆಂದು ನೋಟೀಸು ಕೊಟ್ಟಿದ್ದಾರೆ. ಬಲತ್ಕಾರ ಮಾಡಬಾರದೆಂದು ಹೇಳಿದ್ದರೂ ಇಂಥ ಜಿಲ್ಲೆಯಿಂದ ಇಷ್ಟು ಲಕ್ಷ ರೂಪಾಯಿಗಳನ್ನು ಸಂಗ್ರಹ ಮಾಡಬೇಕೆಂದು ಡಿ.ಸಿ. ಅವರಿಗೆ ಆದೇಶ ಆದರೆ ಇದನ್ನು ಡಿ.ಸಿ. ಎಲ್ಲಿಂದ ಸಂಗ್ರಹ ಮಾಡಬೇಕು; ಕಳೆದ ಅಧಿವೇಶನದಲ್ಲೂ ಕೂಡ ಮಾನ್ಯ ರಾಜಸ್ವ ಮಂತ್ರಿಗಳು ವಿಧಾನಮಂಡಲದಲ್ಲಿ ಒಂದು ಹೇಳಿಕೆ ನೀಡುತ್ತಾ ಹೊಸ ದರದಲ್ಲಿ ವಸೂಲು ಮಾಡುವುದಕ್ಕೆ ಕ್ರಮ ಕೈಕೊಳ್ಳುವುದಿಲ್ಲ. ಹಳೆಯ ದರದಲ್ಲೇ ವಸೂಲು ಮಾಡಲು ನಿಲುವು ತಾಳಿದ್ದೇವೆ ಎಂದು ಸ್ಪಷ್ಟಪಡಿಸಿದರು. ಇದು ಪತ್ರಿಕೆಯಲ್ಲಿ ಕೂಡ ಬಂದಿದೆ. ಆ ಪ್ರಕಾರ ಒಂದು ಆಜ್ಞೆ ಹೊರಡಿಸಿದರೆಂದು ನಂಬಿದ್ದೇನೆ. ಹೀಗೆ ನಾಲ್ಕಾರು ಆಜ್ಞೆಗಳನ್ನು ಭೂಕಂದಾಯದ ಸಂಬಂಧದಲ್ಲಿ ಹೊರಡಿಸಲಾಗಿದೆ. ಆದರೆ ಇಲ್ಲಿಯವರಿಗೆ ಸರಿಯಾದ ಆದೇಶವನ್ನು ಅಧಿಕಾರಿಗಳಿಗೆ ಕೊಟ್ಟಿಲ್ಲ. ಭೂ ಕಂದಾಯದ ಸಂಬಂಧವಾಗಿ 1965 ರಿಂದ ಹೊರಡಿಸಿರುವ ಎಲ್ಲಾ ನೋಟಿಫಿಕೇಷನ್ನುಗಳು ನನಗೆ ಸಿಕ್ಕಿಲ್ಲ. ಮೊನ್ನೆ ಶ್ರೀಮಾನ್ ಬಾಲಕೃಷ್ಣ ಗೌಡರ ಕಾಲ್ ಅಟೆನ್‌ಷನ್ ನೋಟಿಸಿನಲ್ಲಿ ಯಾವ ಯಾವ ನೋಟಿಫಿಕೇಷನ್ ನಮೂದು ಮಾಡಲಾಗಿದೆಯೋ ಅದನ್ನೆಲ್ಲಾ ಕೊಟ್ಟರೆ ನಾನು ಚಿರಋಣಿಯಾಗಿರುವೆ. ಏಕೆಂದರೆ ಕಳೆದ ವಿಧಾನಮಂಡಲದ ಸಭೆಯಲ್ಲಿ ಹೇಳಿಕೆಯ ವಿರುದ್ಧ ನೋಟಿಫಿಕೇಷನ್ ಹೊರಟಿದೆ. ವಿಧಾನಮಂಡಲದಲ್ಲಿ ಕೊಟ್ಟ ಹೇಳಿಕೆಯಲ್ಲಿ ಯಾವ ಭೂಮಿ ಎಂದು ಭೇದಭಾವನೆ ಇಲ್ಲ. ಎಲ್ಲಾ ಭೂಮಿಗಳಿಗೂ ಅನ್ವಯವಾಗುವ ನೀತಿಯನ್ನು ಅನುಸರಿಸಲಾಗುವುದು. ಎಂದು ಹೇಳಿ ನೋಟಿಫಿಕೇಷನಿನಲ್ಲಿ ಕೇವಲ ನೀರಾವರಿ ವ್ಯವಸಾಯಕ್ಕೆ ಮಾತ್ರ ಅನ್ವಯಿಸುವುದು. ಮಳೆಯ ನೀರಿನಿಂದ ಬೆಳೆಯುವ ಭೂಮಿಗೆ ಅನ್ವಯಿಸುವುದಿಲ್ಲ ಎಂದು ತಿಳಿಸಿದ್ದಾರೆ. ಇದರ ಸಂಬಂಧ ನೀವು ವಿಧಾನಮಂಡಲದಲ್ಲಿ ಹೇಳುವುದೊಂದು ಪ್ರತ್ಯಕ್ಷ ಮಾಡುವುದೊಂದು ನಡೆಯುತ್ತಾ ಇದೆ. ಇದು ವಿಧಾನಮಂಡಲದ ಘನತೆಗೆ ಧಕ್ಕೆ ತರುವುದು. ಇದರ ವಿಚಾರದಲ್ಲಿ ಮಂತ್ರಿಗಳಿಗೆ ಪತ್ರ ಬರೆದು ಸುಮಾರು 3 ತಿಂಗಳಾಗಿದೆ. ಇನ್ನೊಂದು ನೋಟಿಫಿಕೇಷನ್ ಸೆಕ್ರೆಟೇರಿಯಟ್‌ನಿಂದ ಹೊರಡಿಸಲಾಗಿದೆ, ಅದು ನನಗೆ ಅರ್ಥವಾಗುವುದಿಲ್ಲ. ನೇರ

ಮಾರ್ಗದಲ್ಲಿ ಸರಳವಾದ ಭಾಷೆಯಲ್ಲಿ, ಸಿಂಪಲ್ ಇಂಗ್ಲೀಷಿನಲ್ಲಿ ಅರ್ಥವಾಗುವ ಹಾಗೆ ಏಕೆ ಬರೆಯಬಾರದು? ನೋಟೀಫಿಕೇಷನ್ನಿನ ಅರ್ಥವೇನು ಎಂದು ತಿಳಿಯಬೇಕಾದರೆ ಅದನ್ನು ಹೊರಡಿಸಿದ, ಬರೆದ ಸೆಕ್ರೆಟರಿಯವರನ್ನೇ ಕೇಳಬೇಕು. ಬೇರೆಯವರಿಗೆ ಅರ್ಥವಾಗುವುದಿಲ್ಲ. ಈ ಪ್ರಕಾರವಾಗಿ ಹಂತಹಂತವಾಗಿ ಒಂದೊಂದು ನೋಟೀಫಿಕೇಶನ್ ಹೊರಡಿಸುತ್ತಾ ಬಂದಿದ್ದಾರೆ. ರೈತ ಪ್ರಾಮಾಣಿಕ ತನದಿಂದ ತನ್ನ ತಲೆಯ ಮೇಲಿರುವ ತೆರಿಗೆಯನ್ನು ಕೊಡುತ್ತಿದ್ದಾನೆ. ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ವಿಚಾರ ನಾನು ಹೇಳುವುದು, ಬೇರೆ ಕಡೆ ವಿಚಾರ ನನಗೆ ಗೊತ್ತಿಲ್ಲ. 1965ರ ಮೊದಲು ಭೂಕಂದಾಯದ ತಗಾದೆ ನೋಟೀಸು ರೈತರಿಗೆ ಬಂದರೆ ಅದನ್ನು ಅವಮಾನವೆಂದು ಭಾವಿಸುತ್ತಿದ್ದರು. ಅದು ಬರುವುದಕ್ಕೆ ಮೊದಲೇ ಕಂದಾಯ ಕಟ್ಟುತ್ತಿದ್ದರು. ಅಲ್ಲಿ ಶೇಕಡ 95 ರಷ್ಟು ಪ್ರತಿ ವರ್ಷ ವಸೂಲಾಗುತ್ತಿತ್ತು. ಆದರೆ 1965 ರಿಂದೀಚೆಗೆ ಈ ಎರಡು ಜಿಲ್ಲೆಗಳಲ್ಲೂ ಭೂಕಂದಾಯ ಸರಿಯಾಗಿ ವಸೂಲಾಗುತ್ತಿಲ್ಲ. ಈವರೆಗೆ ಪ್ರಾಮಾಣಿಕನಾಗಿದ್ದ ರೈತ ಅಪ್ರಾಮಾಣಿಕನಾದ. ಏಕೆ? ಸರ್ಕಾರದ ಧೋರಣೆ, ತತ್ವ ಇದಕ್ಕೆ ಕಾರಣ. ನೀವು 1967ರ ಚುನಾವಣೆಗೆ ಮೊದಲು ಭೂ ಕಂದಾಯವನ್ನು ಈಗಿರುವ ರೀತಿಯಲ್ಲಿ ತೆಗೆಯುತ್ತೇವೆ ಎಂದು ಗಂಭೀರವಾದ ಒಂದು ಹೇಳಿಕೆ ಕೊಟ್ಟಿರಿ. ಅದನ್ನು ಕೊಟ್ಟ ಮೇಲೆ ಚುನಾವಣೆ ಬಂತು. ಅದು ಬಂದಾಗ ಕಾಂಗ್ರೆಸ್ ಪಕ್ಷದವರು ಅಲ್ಲಲ್ಲಿ ಚುನಾವಣಾ ಹೋರಾಟ ಮಾಡುವಾಗ ಕಂದಾಯವನ್ನು ರದ್ದು ಮಾಡುತ್ತೇವೆ. ಏರಿಸುವ ಪ್ರಶ್ನೆಯಿಲ್ಲ ಎಂದು ಹೇಳಿದರು. ಕಂದಾಯ ಹೋಗುತ್ತದೆ ಎಂದು ತಿಳಿಯುವಂತೆ ಕಾಂಗ್ರೆಸ್ ಪಕ್ಷ ಹಸ್ತ ಪತ್ರಿಕೆ ಹಂಚಿ ಚುನಾವಣೆ ಪ್ರಚಾರ ಮಾಡಿತು. ಅಲ್ಲದೆ ಕಂದಾಯ ವಸೂಲು ಮಾಡಬೇಡಿ ಎಂದು ಅಧಿಕಾರಿಗಳಿಗೆ ಹೇಳಿದಿರಿ. ರೈತನ ಮೇಲಿನ ಪ್ರೇಮಕ್ಕಿಂತ, ದುಡ್ಡಿನ ಮೇಲಿನ ಪ್ರೇಮಕ್ಕಿಂತ ಓಟು ಹೋಗುತ್ತದೆ ಅಂತ ಹೇಳಿ ಆ ಕಾಲದಲ್ಲಿ ಅದರ ವಸೂಲಾತಿಗೆ ಹೋಗಲಿಲ್ಲ. ಭೂಕಂದಾಯ ಎಲ್ಲಾ ಒಂದೇ ಸಾರಿ ಕೊಡಲಿಕ್ಕೆ ಆಗುವುದಿಲ್ಲ. ಈಗ ನಾವು ಕೊಡುವುದನ್ನು ತೆಗೆದುಕೊಳ್ಳಿರಿ ಅಂದರೆ ರೆವಿನ್ಯೂ ಅಧಿಕಾರಿಗಳು ಅದನ್ನು ತೆಗೆದುಕೊಳ್ಳದೆ ವಾಪಸ್ಸು ಕಳುಹಿಸಿದರು. ಕಟ್ಟುವುದಿದ್ದರೆ ಪೂರಾ ಕಟ್ಟಬೇಕು ಇಲ್ಲದೇ ಇದ್ದರೆ ತೆಗೆದುಕೊಳ್ಳುವುದಿಲ್ಲ ಎಂದ ಮೇಲೆ ಜೇಬಿನಲ್ಲಿ ಹಾಕಿಕೊಂಡು ಕಟ್ಟಲಿಕ್ಕೆ ಹೋದ ಕಂದಾಯನ್ನು ಕಟ್ಟಲಿಲ್ಲ ವಾಪಸು ಬಂದರು. ಹಳೇ ಕಂದಾಯ ವಸೂಲು ಮಾಡುತ್ತೇವೆ, ಹೊಸ ಕಂದಾಯ ವಸೂಲು ಮಾಡುವುದಿಲ್ಲ. ಎಂದು ಹೇಳಿಕೊಟ್ಟ ಭರವಸೆಗೆ ವ್ಯತಿರಿಕ್ತವಾಗಿ ನಡೆದುಕೊಂಡು,

ಸತ್ಯಕ್ಕೆ ದೂರವಾದ ಮಾತುಗಳನ್ನು ರೈತರ ಮುಂದೆ ಇಟ್ಟು 1965 ರಿಂದ 1969ರ ವರೆಗೂ ಭೂಕಂದಯನ್ನು ಒಂದೇ ಸಾರಿ ಹೊಸ ದರದಂತೆ ಕಟ್ಟಬೇಕೆಂದು ಬಲತ್ಕಾರಪಡಿಸಿದ್ದರ ಪರಿಣಾಮವಾಗಿ ರೈತರಲ್ಲಿ ಹಾಹಾಕಾರವುಂಟಾಯಿತು. ಇದು ನಿಮಗೆ ರೈತರ ಮೇಲಿನ ಪ್ರೇಮ ಅಲ್ಲ, ದುಡ್ಡಿನ ಮೇಲೆ ಇರತಕ್ಕ ಪ್ರೇಮ ಅಷ್ಟೆ. 1964ನೇ ಇಸವಿಯಲ್ಲಿ ಲ್ಯಾಂಡ್ ರೆವಿನ್ಯೂ ಆ್ಯಕ್ಟ್ ಜಾರಿಗೆ ತಂದಿರಿ ಅದರ ಪ್ರಕಾರ ನಿಯೋಜನೆ ಮಾಡಿದಂತಹ ಭೂಕಂದಾಯವನ್ನು ರೈತ ಕೊಡಬೇಕಾಗುತ್ತದೆ. ಮತ್ತು ರೂಲ್ 19, 20, 21, 28, 29, 30ರ ಪ್ರಕಾರ ನಮೂದನೆ ಮಾಡಿರತಕ್ಕ ರೆವಿನ್ಯೂ ಇಲಾಖೆಯ ಕೆಲವೊಂದು ದಾಖಲೆಗಳೂ ಕೂಡ ಬರೆಯಬೇಕಾಗುತ್ತದೆ. ನಿಯೋಜನೆ ಮಾಡಿದ ಭೂಕಂದಾಯವನ್ನು ವಸೂಲು ಮಾಡಲಿಕ್ಕೆ ಬಹಳ ಆಗ್ರಹದಿಂದ ಹೊರಟಿರಿ, ಆದರೆ 19, 20, 21, 28,29, 30ನೇ ರೂಲ್ ಪ್ರಕಾರ ರೈತನ ಭೂಮಿಗೆ ಸಂಬಂಧಪಟ್ಟ ಯಾವ ದಾಖಲೆಯನ್ನು ಬರೆಯಬೇಕೆಂದು ಇದೆ ಅದನ್ನು ಬರೆದಿದ್ದೀರಾ? ಬರೆಯಲಿಕ್ಕೆ ಪ್ರಯತ್ನ ಮಾಡಿದ್ದೀರಾ? ಅದು ಯಾವುದನ್ನೂ ಮಾಡದೆ ದುಡ್ಡು ವಸೂಲು ಮಾಡುವುದು ಮಾತ್ರ ಆಗ್ರಹ ಇದೆ. ಮೂರು ವರ್ಷದಿಂದ ಅದನ್ನು ಏಕೆ ಮಾಡಲಿಲ್ಲ? ದಾಖಲೆಗಳನ್ನು ಏಕೆ ಬರೆಯಲಿಲ್ಲ? ಈ ದಿವಸ ಜಮಾಬಂದಿ ನಕಲು ತೆಗೆದುಕೊಂಡರೆ ಅದರಲ್ಲಿ ಒಂದು ಎಕರೆ ಕಂದಾಯದ ದರ ಅಂತ ಒಂದು ಕಲಂ ಇದೆ. ಎರಡನೆಯದರಲ್ಲಿ 'ಕೊಡತಕ್ಕ ಕಂದಾಯ' ಅಂತ ಇದೆ. ತಕರಾರು ನೋಟೀಸ್‌ನಲ್ಲಿ ಹಳೇ ದರ ಏನಿತ್ತೋ ಅದನ್ನೇ ಇವತ್ತೂ ಬರೆದು ಕೊಡತಕ್ಕದ್ದು ಇದೆ. ನಾವು ಕೋರ್ಟಿನಲ್ಲಿ ದಾವ ದಾಖಲು ಮಾಡಿದರೆ ಅದಕ್ಕೆ 25–30 ರಷ್ಟು ಕೋರ್ಟು ಫೀಜು ಕೊಡಬೇಕಾಗುತ್ತದೆ. ಈ ದಿವಸಕ್ಕೂ ಕೂಡ ಜವಾಬಂದಿ ನಕಲು ಆಧಾರದ ಮೇಲೆ ಈ ಭೂಕಂದಾಯವನ್ನು ಲೆಕ್ಕಾಚಾರ ಮಾಡಿ ಕೋರ್ಟು ಫೀಜು ಕೊಡುವುದು ಇದೆ. ಎಂದ ಮೇಲೆ ನಿಮಗೆ ಭೂಕಂದಾಯ ವಸೂಲು ಮಾಡುವುದು ಒಂದಲ್ಲದೇ ಬೇರೆ ಯಾವುದರ ಕಡೆಗೂ ಗಮನ ಇಲ್ಲ. ಯಾರು ಏನೇ ಕೆಲಸ ಆಗಬೇಕೆಂದು ಹೇಳಲಿ, ಎಲೆಕ್ಟ್ರಿಸಿಟಿ ಬೋರ್ಡಿನ ಪರಿಸ್ಥಿತಿ ಹೀಗೇಕೆ ಆಯಿತು ಅಂತ ಅನ್ನಲಿ ದುಡ್ಡಿಲ್ಲ. ಇರಿಗೇಷನ್ ಪ್ರಾಜೇಕ್ಟ್‌ಗಳನ್ನು ಏಕೆ ಮಾಡಲಿಲ್ಲ; ದುಡ್ಡಿಲ್ಲ. ಪ್ರತಿಯೊಂದಕ್ಕೂ ದುಡ್ಡಿಲ್ಲ, ದುಡ್ಡಿಲ್ಲ, ಇದು ಇಷ್ಟೊಂದು ಭಾರಿ ದೊಡ್ಡ ದೇಶ, ಜಲಭರಿತವಾದ, ಫಲಭರಿತರಾದ ಅನ್ನಪೂರ್ಣ, ಸುವರ್ಣಭೂಮಿ ಅಂತ ಅನ್ನಿಸಿಕೊಂಡಂಥ ಈ ದೇಶ ನಿಮ್ಮ ಕೈಗೆ ಸಿಕ್ಕಿಯೂ ದುಡ್ಡಿಲ್ಲ. 'ದುಡ್ಡಿಲ್ಲ ದುಡ್ಡಿಲ್ಲ ಎಂದಮೇಲೆ ಅದಕ್ಕೇ

ಒಂದು ಹೊಸ ಉದ್ಯಮ ಈಗ ಶುರುವಾಗಿದೆ' ಅದರ ತಯಾರಿಸುವ ಉದ್ಯಮ ಅಂತ, ದುಡ್ಡಿಲ್ಲದ ಮೇಲೆ ಜನ ಏನು ಮಾಡುತ್ತಾರೆ? ದುಡ್ಡಿಲ್ಲ ದುಡ್ಡಿಲ್ಲ ಅಂತ ಹೇಳುವ ನಿಮಗೆ ದುಡ್ಡು ಮಾಡಿ ಕೊಟ್ಟರೆ ಆತನನ್ನು ಮಾನ್ಯ ಮಾಡಿ ಭಾರತ ರತ್ನ ಅಂತ ಬಿರುದು ಕೊಡುವುದು ಬಿಟ್ಟು ಜೈಲಿನಲ್ಲಿ ಹಾಕುತ್ತೀರಿ. ಇದು ಯಾವ ನ್ಯಾಯ? ಯಾವ ಆಡಳಿತ ಪಕ್ಷಕ್ಕಾದರೂ ಸಂಪನ್ಮೂಲ ಅಗತ್ಯ. 10-15 ಕಾರ್ಖಾನೆಗಳಲ್ಲಿ ಲಕ್ಷಾಂತರ ರೂಪಾಯಿ ನಷ್ಟವಾಗಿದೆ ಎಂಬುದನ್ನು ಮಾನ್ಯ ಅರ್ಥ ಮಂತ್ರಿಗಳು ತಮ್ಮ ಬಡ್ಜೆಟ್ ಭಾಷಣದಲ್ಲಿ ಹೇಳಿದರು. ಯಾವ ಒಂದು ಯೋಜನೆ ತೆಗೆದುಕೊಳ್ಳಲಿ ಕೋಟ್ಯಾಂತರ ರೂಪಾಯಿ ನಷ್ಟ. ದುಡ್ಡೆಲ್ಲಾ ಹೋಗುತ್ತಿದೆ. ಈ ಮೂರು ವರ್ಷದಲ್ಲಿ ತಾವು ಅನುಸರಿಸಿದ ತಪ್ಪು ಧೋರಣೆಯ ಪರಿಣಾಮ, ತಪ್ಪು ನೀತಿಯ ಪರಿಣಾಮ ರೈತ ಇವತ್ತು ಕಂದಾಯವನ್ನು ಕೊಡದೇ ಬಾಕಿದಾರನಾಗಿದ್ದಾನೆ. ಸರ್ಕಾರದ ತಪ್ಪಿನಿಂದ ಬಾಕಿದಾರನಾಗಿರುವುದರಿಂದ ಅದನ್ನೂ ಸಹ ಗಮನಿಸದೆ ಅವನ ತಲೆ ಒಡೆಯುವುದಕ್ಕೆ ಇವತ್ತು ಹೊರಟಿದ್ದೀರಿ. ದುಡ್ಡಿನ ಮೇಲೆ ಹೆಚ್ಚಿನ ವ್ಯಾಮೋಹವಿರುವುದರಿಂದ ರೈತರ ಹಿತ ರಕ್ಷಣೆಯ ಬಗ್ಗೆ ತಮ್ಮಲ್ಲಿ ಮನಸ್ಸುಂಟಾಗದೆ ಇದ್ದುದರ ಪರಿಣಾಮವಾಗಿ ವಿರೋಧ ಪಕ್ಷದವರು ಉಗ್ರ ರೀತಿಯ ಹೋರಾಟ ಈ ಸಂದರ್ಭದಲ್ಲಿ ಮಾಡಬೇಕಾಗಿ ಬರುತ್ತದೆ. ರೈತರನ್ನು ಈ ರೀತಿ ವಂಚಿಸಿ, ತಮ್ಮನ್ನು ಅಸಹಾಯಕರನ್ನಾಗಿ ಮತ್ತು ಅಪ್ರಾಮಾಣಿಕರನ್ನಾಗಿ ಮಾಡಿ ಬಿಟ್ಟು ಇವತ್ತು ಭೂಕಂದಾಯದ ವಸೂಲಾತಿಯ ಪ್ರಸಂಗದಲ್ಲಿ ಅವರಿಗೆ ವಿಪರೀತ ಕಿರುಕುಳಗಳಾಗುವುದಕ್ಕೆ ಅವಕಾಶ ಮಾಡಿದ್ದೀರಿ. ಆತ ದಿನ ನಿತ್ಯ ಹೊಟ್ಟೆಗೆ ಇಲ್ಲದೆ ಪರಿತಪ್ಪಿಸಬೇಕಾದ ಸಂದರ್ಭವುಂಟಾಗಿದೆ. ಇದು ನನ್ನ ಗಮನಕ್ಕೆ ಬಂದಿದೆ. ಮನೆಯಲ್ಲಿ ಮತ್ತೆ ಬೇರೆನೂ ಅಡವು ಇಡಲಿಕ್ಕೆ ಇಲ್ಲದೆ ಮನೆಯಲ್ಲಿ ಇದ್ದ ಹೆಂಗಸರು ತಮ್ಮ ಕೊರಳಿನಲ್ಲಿ ಇದ್ದ ತಾಳಿಯನ್ನು ಬಿಚ್ಚಿಕೊಟ್ಟಂಥ ಸಂದರ್ಭ ನಾನು ನೋಡಿದ್ದೇನೆ. ಅಂತಹ ಒಂದು ಪರಿಸ್ಥಿತಿ ಕಾಲದಲ್ಲೂ ಕೂಡ ಬಲಾತ್ಕಾರವಾಗಿ ವಸೂಲು ಮಾಡಿದ ಸನ್ನಿವೇಶವನ್ನು ನಮ್ಮ ಕೊಡಗಿನಲ್ಲಿ ನೋಡಿದ್ದೇವೆ. ನಿಮ್ಮ ಸರ್ಕಾರಿ ಉದ್ಯೋಗಸ್ಥರಿಗೆ ಕಂದಾಯ ವಸೂಲಿ ಮಾಡುವುದು, ಲೆವಿ ವಸೂಲು ಮಾಡುವುದು ಬಿಟ್ಟರೆ ಬೇರೆ ಯಾವ ಕೆಲಸವೂ ಇಲ್ಲ. ತಹಸೀಲ್ದಾರರ ಆಫೀಸಿನಲ್ಲಿ ಅನೇಕ ರೀತಿಯ ಕೆಲಸ ಕಾರ್ಯಗಳು ಆಗಬೇಕಾಗಿರುತ್ತದೆ, ಲೆವಿ ಕ್ಲಿಯರೆನ್ಸ್ ಸರ್ಟಿಫಿಕೇಟ್ ಬೇಕಾಗಿರುತ್ತದೆ, ಅದು ಯಾವುದಕ್ಕೂ ಕೂಡ ಅಲ್ಲಿ ಅವಕಾಶವೇ ಇಲ್ಲ. ಯಾವಾಗ ಕೇಳಿದರೂ ಭೂಕಂದಾಯದ ವಸೂಲಿಗೆ ಹೋಗಿದ್ದಾರೆ ಅಂತ ಹೇಳುತ್ತಾರೆ. ಇದು ಒಂದೇ

ಅವರು ಹಗಲು ಹೊತ್ತಿನಲ್ಲಿ ಮಾಡುವ ಕೆಲಸ. ಹಗಲಿನಲ್ಲಿ ಹೊತ್ತಿಲ್ಲದೇ ಇರುವುದರಿಂದ ನಮ್ಮ ವೀರಾಜಪೇಟೆ ತಹಶೀಲ್ದಾರರ ಆಫೀಸು ರಾತ್ರಿ ಹೊತ್ತಿನಲ್ಲೇ ಕೆಲಸ ಮಾಡುತ್ತದೆ. ಹಗಲು ಅಲ್ಲಿ ಯಾರೂ ಕಾಣುವುದಿಲ್ಲ. ಕೊಡಗಿನ ರೈತ ಭೂಕಂದಾಯವನ್ನು ಕೊಟ್ಟಿದ್ದಾನೆ, ಕೊಟ್ಟಷ್ಟು ಕಂದಾಯ ಪೂರ್ಣವಾಗಿ ಸರ್ಕಾರದ ಖಜಾನೆಗೆ ಸಲ್ಲಿಕೆಯಾಗಲಿಲ್ಲ ಅಂತ ಧೃಢವಾಗಿ ಹೇಳುತ್ತೇನೆ. ಕಳೆದ ವರ್ಷದ ಭೂಕಂದಾಯವನ್ನು ಪೂರ್ಣಪಾವತಿ ಆಗಿದೆ ಎನ್ನುವುದಕ್ಕೆ ಜಮೀನ್ದಾರನು ಕಂದಾಯದ ರಶೀದಿಯನ್ನು ತೋರಿಸಬೇಕು. ಹಾಗೆ ತೋರಿಸುವುದಕ್ಕೆ ಆ ರಶೀದಿ ಸಿಕ್ಕದಿದ್ದರೆ ಮತ್ತೆ ಆ ಜಮೀನ್ದಾರ ಕಂದಾಯವನ್ನು ಕೊಡಲೇಬೇಕಾಗುವುದು. ಉದಾಹರಣೆಗೆ: ಒಬ್ಬ ಭೂಮಾಲೀಕ 1966ನೆಯ ಸಾಲಿಗೆ ಕಂದಾಯವನ್ನು ಪೂರ್ತಿಯಾಗಿ ಕಟ್ಟಿದ್ದರೂ ಆಕಸ್ಮಿಕವಾಗಿ ಆ ಕಂದಾಯದ ರಶೀದಿ ಗೈರುವಿಲೆಯಾಗಿದ್ದರೆ ಅಥವಾ ಆ ರಶೀದಿ ಕಳೆದುಹೋಗಿದ್ದರೆ, ಮತ್ತೆ 1966ಕ್ಕೆ ಕಂದಾಯವನ್ನು ಕಟ್ಟಲೇಬೇಕಾಗುವುದು. ಆತನಿಗೆ ಮತ್ತೆ ಕಂದಾಯ ಬಾಕಿ ನೋಟೀಸನ್ನು ಜಾರಿಮಾಡಲಾಗುವುದು. ಇಂಥ ಸಂದರ್ಭಗಳನ್ನೇ ಉಪಯೋಗಿಸಿಕೊಂಡು ಒಬ್ಬ ರೆವಿನ್ಯೂ ಇನ್‌ಸ್ಪೆಕ್ಟರ್ 5–6 ಸಾವಿರ ರೂಪಾಯಿಗಳವರೆಗೂ ಸಂಪಾದನೆ ಮಾಡುತ್ತಿದ್ದಾನೆ. ಹೀಗೆ ಕಂದಾಯದ ಬಾಕಿ ವಸೂಲಿಯಲ್ಲಿ ಒಬ್ಬ ರೆವಿನ್ಯೂ ಇನ್‌ಸ್ಪೆಕ್ಟರಿಗೆ ಅವನ ಹಿತ್ತಲಬಾಗಿಲಿನಿಂದ ಅವನಿಗೆ ಬರುತ್ತಿರುವ ವರಮಾನ ಒಬ್ಬ ಮಂತ್ರಿಗೆ ಸಾಮಾನ್ಯವಾಗಿ ಮುಂದಿನ ಬಾಗಿಲಿನಿಂದ ಬರತಕ್ಕ ಆದಾಯಕ್ಕಿಂತಲೂ ಜಾಸ್ತಿಯಾಗಿರುತ್ತದೆ. ಆದರೆ ನಾನು ಇಲ್ಲಿಯವರೆಗೂ ಯಾವ ಮಂತ್ರಿಗಳ ಮನೆಗೂ ಹೋಗಲಿಲ್ಲ. ಆದ್ದರಿಂದ ಅವರಿಗೂ ಕೂಡ ಆ ಹಿಂದಿನ ಬಾಗಿಲು ಕಡೆಯಿಂದ ಆದಾಯ ಬರುತ್ತದೆಯೋ ಇಲ್ಲವೋ ಅದು ನನಗೆ ಗೊತ್ತಿಲ್ಲ. ಉಮಾಗೋಲ್ಡ್ ಮತ್ತು ಸುದರ್ಶನ ಚಿಟ್‌ಫಂಡ್ ಇತ್ಯಾದಿಗಳಿಗೆಲ್ಲಾ ಪ್ರತಿ ತಿಂಗಳಲ್ಲೂ ಆ ರೆವಿನ್ಯೂ ಇನ್‌ಸ್ಪೆಕ್ಟರ್ 10 ಸಾವಿರ 15 ಸಾವಿರ ರೂಪಾಯಿಗಳ ಲಾಟ್ರಿಗೆ ಸೇರಿಕೊಂಡು ತಿಂಗಳ 200–250 ರೂಪಾಯಿಗಳನ್ನು ಕಟ್ಟಲಿಕ್ಕೆ ಆತನಿಗೆ ಹಣ ಎಲ್ಲಿಂದ ಬರುತ್ತೆ? ಒಬ್ಬ ರೆವಿನ್ಯೂ ಇನ್‌ಸ್ಪೆಕ್ಟರಿಗೆ ತಿಂಗಳಿಗೆ ಎಷ್ಟು ಸಂಬಳ ಬರುತ್ತೆ ಅನ್ನುವುದು ಎಲ್ಲರಿಗೂ ಗೊತ್ತಿದೆ. ಆದರೂ ಆತನಿಗೆ ತಿಂಗಳು ಪ್ರತಿ ಆ ಚಿಟ್ ಫಂಡಿಗೆ 200–250 ರೂಪಾಯಿಗಳನ್ನು ಕಟ್ಟುವುದಕ್ಕೆ ಹಣ ಎಲ್ಲಿಂದ ಬರಬೇಕು? ಆ ರೆವಿನ್ಯೂ ಇನ್‌ಸ್ಪೆಕ್ಟರಿಗೆ ಈ ದಿವಸ ಈ ಭೂಕಂದಾಯದ ಹಳೇ ಬಾಕಿಯನ್ನು ವಸೂಲ್ಮಾಡುವ ಕಾರ್ಯ ಒಂದನ್ನು ಬಿಟ್ಟರೆ ಬೇರೆ ಕೆಲಸವೇ ಇಲ್ಲ. ಒಟ್ಟಿನಲ್ಲಿ ರೈತನಿಗೆ

ನಾನಾ ಮುಖವಾಗಿ ಕಿರುಕುಳ. ಹೀಗಾಗಿ ರೈತ ಕಂಗಾಲಾಗಿದ್ದಾನೆ. ಬಹಳ ನೋವನ್ನು ಅನುಭವಿಸುತ್ತಿದ್ದಾನೆ. ಹಾಗೆ ಸಂಕಟದಿಂದ ನರಳುತ್ತಿರುವ ಮನುಷ್ಯನ ಮೇಲೆ ಮತ್ತಷ್ಟು ಕಂದಾಯನ್ನು ಜಾಸ್ತಿ ಮಾಡಿ ಅದನ್ನು ಆತ ಕೊಡಲಿಕ್ಕೆ ಶಕ್ತಿಯಿಲ್ಲ ಎಂದರೆ ಅವನನ್ನು ಗಲ್ಲಿಗೆ ಹಾಕಬೇಕು ಎನ್ನುವುದು ಯಾವ ನ್ಯಾಯ? ಈ ಅನೇಕ ಕಾರಣದಿಂದ ಅನೇಕರು ಈ ದಿವಸ ಇಲ್ಲಿ ಆ ರೈತನ ಮೇಲೆ ಇನ್ನು ಹೆಚ್ಚಿನ ತೆರಿಗೆಗಳನ್ನು ಹೇರಬೇಡಿ, ಆ ಹಳೆಯ ಕಂದಾಯನ್ನೇ ಮುಂದುವರಿಸಿ ಎಂದು ಹೇಳುತ್ತಿದ್ದಾರೆ. ಇನ್ನು ಕೆಲವರು ಹಳೇ ಕಂದಾಯ ಏನಿತ್ತು. ಅದರ ಎರಡರಷ್ಟನ್ನು ಕೊಡಬೇಕಾದ್ದು ನ್ಯಾಯ ಎಂದು ವಾದ ಮಾಡುತ್ತಿದ್ದಾರೆ ಇನ್ನು ಕೆಲವರು ಈ ಭೂ ಕಂದಾಯವನ್ನೇ ಸಂಪೂರ್ಣವಾಗಿ ರದ್ದು ಮಾಡಿ ಎಂದು ವಾದಮಾಡುತ್ತಿದ್ದಾರೆ. ಹೀಗೆ ನಾನಾ ರೀತಿಯಲ್ಲಿ ವಾದಗಳು ನಡೆಯುತ್ತಿರುವಾಗ ಎಲ್ಲ ವಿರೋಧಪಕ್ಷಗಳವರೂ ಈ ದಿನ ಸರ್ಕಾರವನ್ನು ಒತ್ತಾಯ ಮಾಡಿ ಹಳೇ ಕಂದಾಯವನ್ನೇ ಮುಂದುವರಿಸಬೇಕೆಂದೂ ಮತ್ತು ಕಂದಾಯದ ಬಾಕಿಯನ್ನು ಒಂದೇ ಗಂಟಿನಲ್ಲಿ ವಸೂಲ್ಮಾಡುವುದಕ್ಕೆ ಬದಲಾಗಿ ಅದನ್ನು ಕಂತುಗಳ ಮೇಲೆ ವಸೂಲು ಮಾಡಬೇಕೆಂದು ಹೇಳುತ್ತಿದ್ದಾರೆ. ಆದರೆ ಮಾನ್ಯ ರೆವಿನ್ಯೂ ಮಂತ್ರಿಗಳು ಸರ್ವರಿಗೂ ಒಂದು ಅನುಕೂಲವಾಗತಕ್ಕ ಹೇಳಿಕೆಯನ್ನು ಕೊಡದೆ ಇದ್ದ ಕಾರಣ ಕೆಳಮನೆಯಲ್ಲಿ ವಿರೋಧ ಪಕ್ಷಗಳವರು ಧರಣೀ ಮುಷ್ಕರವನ್ನು ಹೂಡಬೇಕಾದ ಪ್ರಸಂಗ ಕೂಡ ಉಂಟಾಯಿತು. ಆ ಒಂದು ಸಂದಿಗ್ಧ ಸಮಯ ಉಂಟಾದಾಗ ಸರ್ಕಾರದವರು ಈ ಭೂಕಂದಾಯದ ಮಸೂದೆಯ ಬಗ್ಗೆ ಒಂದು ಕಾಂಪ್ರಹೆನ್ಸೀವ್ ಬಿಲ್ಲನ್ನು ತರುವುದಾಗಿಯೂ ಮತ್ತು ತತ್ಸಂಬಂಧದಲ್ಲಿ ರೈತನಿಗಾಗಿರತಕ್ಕ ಅನ್ಯಾಯವನ್ನು ತಪ್ಪಿಸುವುದಕ್ಕೆ ಪ್ರಯತ್ನ ಮಾಡುವುದಾಗಿಯೂ ಶಾಸನಸಭಾ ಸದಸ್ಯರಿಗೆ ಒಂದು ಭರವಸೆಯನ್ನು ಕೊಟ್ಟಿದ್ದರು. ಅದರ ಪರಿಣಾಮದಿಂದ ಈ ದಿವಸ ಈ ತಿದ್ದುಪಡಿಯ ಶಾಸನ ನಮ್ಮ ಮುಂದೆ ಬಂದಿದೆ. ಆದರೆ ಈ ದಿವಸ ರೈತರಿಗೆ ಬೇಕಾದದ್ದು ಈ ತಿದ್ದುಪಡಿಯಲ್ಲ. ಅವನು ಕೇಳತಕ್ಕ ಒಂದು ಮೂಲಭೂತ ಪ್ರಶ್ನೆಯೇನೆಂದರೆ ಅದು ಸರ್ಕಾರದವರು ಈ ಹಿಂದೆ ನಡೆಸಿರತಕ್ಕ ಸರ್ವೆ ಅಂಡ್ ಸೆಟಲ್‌ಮೆಂಟುಗಳಲ್ಲಿ ತಪ್ಪಾಗಿದೆ. ಅದನ್ನು ಸರಿಪಡಿಸಬೇಕು ಅನ್ನುವುದಲ್ಲ. ರೈತ ಕೇಳುತ್ತಿರುವುದು ಸರ್ಕಾರದವರು ಹಾಲಿ ಏನು ಒಂದು ಕಂದಾಯವನ್ನು ಹೆಚ್ಚಿಸಿದ್ದಾರೆ, ಅದನ್ನು ಕೊಡುವುದಕ್ಕಾಗುವುದಿಲ್ಲ. ಅಷ್ಟು ಕಂದಾಯದ ಆ ಭಾರವನ್ನು ಹೊರತಕ್ಕ ಶಕ್ತಿ ನಮ್ಮ ತಲೆಯಲ್ಲಿ ಇಲ್ಲ. ಆ ಕಂದಾಯದ ಭಾರವನ್ನು ನಾವು ಹೊತ್ತುದೇ ಆದರೆ

ನಮ್ಮ ಬೆನ್ನು ಮೂಳೆ ಮುರಿದುಹೋಗುತ್ತದೆ. ಆದಕಾರಣ ಸರ್ಕಾರದವರು ಹೊಸದಾಗಿ ಏರಿಸಿರತಕ್ಕ ಕಂದಾಯದ ಹೊರೆಯನ್ನು ತಗ್ಗಿಸಬೇಕು ಅನ್ನುವುದು ರೈತನ ಆಸೆ. ಆತನಿಗೆ ಈ ತಿದ್ದುಪಡಿ, ಮತ್ತೊಂದು, ಮಗದೊಂದು ತಿದ್ದುಪಡಿ ಅನಾವಶ್ಯಕ. ಆ ದೃಷ್ಟಿಯಿಂದ ನಾವು ಈ ದಿವಸ ಈ ಮಸೂದೆಯನ್ನು ನೋಡುವುದಕ್ಕೆ ಹೊರಟರೆ ಇದರಲ್ಲಿ ಎಲ್ಲಿಯೂ ಹಾಗೆ ಕಂದಾಯವನ್ನು ತಗ್ಗಿಸುತ್ತೇವೆಂಬ ಮಾತನ್ನು ಹೇಳಿಲ್ಲ. ಮತ್ತೆ ರಾಜ್ಯಾದ್ಯಂತವೂ ಸರ್ವೆ ಅಂಡ್ ಸೆಟಲ್‌ಮೆಂಟನ್ನು ನಡೆಸಿದರೆ ರೈತನ ಮೇಲೆ ಹೇರತಕ್ಕ ಕಂದಾಯದ ಹೊರೆ ಕಡಿಮೆಯಾಗುತ್ತದೆಂಬ ಭರವಸೆ ಎಲ್ಲಿದೆ? ಈ ಮಸೂದೆಯಲ್ಲಿ ಹೇಳಿರತಕ್ಕದ್ದನ್ನು ನೋಡಿದರೆ ರೈತನ ಮೇಲೆ ಹಾಲಿ ಏನು ಒಂದು ಕಂದಾಯದ ಹೊರೆ ಬಿದ್ದಿದೆ ಅದು ಮುಂದೆ ಇನ್ನೂ ಹೆಚ್ಚಾದರೂ ಆಗಬಹುದು. ಇಲ್ಲವೆ ಕಡಿಮೆ ಆದರೂ ಆಗಬಹುದು. ಆದರೆ ಹಾಗೆ ಹೆಚ್ಚಾಗುವುದಿಲ್ಲ ಅದು ಕಡಿಮೆಯೇ ಆಗುತ್ತದೆಂಬ ಗ್ಯಾರಂಟಿಯೆಲ್ಲಿದೆ? ಮುಂದಕ್ಕೆ ಭೂಕಂದಾಯವನ್ನು ನಿಗದಿಮಾಡತಕ್ಕ ವಿಚಾರದಲ್ಲಿ ಕೆಲವು ನಿಯಮಾವಳಿಗಳನ್ನು ಮಾಡಿದ್ದಾರೆ. ಅವುಗಳ ಆಧಾರದ ಮೇಲೆ ಕಂದಾಯವನ್ನು ನಿಗದಿಮಾಡಬೇಕಾಗುವುದು. ಆದರೆ ಈಗ ಏನು ಒಂದು ಲೆಕ್ಕಗಳನ್ನು ತಯಾರು ಮಾಡಿದ್ದಾರೆ ಅವುಗಳಲ್ಲಿ ಕೆಲವು ಭೂಮಿಯ ಅಳತೆಯಲ್ಲಿ ತಪ್ಪಾಗಿರಬಹುದು, ಕೆಲವು ಕ್ಲಾಸಿಫಿಕೇಷನ್ನಿನಲ್ಲಿ ತಪ್ಪಾಗಿರಬಹುದು, ಇಂಥ ತಪ್ಪುಗಳನ್ನು ಕೆಲವು ಸಿದ್ಧಾಂತಗಳ ಮುಖಾಂತರ ಸರಿಪಡಿಸಬಹುದು. ಆದರೆ ಆ ಪ್ರಶ್ನೆ ಹಾಗೆ ಒಂದು ಕಡೆಗೆ ಇರಲಿ. ಇಲ್ಲಿ ನಾವು ಮುಖ್ಯವಾಗಿ ಪರಿಶೀಲಿಸಬೇಕಾದ ಅಂಶ ಇನ್ನೊಂದಿದೆ. ಅದು ಯಾವುದು ಎಂದರೆ ಸರ್ಕಾರದವರು ಹೇರತಕ್ಕ ಭಾರವನ್ನು ಹೊರತಕ್ಕ ಶಕ್ತಿ ಆ ರೈತನಲ್ಲಿದೆಯೇ ಎಂಬುದನ್ನು ನಿರ್ಧಾರಮಾಡಬೇಕಾದ್ದು ಬಹಳ ಮುಖ್ಯ. ರೈತರ ಮೇಲೆ ಕಂದಾಯದ ಭಾರವನ್ನು ಹಾಕುವುದಕ್ಕಾಗದೆ ಇದ್ದಾಗ ಅವರ ಮೇಲೆ ಅಷ್ಟು ಭಾರವನ್ನು ಹೇಗೆ ಹಾಕುವುದು? ಈ ತೆರಿಗೆಯನ್ನು ರೈತರ ಮೇಲೆ ವಿಧಿಸತಕ್ಕ ವಿಚಾರದಲ್ಲಿ ಆ ತೆರಿಗೆಯಿಂದ ರೈತನಿಗೆ ಸ್ವಲ್ಪವೂ ನೋವಾಗದಂತೆ ಅಂದರೆ ಆ ಜೇನು ನೊಣಗಳು ಹೂವಿಗೆ ಯಾವರೀತಿ ನೋವಾಗದಂತೆ ಆ ಮಕರಂದವನ್ನು ಸ್ವೀಕರಿಸುತ್ತವೆಯೋ ಹಾಗೆ ಕಂದಾಯವನ್ನು ಪಡೆಯಬೇಕು.....

**ಶ್ರೀ ಬಸವರಾಜ ಕಟ್ಟೀಮನಿ** (ನಾಮನಿರ್ದೇಶನ ಹೊಂದಿದವರು)**:** ಆ ಮಕರಂದವನ್ನು ಸ್ವೀಕರಿಸುವಾಗ ಹೂವಿಗೆ ನೋವಾಗಲಿಲ್ಲಾ ಎನ್ನುವುದು ನಮಗೆ ಹೇಗೆ ಗೊತ್ತಾಗಬೇಕು?

**ಶ್ರೀ ಡಿ. ರಾಜಗೋಪಾಲ್:** ಜೇನು ನೋಣಗಳು ಮಕರಂದವನ್ನು ಸ್ವೀಕರಿಸಿದ ಮೇಲೆ ಆ ಹೂಗಳು ಒಣಗುವುದಿಲ್ಲ. ಅದು ಯಾರಿಗೆ ಗೊತ್ತಾಗುವುದಿಲ್ಲ.

**ಶ್ರೀ ಎ.ಕೆ. ಸುಬ್ಬಯ್ಯ:** ಹಸುವಿನ ಕೆಚ್ಚಲಿನಲ್ಲಿರುವುದಕ್ಕಿಂತ ಹೆಚ್ಚು ಹಾಲನ್ನು ಕರೆಯವುದಕ್ಕೆ ಹೊರಟರೆ ಆ ಹಸುವಿಗೆ ಆಗತಕ್ಕ ಅಪಾಯಕ್ಕಿಂತ ಹೆಚ್ಚಿನ ಅಪಾಯ ಅದರ ಮಾಲೀಕನಿಗೆ ಆಗುತ್ತದೆ. ತೆರಿಗೆಗಳನ್ನು ಜನರ ಮೇಲೆ ಯಾವ ರೀತಿ ಹಾಕಬೇಕು. ಅನ್ನತಕ್ಕ ವಿಚಾರದಲ್ಲಿ ಮನುಸ್ಮೃತಿಯಲ್ಲಿ ಏನು ಹೇಳಲಾಗಿದೆ ಎಂದರೆ ಜನಸಂಪತ್ತು ನಿತ್ಯವೂ ಅಚ್ಚಹಸುರಾಗಿರುವಂತೆ ತೆರಿಗೆಯನ್ನು ವಿಧಿಸಬೇಕೆಂದು ಹೇಳಲಾಗಿದೆ. ಆದರೆ ಈ ದಿವಸ ನಮ್ಮ ಮುಂದೆ ಇಟ್ಟಿರತಕ್ಕ ಮಸೂದೆಯಲ್ಲಿ ಸರ್ಕಾರದವರು ನಾಳೆ ಹೊಸದಾಗಿ ಹಾಕತಕ್ಕ ಕಂದಾಯಗಳು ಹಿಂದೆ ಇದ್ದ ಕಂದಾಯಗಳ ಮೊತ್ತಕ್ಕಿಂತ ಒಂದು ಅಥವಾ ಒಂದೂವರೆಯಷ್ಟು ಮಾತ್ರ ಹೆಚ್ಚಾಗಬಹುದೆಂದು ಮಾನ್ಯ ಸಚಿವರು ಹೇಳುತ್ತಿದ್ದಾರೆ. ಅದಕ್ಕೆ ಈ ಮಸೂದೆಯಲ್ಲಿ ಎಲ್ಲಿ ಅಂಥ ಒಂದು ಪ್ರಾವಿಜನ್ ಇದೆ? ಇಲ್ಲಿ ಹೇಳಿರತಕ್ಕದ್ದು ಏನೆಂದರೆ–ಯಾವುದಾದರೊಂದು ಜೋನಿನಲ್ಲಿ ಕಂದಾಯ ಹೆಚ್ಚಿಗೆ ಬಿದ್ದಿದ್ದರೆ ಅಲ್ಲಿಯ ಸರ್ವೆ ಅಂಡ್ ಸೆಟಲ್‌ಮೆಂಟ್ ಕಾರ್ಯವನ್ನು ಪುನರ್‌ಪರಿಶೀಲನೆ ಮಾಡಿ ಅದನ್ನು ಸರಿಪಡಿಸಲಾಗುತ್ತದೆ ಎಂದು ಮಾತ್ರ ಹೇಳಿದೆ. ಮೈಸೂರು ರಾಜ್ಯದಲ್ಲಿ 38 ಜೋನುಗಳಿವೆ.........ಜೋನ್ ಮಾಡಿಬಿಡುವುದು ಮನಸ್ಸಿಗೆ ಬಂದಹಾಗೆ ಅದು ಆಗುವುದಿಲ್ಲ. ಜೋನ್ ಅಂದರೇನು? "Zone" means a local area comprising a taluk or group of taluks or portions thereof of one or more district, which in the opinion of the State Government or an officer authorised by it in this behalf is contiguous and homogeneous in respect of:

(i) physical configuration,

(ii) claimate and rainfal,

(iii) principal crops grown in the area, and

(iv) soil characteristics.

ಈ ಪ್ರಕಾರ 38 ಜೋನುಗಳನ್ನು ಮಾಡಿದ್ದಾರೆ. ಕೊಡಗು ಒಂದು ಜೋನ್ ಎಂದು ಇಲ್ಲಿ ಏನು ಹೇಳಿದ್ದಾರೆ, ಅಲ್ಲಿ ರೇನ್‌ಫಾಲ್, ಡ್ರೈನೇಜ್ ಕಂಡೀಷನ್ಸ್ ನೋಡಬೇಕು. ಮಡಿಕೇರಿಯಲ್ಲಿ ಸರಾಸರಿ ಮಳೆ 120 ಇಂಚುಗಳಷ್ಟು 23 ಮೈಲಿಗಳಷ್ಟು ದೂರದಲ್ಲಿದೆ, 250 ಇಂಚುಗಳಷ್ಟು ಕೇವಲ 18 ಮೈಲಿಗಳ ದೂರದಲ್ಲಿದೆಯೆಂದು ಹೇಳುತ್ತಾರೆ. ಅಂದರೆ ಸರಾಸರಿ ಮಳೆ 200 ಇಂಚುಗಳಷ್ಟು ಇದೆ. ಇನ್ನು ಕುಶಾಲನಗರದಲ್ಲಿ ಮಳೆ ಸರಾಸರಿ ಕೇವಲ 60 ಇಂಚುಗಳಷ್ಟು ಇದೆ. ವಿರಾಜಪೇಟೆಯಲ್ಲಿ 40 ಇಂಚುಗಳಷ್ಟು ಇದೆ. ಈಗ ಕೊಡಗು ತಾಲ್ಲೂಕನ್ನು ಒಂದು ಜೋನ್ ಆಗಿ ಮಾಡಿದ್ದಾರೆ. ಸೋಮವಾರಪೇಟೆ, ಮಡಿಕೇರಿ, ವಿರಾಜಪೇಟೆ-ಈ ಮೂರು ತಾಲ್ಲೂಕುಗಳಿಗೂ ಒಂದು ಜೋನ್ ಮಾಡಿದ್ದಾರೆ. ಒಂದು ಕಡೆ ಬತ್ತ ಬೆಳೆಯುವುದಿಲ್ಲ. ಕಾಡು ಇರುತ್ತದೆ, ಏಲಕ್ಕಿ ಬೆಳೆಯುತ್ತಾರೆ, ಕಾಫಿ ಬೆಳೆಯುತ್ತಾರೆ. ಇದೆಲ್ಲವನ್ನೂ ಸೇರಿಸಿ ಒಂದು ಜೋನ್ ಮಾಡಿದ್ದಾರೆ. ಇದು ಸರಿಯಲ್ಲ 38 ಜೋನ್‌ಗಳನ್ನು ಈಗ ಏನು ಮಾಡಿದ್ದಾರೆ, ಇದರ ಬದಲಾವಣೆಗೆ ಅವಕಾಶವಿದೆ. ಆದರೆ ಈ ತಿದ್ದುಪಡಿಯಲ್ಲಿ ಅದಕ್ಕೆ ಅವಕಾಶ ಇಲ್ಲ. ಮತ್ತೆ ಭೂಕಂದಾಯ ಕಡಿಮೆಮಾಡಬೇಕೆಂಬ ಸಿದ್ಧಾಂತವನ್ನು ನೀವು ಒಪ್ಪಿಕೊಳ್ಳುವುದಾದರೆ, ಈ ಸ್ಟಾಂಡರ್ಡ್ ರೇಟ್ ಎಂದು ಏನು ನೀವು ಡೆಫಿನೇಷನ್ ಕೊಟ್ಟಿದ್ದೀರೋ ಮತ್ತು ಅದರ ಬಗ್ಗೆ ಏನು ತೀರ್ಮಾನ ಕೊಟ್ಟಿದ್ದಾರೋ ಅದು ಬದಲಾವಣೆಯಾಗಬೇಕು. ಎಲ್ಲಾ ಫಿಸಿಕಲ್ ಕಾಂಟಿಗ್ಯುಯಟಿ, ಮಾರ್ಕೆಟ್ ಫೆಸಿಲಿಟಿ, ರೆಯಿನ್‌ಫಾಲ್, ಕ್ಲೈಮೆಟ್ ಕಂಡೀಷನ್ ಇದನ್ನು ಗಣನೆಗೆ ತೆಗೆದುಕೊಂಡು ಕ್ಲಾಸಿಫಿಕೇಷನ್ ಮಾಡುತ್ತಾರೆ. ರೇಟ್ ಫಿಕ್ಸ್ ಮಾಡುತ್ತಾರೆ ಎಂದು ಈ ರೀತಿ ಸರ್ಕಾರದವರು ಹೇಳಿದ್ದಾರೆ. ಆದರೆ ರೈತರ ವ್ಯವಸಾಯದ ಖರ್ಚನ್ನು ಗಮನಕ್ಕೆ ತೆಗೆದುಕೊಂಡಿದ್ದೀರಾ? ಒಂದು ಎತ್ತು ಸತ್ತು ಹೋದರೆ ರೈತ ಪಡಬಹುದಾದ ಕಷ್ಟವೇನೆಂಬುದನ್ನು ತಿಳಿಯಬೇಕು. ಒಂದು ಎತ್ತಿನ ಬೆಲೆ ಈಗ ಏನಾಗಿದೆ? ಇವತ್ತು ಇದರ ಬಗ್ಗೆ ಒಂದು ಕಾಲ್ ಅಟೆನ್‌ಷನ್ ನೋಟೀಸ್ ಬಂದಿದೆ. 500-600 ರೂಪಾಯಿಗಳನ್ನು ಕೊಟ್ಟು ಇವತ್ತು ಕೊಡಗಿನಲ್ಲಿ ಎತ್ತುಗಳಿಂದ ವ್ಯವಸಾಯ ಮಾಡುತ್ತಿದ್ದಾರೆ. ಕೆಲವು ಕಡೆ ಯಂತ್ರಗಳನ್ನು ಮುಂದುವರಿಸುತ್ತಿದ್ದಾರೆ. ಅದನ್ನು ಬಳಸುವುದಕ್ಕಾಗಿ ರೈತನ ಖರ್ಚು ಎಷ್ಟು ಎಂಬುದನ್ನು ಗಣನೆಗೆ ತೆಗೆದುಕೊಂಡಿದ್ದೀರಾ? ನೀವು ಒಟ್ಟು ಗ್ರಾಸ್ ಇನ್‌ಕಂ 4 ರಷ್ಟು ಅದರ ಬೆಲೆ ಎಂದು ಹೇಳಿದರೆ ಕೆಲವು ಕಡೆ ಖರ್ಚು ಸರಿಹೋಗುತ್ತದೆ. ಕೆಲವು ಕಡೆ ಇದು ಹೇಗೋ ಹೆಚ್ಚು

ಕಡಿಮೆಯಾಗಬಹುದು. ಆದ್ದರಿಂದ ಸ್ಟಾಂಡರ್ಡ್ ರೇಟನ್ನು ಬದಲಾವಣೆ ಮಾಡದ ಹೊರತು ಏನೂ ಆಗುವುದಿಲ್ಲ. ಯಾವ ಆಫೀಸರೂ ಏನೂ ಮಾಡುವುದಕ್ಕಾಗುವುದಿಲ್ಲ. ಮತ್ತೆ ರೈತನು ಅವರ ಹತ್ತಿರ ಹೋಗಿ ಕಡಿಮೆ ಮಾಡಬೇಕೆಂದು ಹೇಳಿದರೆ, ಅದು ಆಗುವುದಿಲ್ಲ. "Standard rate" means with reference to any particular class of land in a group, the value of four per cent of the average yield of crops per acre on land in that class of one hundred per cent classification value. ಆಗಬೇಕಾದ ಬದಲಾವಣೆ ಏನೆಂದರೆ, ಆ್ಯವರೇಜ್ ನೆಟ್ ಈಲ್ಡ್ ಕ್ರಾಪ್ಸ್ ಎಂದು ಇದ್ದರೆ ಮಾತ್ರ ರೈತರಿಗೆ ಉಪಕಾರ ಮಾಡಬಹುದು. ಆ ಒಂದು ನಿಯಮವನ್ನು ಅನುಸರಿಸಿ ನೀವು ರಿವಿಷನ್ ಸೆಟಲ್‌ಮೆಂಟ್ ಮಾಡುವುದಾದರೆ ಮಾತ್ರ ರೈತನಿಗೆ ಉಪಕಾರವಾಗುತ್ತದೆ. ಇಲ್ಲದಿದ್ದರೆ ಮಾರ್ಕೆಟ್‌ರೇಟ್ ಶೇಕಡ 4 ರಷ್ಟು ಎಂಬುದಾಗಿ ಹೇಳಿದರೆ ಸಾಧ್ಯವಾಗುವುದಿಲ್ಲ. ಶೇಕಡ 4 ರಷ್ಟು ಅಂದರೆ ಲೆಕ್ಕದಲ್ಲಿ ನೀವು ಇದನ್ನು ಯಾವ ರೀತಿಯಲ್ಲಿ ಕಂಡುಹಿಡಿಯುತ್ತೀರಿ? ಸರ್ಕಾರದವರು ಒಂದು ನೀತಿಯನ್ನು ಅನುಸರಿಸಬೇಕು. ಅದು ಯಾವ ರೀತಿ ಇದೆಯೆಂಬುದನ್ನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಕೊಡಗಿನಲ್ಲಿ ಬ್ರಿಟೀಷರು ಬರುವುದಕ್ಕೆ ಮೊದಲು ಈ ಸೆಟಲ್‌ಮೆಂಟ್ ಇರಲಿಲ್ಲ. ರಾಜರುಗಳು ಇದ್ದಾಗ ಭೂಮಿಯ ಯೋಗ್ಯತೆಗನುಗುಣವಾಗಿ ಎಷ್ಟೆಷ್ಟು ಕಂದಾಯ ಇರಬೇಕೆಂದು ನಿಗದಿಮಾಡಿದರು. ಕೆಲವು ಸಮಯದ ನಂತರ 1899ನೇ ಇಸವಿಯಲ್ಲಿ ಕೂರ್ಗ್ ಲ್ಯಾಂಡ್ ರೆವಿನ್ಯೂ ಕೋಡ್ ಪ್ರಕಾರ 1906ನೇ ಇಸವಿಯಲ್ಲಿ ಸೆಟಲ್‌ಮೆಂಟ್ ಮಾಡಲಿಕ್ಕೆ ಅವರು ಹೊರಟರು. 1911ನೇ ಇಸವಿಯಲ್ಲಿ ಮತ್ತು 1913ನೇ ಇಸವಿಯಲ್ಲಿ ಕೊಡಗಿನಲ್ಲಿ ಪೂರ್ಣ ಸೆಟಲ್‌ಮೆಂಟಾಗಿ ಈಗ ಸೆಟಲ್‌ಮೆಂಟ್ ಮಾಡಿದ ಹಾಗೆ ಕೊಡಗೆಲ್ಲಾ ಒಂದು ಜೋನ್, ಕುಶಾಲನಗರಕ್ಕೆ ಸಂಬಂಧಪಟ್ಟ 13 ನಗರಗಳು ಕೂಡಿಕೊಂಡು ಆ ಭಾಗಕ್ಕೆಲ್ಲಾ ಒಂದು ಗ್ರೂಪ್ ಮಾಡಬೇಕೆಂದು ಆಯಿತು. ಆ ಗ್ರೂಪಿಗೆ ಎಕರೆಗೆ 1.25 (ಒಂದು ರೂ. ಇಪ್ಪತ್ತೈದು) ಪೈಸೆ ಸ್ಟಾಂಡರ್ಡ್ ರೇಟ್ ಕಂದಾಯ ಎಂದು ಮಾಡಿದ್ದಾರೆ. ಪ್ರತಿಯೊಂದು ಎಕರೆಗೆ ಇಡೀ ಗ್ರೂಪಿನಲ್ಲಿ ಎಷ್ಟು ಕಂದಾಯ ಬರುತ್ತೆ ಎಂಬುದಾಗಿ ಡಿಮ್ಯಾಂಡ್ ನೋಟಿಸ್ ಕೊಟ್ಟಿದ್ದರು. ಆದರೆ ಆ ಸ್ಟಾಂಡರ್ಡ್ ರೇಟ್ ಎಲ್ಲಾ ಗ್ರೂಪಿಗೂ ಅನ್ವಯಿಸುವುದಿಲ್ಲ. ಅದನ್ನು ಬ್ರಿಟಿಷರು 1911ರಲ್ಲಿ ಮಾಡಿದ್ದರು. ಆಗ ಹಾಲಾರ್ ಎಂಬುವರು ಒಬ್ಬರು ಸರ್ವೆ ಮಾಡುವುದಕ್ಕೆ ಬರುತ್ತಿದ್ದರು. ಅವರು ಕೊಡಗಿನಲ್ಲಿರತಕ್ಕ ಸಾಗುವಳಿ ಮಾಡತಕ್ಕ, ಸಾಗುವಳಿ ಮಾಡಿದಂಥ ಭೂಮಿಯ

ಕಂದಾಯವನ್ನು 8 ತರಹ ವಿಂಗಡಿಸಿದರು. ಮತ್ತೆ ಡ್ರೈಲ್ಯಾಂಡನ್ನು 5 ತರಹವಾಗಿ ವಿಂಗಡಿಸಿದರು. 8 ತರಹ ಬತ್ತದ ಗದ್ದೆಗೆ 4.25 ಪೈಸೆ ಒಂದನೇ ತರಗತಿಗೆ ಕಡಿಮೆ ಅಂದರೆ 1.25 ಪೈಸೆ ಅಥವಾ 8 ಆಣೆ. ಬ್ರಿಟಿಷರ ಕಾಲದಲ್ಲಿ ಜವಾಬ್ದಾರಿ ಸರ್ಕಾರವಿದ್ದಾಗ ಹಾಲಾರ್ ಅವರು ಊರು ಸುತ್ತಿ ಮಣ್ಣನ್ನು ಪರೀಕ್ಷೆ ಮಾಡಿ ಅದರ ಯೋಗ್ಯತೆಯನ್ನು ನೋಡಿ ಭೂಕಂದಾಯವನ್ನು 8 ತರಹದಲ್ಲಿ ನಿಗದಿ ಮಾಡಿದ್ದರು.

ಈ ಹೊಸ ಸೆಟಲ್‌ಮೆಂಟನ್ನು ಮಾಡುವುದಕ್ಕಾಗಿ ನಮ್ಮ ಕೊಡಗಿಗಾಗಿ ಒಬ್ಬ ಕಂಡೇರಾವ್‌ನ್ನು ನೇಮಕ ಮಾಡಿದ್ದಾರೆ. ಇವರು 62ನೇ ಇಸವಿಯಿಂದ ಕೆಲಸ ಮಾಡುವುದಕ್ಕೆ ಶುರುಮಾಡಿ 64ನೇ ಇಸವಿಯಲ್ಲಿ ತಮ್ಮ ವರದಿಯನ್ನು ಸಲ್ಲಿಸಿದ್ದಾರೆ. ಆದರೆ ಈ ಕಂಡೇರಾವನ್ನು ನಾನು ಇಷ್ಟರಮಟ್ಟಿಗೆ ಕಂಡೇ ಇಲ್ಲ. ಇವರು ಎಲ್ಲಿ ಇದ್ದರು. ಏನು ಕ್ಲಾಸಿಫಿಕೇಷನ್ ಮಾಡಿದರು ಅಂದರೆ, ಹಾಲಾರ್ ಏನೇನು ಶಿಫಾರಸ್ಸು ಮಾಡಿದ್ದಾರೆ, ಅದನ್ನು ಇದ್ದ ಹಾಗೆ ಕ್ಸೆಪ್ಟ್ ಮಾಡಿದ್ದೇವೆಂದು ಹೇಳಿದ್ದಾರೆ. 1913ನೇ ಇಸವಿಯಲ್ಲಿ ಹಾಲಾರ್ ಎನ್ನುವವರು ಬೆವರು ಸುರಿಸಿ, ಕಷ್ಟಪಟ್ಟು ಕ್ಲಾಸಿಫಿಕೇಶನ್ ಮಾಡಿದರು. ಆದರೆ ಕಂಡೇರಾಯರು ಸಂಬಳ ತೆಗೆದುಕೊಂಡು ಎಲ್ಲದಕ್ಕೂ 10–20 ಪೈಸೆ ಭೂಕಂದಾಯ ಹಾಕಿದ್ದಾರೆ. 1–25 ಎಕರೆ ಇದೆ. ಅದಕ್ಕೂ ಹೊಸ ದರದಲ್ಲಿ 10–20 ಪೈಸೆ ಪ್ರಕಾರ ಕಂದಾಯ ಅದನ್ನು ಹೇಗೆ ಜನರು ಕೊಡಬೇಕು? ಇದರಲ್ಲಿ 117 ಸೆಕ್ಷನ್‌ನಲ್ಲಿ ಈ ರೀತಿ ಕೊಟ್ಟಿದ್ದಾರೆ. ಅದನ್ನು ಓದುತ್ತೇನೆ.

"The increase in average yield due to improvements by the holders not to be taken into consideration: If during 30 years immediately preceeding the date on which the settlements for the time being inforce expires any improvement have been effected in an land by or at the expense of the holder thereon, the increase in the average yield of crops of such land due to the said improvements shall not be taken into account in fixing the revised assessment thereof".

ಇವತ್ತು ಅಲ್ಲಿ ಜೂನ್ 16ಕ್ಕೆ ಬರಬೇಕಾಗಿದ್ದ ಮಳೆ ಇನ್ನೂ ಮುಂದಕ್ಕೆ ಹೋಗಿದೆ. ಮುಂದೆ ರಿವೈಸ್ಡ್ ಸೆಟ್ಲ್‌ಮೆಂಟ್ ರೆಫರ್ ಮಾಡುತ್ತಾರೆ. ಆಗ ಕಂಡೇರಾಯರು

ಎಲ್ಲಿರುತ್ತಾರೆ? ಇನ್ನು ಕೊಡಗಿನಲ್ಲಿ ಒಬ್ಬರು ತಹಸೀಲ್ದಾರರು ಇದ್ದಾರೆ. ಅವರು ಅಲ್ಲಲ್ಲಿಯ ಮಣ್ಣಿನಗುಣ ನೋಡಿಕೊಂಡು, ಎಲ್ಲೆಲ್ಲಿ ಯಾವಯಾವ ಬೆಳೆಯಾಗುತ್ತದೆಂದು ನೋಡಿಕೊಂಡು ಪ್ರತಿವರ್ಷ ನೋಟಿಫಿಕೇಷನ್ ಬಿಡುಗಡೆ ಮಾಡಬೇಕು. ಆದರೆ ಇವರು ಆಫೀಸ್ ಬಿಟ್ಟು ಹೊರಗಡೆ ಬರಲೇ ಇಲ್ಲ. ಏನೋ ಗುಣಾಕಾರ ಲೆಕ್ಕ ಮಾಡಿ ಇಡೀ ಭಾಗಮಂಡಲದವರೆಗೆ ಫೋರ್ತ್‌ಕ್ಲಾಸ್ ಲ್ಯಾಂಡ್ ಎಂದು ಹೇಳಿದ್ದಾರೆ. ಆ್ಯವರೇಜ್ ಅಲ್ಲಿ ಈಲ್ಡ್ ಪರ್‌ಏಕರ್, ಪ್ಯಾಡಿ 8 ಕ್ವಿಂಟಾಲ್, ರಬ್ಬರ್ 10 ಪೌಂಡ್ಸ್. ಕಾಫಿ 2 ಕ್ವಿಂಟಾಲ್ಸ್ ಓರೇಂಜ್ 10,000, ಕಾರ್ಡಮಂ 20 ಕೆ.ಜಿ. ಅಲ್ಲಿ ಭಾಗಮಂಡಲದಲ್ಲಿ ಕಿತ್ತಳೆ ಬೆಳೆಯುವುದಿಲ್ಲ. ಕುಶಾಲನಗರದಲ್ಲಿ ಭತ್ತ ಏಲಕ್ಕಿ ಬೆಳೆಯುವುದಿಲ್ಲ. ಈ ರೀತಿ ಈ ಎಲ್ಲಾ ಮಾಡಿ ನೋಟೀಫಿಕೇಷನ್ ಕಳಿಸಿಬಿಟ್ಟಿದ್ದಾರೆ. ಇದರ ಬಗ್ಗೆ ಜಿಲ್ಲೆಯ ಜನತೆ ಪ್ರತಿಭಟನೆ ಮಾಡಿದ್ದಾರೆ. ಪ್ರತಿಭಟನೆ ಮಾಡಿ ಅನೇಕ ಠರಾವುಗಳನ್ನು ಅವರು ಮಂಡಿಸಿದ್ದಾರೆ. ಅದರಲ್ಲಿ ಕೆಲವನ್ನು ಈ ಸಭೆಯ ಗಮನಕ್ಕೆ ತರಬಯಸುತ್ತೇನೆ. ಇದು ನಾನು ಜನಸಂಘದ ಅಧ್ಯಕ್ಷ ಎ.ಕೆ. ಸುಬ್ಬಯ್ಯನವರ ಅಧ್ಯಕ್ಷತೆಯಲ್ಲಿ ಅಂಗೀಕರಿಸಿದ ಠರಾವು ಎಂದು ಹೇಳಬಾರದು. ಏಕೆಂದರೆ, ನಾನು ಎರಡು ದಿವಸ ಬನುಮಯ್ಯ ಕಾಲೇಜಿನ ವಿಚಾರ ಇಲ್ಲಿ ಹೇಳಿದೆ. ಅದರ ಮೇಲೆ ಒಬ್ಬರು ನನ್ನನ್ನು ಕೇಳಿದರು ಏನು ಬನುಮಯ್ಯ ಕಾಲೇಜಿನ ಉಪಾಧ್ಯಾಯರು ನಮಗೆ ಓಟು ಮಾಡಿದ್ದಾರೆಯೇ? ಎಂದು. ಈ ರೀತಿಯಿಂದ ಜನ ಸಂಘದವರು ಇದನ್ನು ಮಾಡಿದ್ದು ಎಂದು ತಾವು ತಿಳಿದುಕೊಳ್ಳಬಾರದು. ಇದು ಭಾಗಮಂಡಲ ಕಾಂಗ್ರೆಸ್ಸಿನ ಟಿ.ಆರ್. ರಾಘವಾಚಾರ್ ಅವರ ಅಧ್ಯಕ್ಷತೆಯಲ್ಲಿ ಕೊಟ್ಟಂತಹ ಠರಾವು. ಆದ್ದರಿಂದ ಇದು ನನ್ನ ಅಭಿಪ್ರಾಯವಲ್ಲ. ಅದರಲ್ಲಿ ಈ ರೀತಿ ಕೊಟ್ಟಿದ್ದಾರೆ:-

"ಕೊಡಗು ಮೈಸೂರು ರಾಜ್ಯಕ್ಕೆ ವಿಲೀನಗೊಳ್ಳುವಾಗ ಅಲ್ಲಿನ ಜನತೆಗೆ ನೀಡಿದ ಭರವಸೆಯನ್ನು ನೆರವೇರಿಸದೆ, ಅದು ನೀರಿನ ಗುಳ್ಳೆಯಾಗಿದೆ, ತಮ್ಮ ಭರವಸೆಯನ್ನು ಪಾಲಿಸಿಕೊಂಡು ಬರದೆ, ಸರ್ಕಾರ ವಚನಭ್ರಷ್ಟ ಸರ್ಕಾರವಾಗಿದೆ......"

**ಶ್ರೀ ಕೆ.ವಿ. ಶಂಕರಗೌಡ:** ಸ್ವಾಮಿ ಇವರು ಯಾವುದೋ ಮೂಲೆಯಲ್ಲಿ ಮಾಡಿದ ಠರಾವನ್ನು ಇಲ್ಲಿ ತಂದು ಓದುವುದಕ್ಕಾಗುತ್ತದೆಯೇ?

**ಶ್ರೀ ಎ.ಕೆ. ಸುಬ್ಬಯ್ಯ:** ಸರ್ಕಾರ ತನ್ನ ಬೊಕ್ಕಸವನ್ನು ತುಂಬಿಸಬೇಕಾದ ಆಜ್ಞೆಗಳನ್ನು ಮಾಡುತ್ತದೆಯಲ್ಲದೆ, ಪ್ರಜೆಗಳ ಹಿತರಕ್ಷಣೆಯನ್ನು ಕಾಪಾಡುತ್ತಿಲ್ಲ. ಆದ್ದರಿಂದ

ಕೊಡಗು ಮೈಸೂರು ರಾಜ್ಯದೊಂದಿಗೆ ವಿಲೀನಗೊಳ್ಳುವಾಗ ಕೊಟ್ಟ ಭರವಸೆಯನ್ನು ನೋಡಿದರೆ ತಿಳಿಯುತ್ತದೆ. ಇವತ್ತು ಈ ಬಿಲ್ಲನ್ನು ತೆಗೆದುಕೊಂಡು ಬಂದಿರುವುದು, ಮೂಲಭೂತವಾದ ಜೋನ್ ಬದಲಾವಣೆ ಮಾಡುವುದು, ಸ್ಟಾಂಡರ್ಡ್ ರೇಟ್ ಬದಲಾವಣೆ ಮಾಡುವುದು, ಇವೆಲ್ಲಾ ಮಾಡುವುದರಿಂದ ರೈತರಿಗೆ ಏನೂ ಉಪಯೋಗವಾಗುವುದಿಲ್ಲ; ನಿಮ್ಮ ನಾರ್ಮ್ಸ್ ಪ್ರಕಾರ ಮತ್ತೇ ಗೊಂದಲವಾಗುತ್ತದೆ. ಆದ್ದರಿಂದ ಈ ಮಸೂದೆಯನ್ನು ಇಲ್ಲಿ ತೆಗೆದುಕೊಂಡು ಬರುವುದು ಜನತೆಗೆ ಕೊಟ್ಟ ಭರವಸೆಗೆ ಅನುಗುಣವಾಗಿಲ್ಲ. ಇದರಿಂದ ದಿನ ತಳ್ಳುವ ಧೋರಣೆ ಕಂಡುಬರುತ್ತದೆ. ಅದಲ್ಲದೆ, ಇದನ್ನು ನೀವು ಕಳೆದ 65ನೇ ಇಸವಿಯಲ್ಲಿ ಮಂಡಿಸಲ್ಪಟ್ಟ ಸೆಟ್ಲ್‌ಮೆಂಟಿನ ತಾರೀಖಿನಿಂದಲೇ ಸೇರಿಸುತ್ತೀರಾ? ಎಂದು ಕೇಳಬೇಕಾಗಿದೆ. ಈ ತಿದ್ದುಪಡಿ ಮಸೂದೆ ಪ್ರಕಾರ ಕಂದಾಯ ಹೆಚ್ಚಾದರೆ ಕೊಡಬೇಕು. ಕಡಿಮೆ ಆದರೆ ಅದನ್ನು ರಿವಿಜನ್ ಮಾಡಬೇಕು ಎಂದು ಹೇಳಿದ್ದಾರೆ. 3-4 ವರ್ಷಗಳ ಬಾಕಿ ಇರತಕ್ಕ ಒಬ್ಬ ರೈತನಿಗೆ ಈ ಮಸೂದೆ ಜಾರಿಗೆ ಬಂದ ಮೇಲೆ ಕಂದಾಯ ಕಡಿಮೆಯಾಗುತ್ತದೆ. ಎನ್ನುವ ಗ್ಯಾರಂಟಿ ಇಲ್ಲ. ಹಿಂದಿನ ವರ್ಷದಿಂದ ಅವನು ಕಂದಾಯವನ್ನು ಕೊಡಬೇಕಾದಂತಹ ಸಂದರ್ಭ ಬರಬಹುದು. ಮಸೂದೆಯನ್ನು ವಾಪಸ್ಸು ತೆಗೆದುಕೊಂಡು ಈಗಾಗಲೇ ನಾನು ಹೇಳಿದ ಹಾಗೆ ಒಂದು ಸಮಗ್ರವಾದ ತಿದ್ದುಪಡಿ ಮಸೂದೆಯನ್ನು ತರುವುದು ಒಳ್ಳೆಯದು. ಹೊಸದಾಗಿ ಸ್ಟ್ಯಾಂಡರ್ಡ್ ರೇಟ್ ಫಿಕ್ಸ್ ಮಾಡಿ ಜೋನ್ ಬದಲಾವಣೆ ಮಾಡದ ಹೊರತು ಇದರಿಂದ ಯಾವ ಉಪಯೋಗವೂ ಇಲ್ಲ. ಇದು ಕೇವಲ ಸ್ಟಂಟ್; ಗತ್ತುಗಾರಿಕೆ ಆಗುತ್ತದೆ ಎಂದು ನಾನು ಈ ಸಂದರ್ಭದಲ್ಲಿ ಹೇಳುವುದಕ್ಕೆ ಬಯಸುತ್ತೇನೆ.

ಏನಾದರೂ ತೊಂದರೆಗಳು, ಗೊಂದಲಗಳು, ಅನ್ಯಾಯಗಳು ಆಗಿದ್ದಂತಹ ಸಂದರ್ಭದಲ್ಲಿ ಈಗಿದ್ದ ಆ್ಯಕ್ಟಿನಲ್ಲಿ ಮತ್ತೆ ಅದನ್ನು ಸರಿಪಡಿಸುವುದಕ್ಕೆ ಅವಕಾಶವಿಲ್ಲ, ಅದಕ್ಕಾಗಿ ಈ ತಿದ್ದುಪಡಿ ಮಸೂದೆಯನ್ನು ತೆಗೆದುಕೊಂಡು ಬಂದಿದ್ದೇವೆ ಎಂದು ಹೇಳಿದ್ದಾರೆ.

ಸ್ಟ್ಯಾಂಡರ್ಡ್ ರೇಟು ಬದಲಾವಣೆ ಆಗದೆ ರೈತರಿಗೆ ರೀಸೆಟ್ಲ್‌ಮೆಂಟಿನಿಂದ ಏನೂ ಅನುಕೂಲವಾಗುವುದಿಲ್ಲ. ಈ ಸ್ಟ್ಯಾಂಡರ್ಡ್ ರೇಟನ್ನು ಫಿಕ್ಸ್ ಮಾಡುವಾಗ ಸರಿಯಾದ ರೀತಿಯಲ್ಲಿ ಫಿಕ್ಸ್ ಮಾಡಿಲ್ಲ. ಇದು ಬಹಳ ಶೋಚನೀಯವಾದ ವಿಚಾರ. ಸರ್ಕಾರದ ತಪ್ಪಿನಿಂದ ರೈತ ಈಗಾಗಲೇ ಬಾಕಿದಾರನಾಗಿದ್ದಾನೆ. 1955ನೇ ಇಸವಿಯಿಂದ ಬಾಕಿ ಇರುವ ಕಂದಾಯವನ್ನು ವಸೂಲು ಮಾಡುತ್ತಿರುವುದರಿಂದ

ರೈತ ಸಾಯುತ್ತಿದ್ದಾನೆ. ರೈತ ಉಳಿಯದಿದ್ದರೆ ದೇಶ ಉಳಿಯುವುದಿಲ್ಲ. ನಮ್ಮ ಸರ್ಕಾರದಿಂದ ರೈತರಿಗೆ ಆಗುತ್ತಿರುವಷ್ಟು ಕಿರುಕುಳ ಬೇರೆ ಯಾರಿಗೂ ಇವತ್ತು ಆಗುತ್ತಿಲ್ಲ. ರೈತರು ನಿರ್ಗತಿಕರಾಗುತ್ತಿದ್ದಾರೆ. ರೈತರು ಸಂಘಟನೆಯಾಗಿಲ್ಲ. ರೈತನು ಫುಟ್‌ಬಾಲ್ ಚೆಂಡಿನ ರೂಪದಲ್ಲಿ ಇದ್ದಾನೆ. ಆಟದ ಮೈದಾನದಲ್ಲಿ ಚೆಂಡನ್ನು ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ ಯಾವ ರೀತಿ ಒದೆಯುತ್ತಾರೋ ಅದೇ ರೀತಿ ರೈತನನ್ನು ಸರ್ಕಾರದವರು ಒದೆಯುತ್ತಿದ್ದಾರೆ. ಈ ಮೂಲಕ ಸರ್ಕಾರದವರು ರೈತನನ್ನು ಕೆಣಕುವುದಕ್ಕೆ ಹೊರಟಿದ್ದಾರೆ. ರೈತ ಕೆರಳಿದರೆ ಕ್ರಾಂತಿಯಾಗುತ್ತದೆ. ಕ್ರಾಂತಿಯಾದರೆ ಇತಿಹಾಸವೇ ಬದಲಾವಣೆಯಾಗಬೇಕಾದೀತು ಎಂಬ ಎಚ್ಚರಿಕೆಯನ್ನು ಸರ್ಕಾರಕ್ಕೆ ನಾನು ತಿಳಿಸ ಬಯಸುತ್ತೇನೆ. ಸರ್ಕಾರದವರು ಮೊದಲು ಹೇಳಿದ ರೀತಿಯಲ್ಲಿ ಮಸೂದೆಯ ತಿದ್ದುಪಡಿ ಸರಳ ರೂಪದ್ದು ಆಗಿಲ್ಲ. ಈ ತಿದ್ದುಪಡಿಯಿಂದ ರೈತನ ಹಿತರಕ್ಷಣೆಯಾಗುವುದಿಲ್ಲ. ರೈತನಿಗೆ ಕಡಿಮೆ ಕಂದಾಯ ಬರುವಂತಹ ಅಮೂಲಾಗ್ರವಾದಂಥ ತಿದ್ದುಪಡಿಯನ್ನು ತರಬೇಕಾಗಿತ್ತು. ಕೆಳಮನೆಯಲ್ಲಿ ಈ ತಿದ್ದುಪಡಿಯ ಬಗ್ಗೆ ಸಾಕಷ್ಟು ಗಲಾಟೆಯಾಗಿದೆ, ಸರ್ಕಾರದವರು ಈ ಎಲ್ಲಾ ಹಿನ್ನೆಲೆಯನ್ನು ಪರಿಗಣನೆಗೆ ತೆಗೆದುಕೊಂಡು ಈ ತಿದ್ದುಪಡಿಯ ಶಾಸನವನ್ನು ವಾಪಸ್ ತೆಗೆದುಕೊಳ್ಳುವುದರ ಮೂಲಕ ಪ್ರಜಾಪ್ರಭುತ್ವಕ್ಕೆ ಬೆಲೆ ಕೊಡಬೇಕು. ದೇಶದ ರೈತರ ಹಿತರಕ್ಷಣೆಗೋಸ್ಕರವಾಗಿ ಸರ್ಕಾರ ಮುಂದೆ ಬರಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

# ಎಲ್ಲರೂ ದೇಶದ ಮಕ್ಕಳಾಗಿ ಬಾಳಬೇಕು
## (ಆ್ಯಂಗ್ಲೋ ಇಂಡಿಯನ್ನರ ನೇಮಕಕ್ಕೆ ವಿರೋಧ)
### 20ನೇ ಜನವರಿ 1970

**ಶ್ರೀ ಎ.ಕೆ. ಸುಬ್ಬಯ್ಯ:** ನಮ್ಮ ರಾಜ್ಯಾಂಗದ 23ನೇ ತಿದ್ದುಪಡಿ ಮಸೂದೆಯು ಅಂಗೀಕಾರಕ್ಕೋಸ್ಕರ ಈ ಸಭೆಯ ಮುಂದೆ ಇದೆ. ಈ ತಿದ್ದುಪಡಿ ಮಸೂದೆ ಉದ್ದೇಶ ಅನುಸೂಚಿತ ಜಾತಿಯವರಿಗೆ ಹಾಗೂ ಅನುಸೂಚಿತ ಪಂಗಡದವರಿಗೆ ಏನು ಮೀಸಲು ಸ್ಥಾನವನ್ನು ಅಳವಡಿಸಲಾಗಿತ್ತೋ ಅದು 20 ವರ್ಷದಲ್ಲಿ ಮುಗಿಯುವುದು ಇತ್ತು. ಅದು ಇನ್ನೂ 10 ವರ್ಷ ಮುಂದುವರಿಸಿ 30 ವರ್ಷದವರೆಗೆ ಈ ಸೌಲಭ್ಯವನ್ನು ಕೊಡತಕ್ಕದ್ದು ಒಂದು.

ಎರಡನೆಯದಾಗಿ ಆಂಗ್ಲೋ ಇಂಡಿಯನ್ಸ್ ಜನಾಂಗಕ್ಕೆ ವಿಧಾನಸಭೆಯಲ್ಲಿ ಒಂದು ಸ್ಥಾನಕ್ಕೆ ನಾಮಕರಣ ಮಾಡತಕ್ಕಂಥಾದ್ದು ಹಾಗೂ ಇನ್ನೂ 10 ವರ್ಷ ಮುಂದುವರಿಸತಕ್ಕಂಥಾದ್ದು. ಈ ಎರಡು ತಿದ್ದುಪಡಿಗಳನ್ನೂ ಇದರಲ್ಲಿ ಅಳವಡಿಸಲಾಗಿದೆ. ಈ ಮೂಲಭೂತವಾದ ಹಕ್ಕನ್ನು ಅನುಸೂಚಿತ ಜಾತಿಯವರಿಗೆ ಹಾಗೂ ಅನುಸೂಚಿತ ಪಂಗಡದವರಿಗೆ ಹಾಗೂ ಆಂಗ್ಲೋ ಇಂಡಿಯನ್ ಅವರಿಗೂ ಕೂಡ ಇನ್ನೂ 10 ವರ್ಷದವರೆಗೆ ಮುಂದುವರಿಸಿಕೊಂಡು ಹೋಗಬೇಕೆಂದು ಮಾಡಿದ್ದಾರೆ. 10 ವರ್ಷದಲ್ಲಿ ಈ ಜನಾಂಗದವರು ಅಂದರೆ ಅನುಸೂಚಿತ ಪಂಗಡದವರು ಅನುಸೂಚಿತ ಜಾತಿಯವರು ಮತ್ತು ಆಂಗ್ಲೋ ಇಂಡಿಯನ್ಸ್ ನಮ್ಮ ದೇಶದ ಸಮಾಜದ ಇತರ ವರ್ಗದವರಿಗೆ ಸರಿಸಮಾನ ಆಗುತ್ತಾರೆ ಮತ್ತು ಅನಂತರ ಸಮಾಜದ ಜನತೆಯ: ವಿಶ್ವಾಸವನ್ನು ಗಳಿಸಿ ವಿದಾನಸಭೆಗೂ, ವಿಧಾನ ಪರಿಷತ್ತಿಗೂ ಆರಿಸಿ ಬರುತ್ತಾರೆ ಎಂದು ರಾಜ್ಯಾಂಗ ಕರ್ತೃಗಳು ಅಭಿಪ್ರಾಯ ಪಟ್ಟಿದ್ದರು. ಈ ರಾಜ್ಯಾಂಗದ ಕರ್ತೃಗಳು ಬಹಳ ಮೇಧಾವಿಗಳು. ಅವರ ಲೆಕ್ಕಾಚಾರ ತಪ್ಪಾಗಲಿಕ್ಕೆ ಸಾಧ್ಯವಿಲ್ಲ. 10 ವರ್ಷದಲ್ಲಿ ಅವರು ಪ್ರಗತಿಯಾಗಬೇಕೆಂದು ಏನು ಒಂದು ಲೆಕ್ಕಾಚಾರ ಹಾಕಿದ್ದರೋ ಅಷ್ಟು ಪ್ರಗತಿ ಆಗಲಿಲ್ಲ. ಇನ್ನೂ 10 ವರ್ಷ ಮುಂದುವರಿಸಿದಾಗಲೂ ಕೂಡ ಏನೂ ಆಗಲಿಲ್ಲ. ಈಗ ಮತ್ತೊಮ್ಮೆ ಇನ್ನೂ 10 ವರ್ಷಗಳವರೆಗೆ ಈ ಸೌಲಭ್ಯಗಳನ್ನು ಮುಂದುವರಿಸುವಂಥ ಪರಿಸ್ಥಿತಿಯಲ್ಲಿ ನಾವು ಇದ್ದೇವೆ. ಆ ದಿವಸ ಆಲೋಚನೆ ಮಾಡಿದವರಿಗೆ ಮುಂದಾಲೋಚನೆ ಇರಲಿಲ್ಲ, ಅವರ ಆಲೋಚನಾ ಶಕ್ತಿ ತಪ್ಪು ಇತ್ತು. ಅದು ಸರಿಯಾಗಿರಲಿಲ್ಲ ಎನ್ನುವುದು

ಅರ್ಥವಲ್ಲ. ಈ ಅನುಸೂಚಿತ ವರ್ಗದರಿಗೆ ಹಾಗೂ ಅನುಸೂಚಿತ ಜಾತಿಯವರಿಗೆ ಇರತಕ್ಕ ಸೌಲಭ್ಯಗಳನ್ನು ಕೊಟ್ಟು ಸಮಾಜದಲ್ಲಿ ಇತರ ವರ್ಗದ ಜನಾಂಗಕ್ಕೆ ಸರಿಸಮಾನವಾಗಿ ಅವರನ್ನು ಮೇಲಕ್ಕೆತ್ತುವ ಕಾರ್ಯದಲ್ಲಿ ನಮ್ಮ ಸರ್ಕಾರದವರು ಸಾಕಷ್ಟು ಪ್ರಾಮಾಣಿಕತೆಯನ್ನು ತೋರಲಿಲ್ಲ ಎನ್ನುವುದು ಇದರ ಅರ್ಥ. ಅದನ್ನು ಪುಸ್ತಕದೊಳಗೆ ಬರೆದು ಕೃತಿಯಲ್ಲಿ ಮಾಡದೆ ಇದ್ದಾರೆ. ಇದು ಒಂದು ರಾಜಕೀಯ ಘೋಷಣೆ ಎಂದು ಹೇಳುತ್ತೇನೆ. ಈ ದಿವಸ ಪತ್ರಿಕೆಗಳಲ್ಲಿ ಇನ್ನೂ 10 ವರ್ಷಗಳ ಕಾಲ ಈ ಸೌಲಭ್ಯಗಳನ್ನು ಮುಂದುವರಿಸಿದ್ದೇವೆ ಎಂದು ಹೇಳಿಕೊಂಡು ಹಿಂದುಳಿದ ವರ್ಗದವರನ್ನು ಪುನಃ ಪುನಃ ಮೋಸ ಮಾಡುವ ಪರಿಸ್ಥಿತಿಯಲ್ಲಿ ನಮ್ಮ ಸರ್ಕಾರ ಇದೆ. 10 ವರ್ಷವಾಯಿತು, 20 ವರ್ಷವಾಯಿತು. ಅನುಸೂಚಿತ ಜಾತಿ ಹಾಗೂ ಅನುಸೂಚಿತ ಪಂಗಡದವರ ಸ್ಥಿತಿ ಯಾವ ರೀತಿಯಲ್ಲಿಯೂ ಉತ್ತಮಗೊಳ್ಳಲಿಲ್ಲ. ಯಾವ ರೀತಿಯಲ್ಲೂ ಅವರು ಮುಂದುವರಿದಿಲ್ಲ ಎನ್ನುವುದು ನಮ್ಮ ಕಣ್ಣ ಮುಂದೆ ಇದೆ. ಅನೇಕರು ಹೇಳಬಹುದು, ಮಂತ್ರಿಗಳು ಇದ್ದಾರೆ. ಶಾಸಕರು ಇದ್ದಾರೆ, ಐ.ಸಿ.ಎಸ್. ಐ.ಪಿ.ಎಸ್. ಮುಂತಾದ ದೊಡ್ಡ ದೊಡ್ಡ ಹುದ್ದೆಗಳಲ್ಲಿ ಇದ್ದಾರೆ ಎಂದು. ಆದರೆ ಅವರು ನಮ್ಮ ರಾಜ್ಯಾಂಗದ ಪ್ರಕಾರ ಅದನ್ನು ಪಡೆದುಕೊಂಡು ಬಂದವರಲ್ಲ. ನನಗೆ ತಿಳಿದಮಟ್ಟಿಗೆ ಅವರು ಈ ರಾಜ್ಯಾಂಗ ಬರುವ ಮೊದಲೇ ಆ ಹುದ್ದೆಗಳನ್ನು ಪಡೆದಿದ್ದಾರೆ. ಅವರು ಸುಸಂಸ್ಕೃತರಾಗಿದ್ದರು. ಯೋಗ್ಯರಾಗಿದ್ದರು. ಆದ್ದರಿಂದ ಅವರು ದೊಡ್ಡ ದೊಡ್ಡ ಹುದ್ದೆಗಳಿಗೆ ಹೋಗಿದ್ದರು. ರಾಜ್ಯಾಂಗವನ್ನು ಜಾರಿಗೆ ಕೊಟ್ಟನಂತರ ಇಂತಿಷ್ಟು ಮೇಧಾವಿಗಳು ಆಗಿದ್ದಾರೆ. ಇಂತಿಷ್ಟು ಜನ ಮಂತ್ರಿಗಳು ಆಗಿದ್ದಾರೆ. ರಿಸರ್ವೇಷನ್ ಸೌಲಭ್ಯಗಳನ್ನು ಪಡೆದುಕೊಂಡು ಇಷ್ಟು ಜನ ಶಾಸಕರುಗಳಾಗಿದ್ದಾರೆ. ಎನ್ನುವ ಲೆಕ್ಕವೇ ಇಲ್ಲ. ರಿಸರ್ವೇಷನ್‌ಗಳು ಇಲ್ಲದೇ ಅನೇಕ ಜನರು ಮುಂದೆ ಬಂದಿದ್ದಾರೆ. ಆದುದರಿಂದ ಇಂದು ರಾಜ್ಯಾಂಗ ಬಂದ ಮೇಲೆ ಈ ದೇಶದಲ್ಲಿ ಎಷ್ಟು ಜನ ಎಲ್ಲ ರೀತಿಯ ಸೌಲಭ್ಯಗಳನ್ನು ಉಪಯೋಗಿಸಿಕೊಂಡು ಮುಂದೆ ಬಂದಿದ್ದಾರೆ, ಎಷ್ಟು ಜನ ಮೇಧಾವಿಗಳಾಗಿದ್ದಾರೆ ಎನ್ನುವುದರ ಯಾವ ಒಂದು ಲೆಕ್ಕವೂ ಇಲ್ಲಿ ನಮಗೆ ಸಿಗುತ್ತಿಲ್ಲ. ಯಾರೂ ಹಿಂದುಳಿರತಕ್ಕ ಈ ವರ್ಗವನ್ನು ಎತ್ತತಕ್ಕ ಪ್ರಯತ್ನವನ್ನು ಇನ್ನೂ ಮಾಡಿಲ್ಲ. ಕೇವಲ ಘೋಷಣೆಯಲ್ಲೇ ಕಾಲ ಕಳೆಯುತ್ತಿದ್ದಾರೆ. ಹೀಗಾದರೆ ಇಂದು ದೇಶದಲ್ಲಿರುವ ಅಸ್ಪೃಶ್ಯತೆ ಹೋಗುವುದಾದರೂ ಹೇಗೆ? ಬಡತನ ಇಂದು ದೇಶದಿಂದ ತೊಲಗಬೇಕು, ಕ್ವಿಟ್ ಬಡತನ ಎನ್ನುವ ಒಂದು ಘೋಷಣೆಯಿಂದಲೇ ಇಂದು ಅಸ್ಪೃಶ್ಯತೆ

ಹೋಗುವುದಿಲ್ಲ. ಇವೊತ್ತು ಅಸ್ಪೃಶ್ಯರನ್ನು ಬಲಾತ್ಕಾರದಿಂದ ಸ್ಪೃಶ್ಯರನ್ನಾಗಿ ಮಾಡುವುದಕ್ಕೆ ಸಾಧ್ಯವೇ ಇಲ್ಲ. ಅವರನ್ನು ಮುಟ್ಟದೇ ಇರಲು ಅನೇಕ ಕಾರಣಗಳು ಇರಬಹುದು. ಇವೊತ್ತು ನಮ್ಮ ಸಮಾಜದಲ್ಲಿ ಅಸ್ಪೃಷ್ಯರಲ್ಲದೆ ಕುಷ್ಟ ರೋಗಿಗಳು ಕೆಲವರು ಇರಬಹುದು. ಇಂತಹ ಕುಷ್ಠ ರೋಗಿಗಳನ್ನು ಮುಟ್ಟಬೇಕು ಎಂದರೆ ನಾವು ಮುಟ್ಟಲು ಸಾಧ್ಯವಿಲ್ಲ. ಕುಷ್ಟ ರೋಗದಿಂದ ಬಳಲುತ್ತಿರುವ ಕುಷ್ಠ ರೋಗಿಗಳ ಕಾಯಿಲೆಯನ್ನು ವಾಸಿ ಮಾಡಲು ಮೊದಲು ನಾವು ಪ್ರಯತ್ನ ಮಾಡಬೇಕು. ಅದೇ ರೀತಿ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ರಚನಾತ್ಮಕ ಕ್ರಮಗಳನ್ನು ಕೈಗೊಳ್ಳಬೇಕು. ಅದಕ್ಕೆ ಬದಲು ಅಸ್ಪೃಶ್ಯರನ್ನು ಸ್ಪೃಶ್ಯರನ್ನಾಗಿ ಬಲಾತ್ಕಾರದಿಂದ ಮಾಡುತ್ತೇವೆ ಎಂದು ಹೇಳಿದರೆ ಅದು ಇಂದಿನ ಸಮಾಜದಲ್ಲಿ ಸಾಧ್ಯವೇ ಇಲ್ಲ. ಮೊದಲು ಸರಕಾರ ಇದರ ಕಡೆಗೆ ಸಾಕಷ್ಟು ಗಮನ ಕೊಡಲಿಲ್ಲ ಮತ್ತು ಪ್ರಾಮಾಣಿಕವಾದ ಯಾವ ಪ್ರಯತ್ನವನ್ನೂ ಮಾಡಲಿಲ್ಲ ಎಂದು ಹೇಳಬೇಕಾಗಿದೆ. ಇನ್ನೊಂದು ಏನಾಗಿದೆ ಎಂದರೆ ಅಸ್ಪೃಶ್ಯರಾಗಿರುವವರ ಪೈಕಿ ಅನೇಕರು ಮುಂದುವರಿದ ವರ್ಗದವರಾಗಿದ್ದಾರೆ. ಅಲ್ಲದೆ ಹಿಂದುಳಿದ ವರ್ಗದವರಿಗಾಗಿ ಎಂದು ಕೊಡುತ್ತಿರುವ ಎಲ್ಲ ಸೌಲಭ್ಯಗಳನ್ನೂ ಇಂದು ಮಧ್ಯದಲ್ಲಿರುವ ಜನರು ನುಂಗಿ ಹಾಕುತ್ತಿದ್ದಾರೆ. ಹಿಂದುಳಿದ ವರ್ಗದವರು ಎಂದು ಹೇಳುವ ನೆಪದಲ್ಲಿ ಜಾತೀಯತೆಯನ್ನು ತರುತ್ತಿದ್ದಾರೆ. ಇದನ್ನು ತೆಗೆದುಹಾಕಬೇಕು. ಸುಮಾರು ಹತ್ತು ವರ್ಷಗಳಿಂದಲೂ ಈ ಅನುಸೂಚಿತ ವರ್ಗಗಳವರಿಗೆ ಇಷ್ಟು ಸೌಲಭ್ಯಗಳನ್ನು ಕೊಟ್ಟಿದ್ದರೂ ಕೂಡ ಇದರಿಂದ ಹತ್ತರಲ್ಲಿ ಒಂದಂಶವಾದರೂ ಸಹ ಈ ಅನುಸೂಚಿತ ಜಾತಿಯವರಿಗೆ ಅನುಕೂಲವಾಗಿದೆಯೇ ಎನ್ನುವುದನ್ನು ವಿಚಾರ ಮಾಡಿದರೆ ಇದರ ಸಂಖ್ಯೆ ಕಡಿಮೆ ಎನ್ನುವುದು ಗೊತ್ತಾಗುತ್ತದೆ. ಹೀಗಿರುವಾಗ ಇನ್ನೂ ಹತ್ತು ವರ್ಷಗಳ ಕಾಲ ಈ ಅನುಸೂಚಿತ ವರ್ಗದವರಿಗೆ ಕೊಡುವ ಅನುಕೂಲಗಳನ್ನು ಮುಂದುವರಿಸಬೇಕು ಎಂದು ಹೇಳುವುದು ಅಷ್ಟು ಸರಿಯಲ್ಲ. ಅನುಸೂಚಿ ವರ್ಗದವರಿಗೆ ಅನುಕೂಲಗಳನ್ನು ಕೊಡುತ್ತಾ ಬಂದರೆ ಬೇರೆಯವರಿಗೆ ಅವಕಾಶಗಳು ಸಿಗುವುದಿಲ್ಲ. ಇಂದು ಅನುಸೂಚಿತ ವರ್ಗ ಒಂದೇ ಅಲ್ಲ ಹಿಂದುಳಿದಿರುವುದು. ಬ್ರಾಹ್ಮಣ ಹಾಗೂ ಬ್ರಾಹ್ಮಣೇತರರು ಎಂದು ಹೇಳಿದ್ದಾರೆ. ಇವರಲ್ಲಿ ಬ್ರಾಹ್ಮಣೇತರರು ಮುಂದೆ ಬಂದು ಕೆಲವು ಕಡೆ ಬ್ರಾಹ್ಮಣರು ಬಹಳ ಹೀನ ಸ್ಥಿತಿಯಲ್ಲಿ ಇರುವುದನ್ನು ನಾವು ಸಮಾಜದಲ್ಲಿ ಕಾಣುತ್ತಿದ್ದೇವೆ. ಹಿಂದೆ ಬ್ರಿಟೀಷರ ಕಾಲದಲ್ಲಿ ಯಾವ ರೀತಿಯಾಗಿ ಮೀಸಲು ಸ್ಥಾನಗಳನ್ನು ಇರಿಸಬೇಕೆಂದು ಮಾಡುತ್ತಿದ್ದರೋ ಅದರಂತೆ ಇಂದೂ ಕೂಡ

ಇನ್ನೂ ಹತ್ತು ವರ್ಷಕಾಲ ಮುಂದುವರಿಸಿಕೊಂಡು ಬರಬೇಕು ಎಂದು ಮಾಡುತ್ತಿದ್ದಾರೆ. ಇದರಲ್ಲಿ ಇಂದು ಜಾತಿಯ ವಾದವನ್ನು ತರುತ್ತಿದ್ದಾರೆ. ಬಡವರಾಗಿರುವವರು, ಹಿಂದುಳಿದವರು ಅವರು ಯಾವ ಜಾತಿಯವರೇ ಆಗಿರಲಿ. ಅವರಿಗೆ ಎಲ್ಲ ಸಹಾಯ ಸೌಕರ್ಯಗಳನ್ನು ಒದಗಿಸಿಕೊಡಲು ನಾವು ಅವಕಾಶ ಮಾಡಿಕೊಡಬೇಕು. ಎಲ್ಲಿಯವರೆಗೆ ಸರಕಾರ ಈ ಪ್ರಯತ್ನವನ್ನು ಪ್ರಾಮಾಣಿಕವಾಗಿ ಮಾಡುವುದಿಲ್ಲವೋ ಅಲ್ಲಿಯವರೆಗೆ ಈ ಜನ ಮುಂದೆ ಬರಲು ಸಾಧ್ಯವಿಲ್ಲ. ಪ್ರಾಮಾಣಿಕತನದಿಂದ ಇಂದು ಸರಕಾರ ಅನೇಕ ಸೌಲಭ್ಯಗಳನ್ನು ಹಿಂದುಳಿದ ವರ್ಗದವರಿಗಾಗಿ ಎಂದು ಕೋಟಿಗಟ್ಟಲೆ ಹಣವನ್ನು ಖರ್ಚು ಮಾಡುತ್ತಿದ್ದರೂ ಇನ್ನೂ ಈ ಹಿಂದುಳಿದ ವರ್ಗದವರು ಮುಂದೆ ಬಾರದೇ ಇರುವುದು ಒಂದು ದುಃಖದ ಸಂಗತಿ. ಇಪ್ಪತ್ತು ವರ್ಷಗಳಾದ ನಂತರವೂ ಈ ವರ್ಗದವರಿಗಾಗಿ ಇನ್ನೂ ಹತ್ತು ವರ್ಷಗಳ ಕಾಲ ಮೀಸಲಾತಿ ಮುಂದುವರಿಸಬೇಕಾಗಿ ಬಂದಿರುವುದು ಅನಿವಾರ್ಯವಾಗಿದೆ. ಇಂತಹುದನ್ನು ಮಾಡುವುದು ಸರಿಯಲ್ಲ.

ಎರಡನೆಯದು, ಇದರಲ್ಲಿ ಆಂಗ್ಲೊ ಇಂಡಿಯನ್ನರಿಗೆ ನಾಮಕರಣ ಮಾಡಬೇಕು ಎಂದು ಇದೆ. ಆಂಗ್ಲೊ ಇಂಡಿಯನ್ನರಿಗೇಕೆ ನಾಮಕರಣ ಮಾಡಬೇಕು. ಇಂತಹ ನಾಮಕರಣ ಮಾಡುವ ರೀತಿಯನ್ನು ನಾನು ಒಪ್ಪುವುದಿಲ್ಲ. ಇವರುಗಳು ಅಲ್ಪಸಂಖ್ಯಾತರು ಎಂದು ಇವರಿಗೆ ನಾಮಕರಣ ಮಾಡಬೇಕು ಎಂದು ಹೇಳುತ್ತಾರೆ. ಬ್ರಾಹ್ಮಣ ಹಾಗೂ ಬ್ರಾಹ್ಮಣೇತರರು ಎಂದು ಇರುವ ವರ್ಗದಲ್ಲಿ ಬ್ರಾಹ್ಮಣರು ಅಲ್ಪಸಂಖ್ಯಾತರು ಇರುತ್ತಾರೆ. ಲಿಂಗಾಯಿತರು ಹಾಗೂ ಲಿಂಗಾಯಿತೇತರರು ಎಂದು ಇರುವ ವರ್ಗದಲ್ಲಿ ಲಿಂಗಾಯಿತರು ಅಲ್ಪ ಸಂಖ್ಯಾತರು ಆಗಿರುತ್ತಾರೆ. ಒಕ್ಕಲಿಗರು ಹಾಗೂ ಒಕ್ಕಲಿಗರೇತರರು ಎಂದು ಇರುವವರಲ್ಲಿ ಒಕ್ಕಲಿಗರು ಅಲ್ಪ ಸಂಖ್ಯಾತರಾಗಿರುತ್ತಾರೆ. ಹಾಗೇ ಮುಸಲ್ಮಾನರು ಮತ್ತು ಮುಸಲ್ಮಾನೇತರ ಆಗಿರುವವರಲ್ಲಿ ಮುಸಲ್ಮಾನರು ಅಲ್ಪ ಸಂಖ್ಯಾತರಾಗಿರುತ್ತಾರೆ. ಹೀಗೆ ಪ್ರತಿಯೊಂದು ವರ್ಗದವರೂ ಅಲ್ಪ ಸಂಖ್ಯಾತರಾಗಿರುತ್ತಾರೆ. ಹೀಗಿರುವಾಗ ಆಂಗ್ಲೋ ಇಂಡಿಯನ್ನರಿಗೆ ಪ್ರತ್ಯೇಕ ನಾಮಕರಣ ಮಾಡಿ ಅವರಿಗೆಲ್ಲಾ ಸೌಲಭ್ಯಗಳನ್ನು ಕೊಡಬೇಕು ಎಂದು ಹೇಳುವುದರಲ್ಲಿ ಅರ್ಥವೇನಿದೆ? ಈ ದೇಶದಲ್ಲಿ ಎಲ್ಲರೂ ಸುಖದಿಂದ ಬಾಳಿ ಬದುಕಬೇಕು ಮತ್ತು ಆಂಗ್ಲೋ ಇಂಡಿಯನ್ ವರ್ಗದಲ್ಲಿ ಎಷ್ಟೋ ಶ್ರೀಮಂತರಿದ್ದಾರೆ ಮತ್ತು ಅವರಿಗೆ ಶಕ್ತಿಯೂ ಇದೆ. ಇಂತಹವರಿಗೆಲ್ಲಾ ನಾಮಕರಣ ಏಕೆ ಮಾಡಬೇಕು? ಇವರೂ ಕೂಡ ಸಮಾಜದ ಜನರ ಪ್ರೀತಿ

ವಿಶ್ವಾಸವನ್ನು ಗಳಿಸಿ ಜನರಿಂದ ಮತ ಪಡೆದು ಆರಿಸಿ ಬರುತ್ತಾರೆ. ಇಂದು ಆಂಗ್ಲೊ ಇಂಡಿಯನ್ನರಂತೆ ಪಾರ್ಸಿ ಜನರಿದ್ದಾರೆ. ಅವರುಗಳು ಅಲ್ಪ ಸಂಖ್ಯಾತರಾಗಿದ್ದರೂ ಅವರು ನಾಮಕರಣ ಮಾಡಬೇಕೆಂದು ಕೇಳುತ್ತಿಲ್ಲ. ಅವರು ಸಮಾಜದಲ್ಲಿ ಎಲ್ಲ ಜನರ ಪ್ರೀತಿ ವಿಶ್ವಾಸ ಪಡೆದು ಆರಿಸಿ ಬರುತ್ತಾರೆ. ಬಡತನ ಎನ್ನುವುದು ಆಂಗ್ಲೋ ಇಂಡಿಯನ್ನರಿಗೇ ಸೀಮಿತವಾಗಿಲ್ಲ. ಆಂಗ್ಲೋ ಇಂಡಿಯನ್ನರು ಯಾರು ಎನ್ನುವುದಕ್ಕೆ ನಮ್ಮ ರಾಜ್ಯಾಂಗದಲ್ಲಿ ಇರುವ 366ನೇ ನಿಯಮದಲ್ಲಿ ಈ ರೀತಿ ವ್ಯಾಖ್ಯೆ ಕೊಟ್ಟಿದ್ದಾರೆ.

(2) "an Anglo-Indian" means a person whose father or any of whose other male progenitors in the male line is or was of European descent but who is domiciled within the territory of ndia and is or was born within such territory of parents habitually resident therein and not established there for temporary purposes only;"

ಇವರು ತಾತ್ಕಾಲಿಕವಾಗಿ ಇರತಕ್ಕ ಜನಾಂಗವಲ್ಲ. ಇಂತಹ ಜನಾಂಗದವರು ಈ ದೇಶದಲ್ಲೇ ಇದ್ದಾರೆ. ದೇಶದ ರಾಷ್ಟ್ರೀಯ ಪ್ರವಾಹದಲ್ಲಿ ಇವರೂ ಒಂದಾಗಬೇಕಾಗಿದೆ. ಅವರು ದೇಶದ ಜನಾಂಗವೆಂದು ಒಪ್ಪಿಕೊಳ್ಳಬೇಕಾಗಿದೆ. ಅವರು ದೇಶದ ಜನಾಂಗ ಎಂದ ಮೇಲೆ ನಾಮಕರಣ ಬೇಡ, ಆರಿಸಿ ಬರುತ್ತೇವೆ ಎಂದು ಹೇಳುವ ಯೋಗ್ಯತೆ ಅವರಲ್ಲಿರಬೇಕು. ಇಲ್ಲಿ ಬಹು ಸಂಖ್ಯಾತರು ಹಾಗೂ ಅಲ್ಪ ಸಂಖ್ಯಾತರು ಎನ್ನುವ ಪ್ರಶ್ನೆ ಬರುವುದಿಲ್ಲ. ಇದು ಅತ್ಯಂತ ದುಃಖದ ಪರಿಸ್ಥಿತಿ, ಪ್ರಜಾಪ್ರಭುತ್ವದಲ್ಲಿ ಯೋಗ್ಯರನ್ನು ಆರಿಸಬೇಕು. ಯಾವ ಜಾತಿ, ಪಂಗಡ ಗುಂಪೇ ಆಗಲೀ ಈ ಪ್ರಜಾ ಪ್ರಭುತ್ವದಲ್ಲಿ ಯಾರು ಜನತೆಗೆ ಸವಲತ್ತುಗಳನ್ನು ಒದಗಿಸಿ ಕೊಡಬಲ್ಲರೋ ಅಂತಹ ಯೋಗ್ಯರನ್ನೇ ಆರಿಸಬೇಕಾಗಿದೆ. ಜಾತಿ ಜಾತಿ ಎಂದು ರಿಸರ್ವೇಷನ್ ಮಾಡುತ್ತಾ ಹೋದರೆ ಶಾಸನ ಮಾಡುವವರು ಸರಕಾರ ನಡೆಸಿಕೊಂಡು ಹೋಗತಕ್ಕವರು ದೇಶವನ್ನು ಆಳಲು ಜವಾಬುದಾರಿ ಹೊತ್ತುವರು ಈ ರೀತಿ ಜಾತೀಯ ವಾದವನ್ನು ಜನತೆಯ ಮುಂದೆ ಇಟ್ಟರು ಎಂದು ಬರುತ್ತದೆ. ಈ ದೃಷ್ಟಿಯಿಂದ ಆಂಗ್ಲೋ ಇಂಡಿಯನ್ನರಿಗೆ ಏತಕ್ಕೆ ನಾಮಕರಣ ಕೊಡಬೇಕು? ಅವರು ಅಸ್ಪೃಶ್ಯರಲ್ಲ. ಹಿಂದುಳಿದವರಲ್ಲ, ಪರಿಶಿಷ್ಟ ವರ್ಗದವರಲ್ಲ. ಅವರಿಗೆ ವಿಶೇಷವಾದ ಸವಲತ್ತನ್ನು ಕೊಟ್ಟು ಕುರ್ಚಿ ಕೊಟ್ಟು ಪೂಜೆ ಮಾಡುತ್ತಾ ಬರಬೇಕು

ಎನ್ನುವುದರಲ್ಲಿ ಅರ್ಥವಿಲ್ಲ. ನಮ್ಮ ದೇಶಲ್ಲಿ 48 ಕೋಟಿ ಪ್ರಜೆಗಳೆಲ್ಲರೂ ದೇಶದ ಮಕ್ಕಳು. ಯಾರಿಗೆ ಅವಕಾಶ ಇದೆಯೋ ಅವರಿಗೆ ಸವಲತ್ತು ಕೊಡುವುದರಲ್ಲಿ ಅಭ್ಯಂತರವಿಲ್ಲ. ಎಲ್ಲರಿಗೂ ಈ ಕ್ವಾಲಿಟಿ ಆಫ್ ಅಪರ್ಚ್ಯೂನಿಟಿ ಕೊಡಬೇಕಾಗುತ್ತದೆ. ಎಲ್ಲರೂ ಒಂದೇ ವಿಧವಾದ ಸವಲತ್ತು ಪಡೆಯಲು ಅವಕಾಶ ಇರಬೇಕು. ಆ ರೀತಿ ಇಲ್ಲದೆ ಜಾತೀಯ ಆಧಾರದ ಮೇಲೆ ಸವಲತ್ತುಗಳನ್ನು ಕೊಡುವುದು ಸರಿಯಲ್ಲ. ಪರಿಶಿಷ್ಟ ವರ್ಗದವರಾದರೂ ಕೂಡ ಅವರಲ್ಲಿ ಕೆಲವರು ರಷ್ಯ, ಅಮೇರಿಕಾ, ಜಪಾನ್ ಇತ್ಯಾದಿ ದೇಶಗಳಲ್ಲಿ ಓಡಾಡಿಕೊಂಡು ಬಂದಿರುವವರು ಇದ್ದಾರೆ. ಅತ್ಯಂತ ಮುಂದುವರಿದ ಕೋಮಿನವರಾದ ಬ್ರಾಹ್ಮಣರಲ್ಲಿ ಕೂಡ ಅಕ್ಷರ ಜ್ಞಾನವಿಲ್ಲದೇ ರಸ್ತೆಯಲ್ಲಿ ಕೊಳೆಯತಕ್ಕ ಜನರೂ ಇದ್ದಾರೆ. ಆದ್ದರಿಂದ ಯಾರಿಗೆ ಅವಕಾಶ ಇದೆಯೋ ಅವರಿಗೆ ಸವಲತ್ತುಗಳನ್ನು ಕೊಡಬೇಕು. ಯಾವ ಜಾತಿ ಪಂಗಡದವರೇ ಆಗಲೀ ಅವರು ತಮ್ಮ ಕಾಲ ಮೇಲೆ ನಿಲ್ಲತಕ್ಕ ಪ್ರಯತ್ನ ಮಾಡಬೇಕು. ಆಂಗ್ಲೋ ಇಂಡಿಯನ್ನರು, ಪಾರ್ಸಿಯವರು ಎಂದು ಅವರನ್ನು ಸ್ಥಾನಗಳಿಗೆ ನಾಮಕರಣ ಮಾಡುತ್ತಾ ಹೋದರೆ, ಆಗ ಚುನಾವಣೆ ಮಾಡುವ ಅಗತ್ಯವೇ ಇಲ್ಲ. ಕಾರಣ ನಮ್ಮ ದೇಶದಲ್ಲಿ ಸಾವಿರಾರು ಜಾತಿಗಳಿವೆ. ಎಲ್ಲರೂ ಪರಸ್ಪರ ಪೂರಕವಾಗಿ ಪರಸ್ಪರ ವಿರೋಧವಿಲ್ಲದೆ ದೇಶದ ಮಕ್ಕಳ ಹಾಗೆ ಬಾಳಿ ಬದುಕಬೇಕಾಗಿದೆ.

ಇವತ್ತು ಜಾತಿಯ ಆಧಾರವಿಲ್ಲದೆ ಸ್ವಂತ ಶಕ್ತಿಯಿಂದ ಆರಿಸಿ ಬರುವಂಥ ಶಕ್ತಿ ಯಾರಿಗೂ ಇಲ್ಲ. ಇವತ್ತು ಜಾತಿಯ ಹೆಸರಿನಲ್ಲಿ ಎಲ್ಲರೂ ಕೆಲಸ ಮಾಡುತ್ತಿದ್ದಾರೆ. ಇವತ್ತು ಕೊಂಕಣಿ ಭಾಷೆ ಮಾತನಾಡುವವರು ಮತ್ತು ಗೌಡ ಸಾರಸ್ವತರು ಬಹಳ ಅಲ್ಪಸಂಖ್ಯೆಯಲ್ಲಿದ್ದಾರೆ. ಇಂತಹವರು ಜಾತಿಯ ಆಧಾರದ ಮೇಲೆ ಆರಿಸಿ ಬರುವುದು ಕಷ್ಟ. ನಾನೂ ಸಹ ಪದವೀಧರರ ಕ್ಷೇತ್ರದಿಂದ ಆರಿಸಿ ಬರುವುದು ಕಷ್ಟದ ಕೆಲಸವಾಗಿತ್ತು. ನಮ್ಮ ಕೊಡಗಿನಲ್ಲಿ ಕೇವಲ 300 ಜನ ಮಾತ್ರ ಪದವೀಧರರ ಕ್ಷೇತ್ರದಿಂದ ಓಟು ಮಾಡುವವರು ಇದ್ದಾರೆ. ಜನತೆಯ ಕಷ್ಟಗಳನ್ನು ಯಾರು ಸರಿಯಾಗಿ ತಿಳಿದುಕೊಂಡು ಅದನ್ನು ನಿವಾರಣೆ ಮಾಡಲು ಹೋರಾಟ ಮಾಡುತ್ತಾರೋ ಅಂತಹವರಿಗೆ ಚುನಾವಣೆಯಲ್ಲಿ ಗೆಲ್ಲುವುದು ಕಷ್ಟವಿದೆ. ಏತಕ್ಕೆಂದರೆ ಕೆಲವು ನಾಯಕರು ತಮ್ಮ ಸ್ವಂತ ಉಪಯೋಗಕ್ಕೋಸ್ಕರ ಜಾತಿಯನ್ನು ಉಪಯೋಗಿಸಿಕೊಂಡು ಜನತೆಯನ್ನು ಹಾಳು ಮಾಡುತ್ತಿದ್ದಾರೆ. ತಾತ್ಕಾಲಿಕವಾದಂಥ ಕೆಲವು ಸವಲತ್ತುಗಳನ್ನು ಪಡೆದುಕೊಳ್ಳಲು ಕೆಲವರು ಜಾತಿಯುನ್ನು

ಉಪಯೋಗಿಸಿಕೊಂಡು ಸಮಾಜವನ್ನು ಕೆಡಿಸುತ್ತಿದ್ದಾರೆ. ಇನ್ನು ಮುಂದೆ ಆಂಗ್ಲೋ ಇಂಡಿಯನ್ಸ್‌ಗೆ ನಾಮಕರಣ ಮಾಡುವ ಅಗತ್ಯ ಇಲ್ಲ. ಏಕೆಂದರೆ ಅವರಿಗೆ ಸ್ವಂತ ಶಕ್ತಿಯಿಂದ ಆರಿಸಿ ಬರುವಂಥ ಅವಕಾಶ ಇದೆ. ಇದೇ ಪದ್ಧತಿಯನ್ನು ಮುಂದುವರಿಸಿದರೆ ಅವರು ಜನಸಾಮಾನ್ಯರ ಮುಂದೆ ಹೋಗಿ ಅವರ ಕಷ್ಟ ಸುಖಗಳನ್ನು ಕೇಳುವುದಿಲ್ಲ. ಅವರು ಸಹ ಈ ದೇಶದ ಜನರಲ್ಲಿ ಒಂದಾಗಿ ಬೆರೆತು ಹೋಗುವುದು ಅವಶ್ಯಕವಿದೆ. ಪಾರ್ಸಿ ಜನಾಂಗದವರು ನಮ್ಮ ದೇಶಕ್ಕೆ ಬಂದಮೇಲೆ ತಮ್ಮ ಸರ್ವಸ್ವವನ್ನು ಧಾರೆ ಎರೆದು ಜನಸಾಮಾನ್ಯರಲ್ಲಿ ಬೆರೆತುಕೊಂಡರು. ಅಂತಹವರನ್ನು ಜನಸಾಮಾನ್ಯರು ಬೇಕಾದರೆ ಆರಿಸಿ ಶಾಸನಸಭೆಗೆ ಮತ್ತು ಸಂಸತ್ತಿಗೆ ಕಳಿಸುತ್ತಾರೆ. ಜಾತಿಯ ಹೆಸರನ್ನು ಹೇಳಿಕೊಂಡು ಆರಿಸಿ ಬರುವವರು ಯಾವ ಕೆಲಸವನ್ನೂ ಸಹ ಮಾಡುವುದಿಲ್ಲ. ಯಾರು ನಿಷ್ಪಕ್ಷಪಾತವಾಗಿ ಜಾತ್ಯಾತೀತ ಮನೋಭಾವನೆಯಿಂದ ಕೆಲಸ ಮಾಡುತ್ತಾರೋ ಅಂತಹವರನ್ನು ಜನರು ಆರಿಸಿ ಕಳಿಸಬೇಕು. ಈ ಕಾರಣದಿಂದ ಇನ್ನು ಮುಂದೆ ಆಂಗ್ಲೋ ಇಂಡಿಯನ್ನರನ್ನು ನಾಮಕರಣ ಮಾಡುವುದು ಪ್ರಜಾಪ್ರಭುತ್ವಕ್ಕೆ ಯೋಗ್ಯವಲ್ಲ. ಪರಿಶಿಷ್ಟ ಜಾತಿಯವರಿಗೂ ಕೂಡ ಈ ಒಂದು ಅವಕಾಶವನ್ನು ಮುಂದುವರಿಸಿಕೊಂಡು ಹೋಗುವುದು ಒಳ್ಳೆಯ ನೀತಿ ಅಲ್ಲದಿದ್ದರೂ ಕೂಡ ಮೊದಲಿನಿಂದ ಆ ಒಂದು ಪರಿಸ್ಥಿತಿ ನಡೆದುಕೊಂಡು ಬಂದಿರುವುದರಿಂದ ಮುಂದುವರೆಸಬೇಕಾಗುತ್ತದೆ. ಇನ್ನು 10 ವರ್ಷದ ನಂತರ ಈ ಜನಾಂಗದವರು ಸಹ ಎಲ್ಲರಂತೆ ಮುಂದುವರೆದಿದ್ದಾರೆ ಎನ್ನುವಂತಾಗಬೇಕು. ಆ ಒಂದು ಆಶೆಯನ್ನು ನಾನು ಇಟ್ಟುಕೊಂಡಿದ್ದೇನೆ. ಆದರೆ ಆಂಗ್ಲೋ ಇಂಡಿಯನ್ನರನ್ನು ನಾಮಕರಣ ಮಾಡುವುದನ್ನು ನಾನು ವಿರೋಧಿಸುತ್ತೇನೆ.

# ಮನಸ್ಸು ಬಂದಂತೆ ಶಾಸನ ಮಾಡಬಾರದು

**18ನೇ ಜೂನ್ 1973**

**ಶ್ರೀ ಎ.ಕೆ. ಸುಬ್ಬಯ್ಯ:** ಮಾನ್ಯ ಅಧ್ಯಕ್ಷರೇ, ನಾವು ಈ ದಿವಸ ಚರ್ಚೆ ಮಾಡುತ್ತಾ ಇರುವುದು ಮೈಸೂರು ಸ್ಟೇಟ್ ಸಿವಿಲ್ ಸರ್ವಿಸಸ್ ರೆಗ್ಯುಲೇಶನ್ ಆಫ್ ಪ್ರೊಮೋಷನ್ ಪೇ ಅಂಡ್ ಪೆನ್ಷನ್ ಬಿಲ್–1973, ಇದನ್ನು ನೋಡಿದಾಗ ನನಗೆ ಒಂದು ರೀತಿಯ ತಮಾಶೆ ಇದರಲ್ಲಿ ಕಾಣುತ್ತದೆ. ನಾವು ಒಂದು ಶಾಸನ ಮಾಡುವಾಗ ನಮಗೆ ಮನಸ್ಸು ಬಂದ ಹಾಗೆ ಶಾಸನ ಮಾಡುವುದಕ್ಕಾಗುವುದಿಲ್ಲ. ಜೂನ್ ತಿಂಗಳಲ್ಲಿ ಬೆಂಗಳೂರಿನಲ್ಲಿ ಮಳೆ ಬರಬಾರದೆಂದು ಶಾಸನ ಮಾಡುವುದಕ್ಕಾಗುವುದಿಲ್ಲ ಅಥವಾ ರಾಜ್ಯದಲ್ಲಿ ಗಂಡು ಮಕ್ಕಳು ಹುಟ್ಟಬಾರದೆಂದು ಶಾಸನ ಮಾಡುವುದಕ್ಕಾಗುತ್ತದೆಯೇ? ಹಾಗೆ ಮಾಡಿದರೆ ಅದನ್ನು ಮೂರ್ಖ ಶಾಸನ ಎಂದು ಕರೆಯುತ್ತಾರೆ. ಅದೇ ಹೆಸರನ್ನು ಇದಕ್ಕೆ ಕೊಡಬೇಕಾಗುತ್ತದೆ. ಇದರಲ್ಲಿ ಒಂದು ಕಡೆ ಒಂದು ಸೇವಿಂಗ್ ಕ್ಲಾಸ್ ಇದೆ. ಶಾಸನ ಮಾಡುವಾಗ ಅದನ್ನು ರಾಜ್ಯಾಂಗಕ್ಕೆ ವಿರುದ್ಧವಾಗಿ ಮಾಡುವುದಕ್ಕಾಗುವುದಿಲ್ಲ. ಅದರಲ್ಲಿ ಈ ರೀತಿ ಹೇಳಿದ್ದಾರೆ.

"Save as provided in section 11, nothing in this Act shall be deemed to effect the operation of the provisions of the Constitution of India in relation to the determination of the conditions of service of persons serving in connection with the affairs of the State of Mysore." ಎಂದು

ಈ ಹನ್ನೊಂದನೇ ಸೆಕ್ಷನ್ ಬಿಟ್ಟು ಬಾಕಿಯದನ್ನು ಕಾನ್ಸ್ಟಿಟ್ಯೂಷನ್ನಿಗೆ ಅಫೆಕ್ಟ್ ಮಾಡುವುದಕ್ಕಾಗುವುದಿಲ್ಲ. ಕಾನ್ಸ್ಟಿಟ್ಯೂಶನ್ನಿಗೆ ಅಫೆಕ್ಟ್ ಆಗುವ ಹಾಗೆ ಒಂದು ಲಾ ಮಾಡುವುದಕ್ಕಾಗತ್ತದೆಯೋ ಎಂದು ಕೇಳುತ್ತೇನೆ. ಮೊಟ್ಟಮೊದಲನೆಯದಾಗಿ ಎಲಿಮೆಂಟರಿ ಪ್ರಿನ್ಸಿಪಲ್ ಆಫ್ ಲಾ ಗೊತ್ತಿರಬೇಕು. "Save as provided under Section 11".-That means, section 11 will override the Constitution according to their own Statement. When there is a conflict between the Constitution of India and Section 11, according to them it is Section 11 that should prevail and not the Constitution. This will not stand scrutiny of the High Court or the Supreme Court even for a minute Admittedly Section 11 is unconstitutional.

ಅದೇ ರೀತಿ ಕಾನ್‌ಸ್ಟಿಟ್ಯೂಷನ್ನಿನ ಪ್ರಾವಿಷನನ್ನು 13ನೇ ಕ್ಲಾಜ್‌ನಲ್ಲಿ ಉಳಿಸಿದ್ದಾರೆ. ಎಷ್ಟು ಚೆನ್ನಾಗಿ ಇದನ್ನು ಡ್ರಾಫ್ಟ್ ಮಾಡಿದ್ದಾರೆ ಎಂಬುದನ್ನು ನಾವು ವಿಚಾರ ಮಾಡಬೇಕಾಗುತ್ತದೆ. ಎರಡನೆಯದಾಗಿ ಈ ಒಂದು ಮಸೂದೆಯನ್ನು ತರುವುದಕ್ಕೆ ಕೆಲವು ಕಾರಣಗಳನ್ನು ಕೊಟ್ಟಿದ್ದಾರೆ. ಒಂದು ಕಾರಣ, ಸುಪ್ರೀಂಕೋರ್ಟಿನ ಜಡ್ಜ್‌ಮೆಂಟ್. ಅದರಲ್ಲಿ ಎರಡು ಕೇಸುಗಳನ್ನು ಕೊಟ್ಟಿದ್ದಾರೆ. ಅವು ಯಾವುವೆಂದರೆ, Ajit Singh Vs. State of Punjab and Aleppy Vs. All India Supreme Court. ಅದರ ಪ್ರಕಾರ ಜುಡಿಷಿಯಲ್ ಆಫೀಸುಗಳಿಗೆ ರಿಟ್ರಾಸ್ಪೆಕ್ಟಿವ್ ಡೇಟವಾದ ಅಪಾಯಿಂಟ್‌ಮೆಂಟ್ ಮಾಡುವುದಕ್ಕಾಗುವುದಿಲ್ಲ. ಇಲ್ಲಿ ರಿಟ್ರಾಸ್ಪೆಕ್ಟಿವ್ ಪ್ರೊಮೋಷನ್‌ಗೆ ಅವಕಾಶ ತೆಗೆದುಹಾಕಿದ್ದಾರೆ. ರಿಟ್ರಾಸ್ಪೆಕ್ಟಿವ್ ಎಫೆಕ್ಟ್‌ನಿಂದ ಅಪಾಯಿಂಟ್‌ಮೆಂಟ್ ಕೊಡುವುದು ಮತ್ತು ರಿಟ್ರಾಸ್ಪೆಕ್ಟಿವ್ ಎಫೆಕ್ಟ್‌ನಿಂದ ಪ್ರೊಮೋಷನ್ ಕೊಡುವುದು. they are different even for judicial posts, Promotions can be given with ratrospective effect. ನೌಕರಿಯನ್ನು ರಿಟ್ರಾಸ್ಪೆಕ್ಟಿವ್ ಎಫೆಕ್ಟ್‌ನಿಂದ ಕೊಡುವುದಕ್ಕಾಗುವುದಿಲ್ಲ. ಮಂತ್ರಿಗಳನ್ನೂ ರಿಟ್ರಾಸ್ಪೆಕ್ಟಿವ್ ಎಫೆಕ್ಟ್‌ನಿಂದ ನೇಮಕ ಮಾಡುವುದಕ್ಕಾಗುವುದಿಲ್ಲ. ಎಂ.ಎಲ್.ಸಿ. ಯವರನ್ನು ರಿಟ್ರಾಸ್ಪೆಕ್ಟಿವ್ ಡೇಟ್ ನಿಂದ ಶಾಸಕನನ್ನಾಗಿ ಮಾಡುವುದಕ್ಕೆ ಸಾದ್ಯವೇ? Giving promotion and appointing a person with retrospective effect-they are two different things. ಪ್ರೊಮೋಷನ್ ಪಡೆಯುವುದಕ್ಕೆ ಯಾವಾಗ ಹಕ್ಕುದಾರನಾಗುತ್ತಾನೋ ಆ ತಾರೀಖಿನಿಂದ ಪ್ರೊಮೋಷನ್ ಕೊಡುವಂತಾಗಬೇಕು. 1964ನೇ ಇಸವಿ ಜನವರಿಯಲ್ಲಿ ಪ್ರೊಮೋಷನ್ನಿಗೆ ಹಕ್ಕುದಾರನಾಗಿದ್ದರೆ, ಆಗ ಆ ಡೇಟ್‌ನಿಂದ ಅದನ್ನು ಕೊಡಬೇಕು. ಆದರೆ ಅಪಾಯಿಂಟ್‌ಮೆಂಟನ್ನು ರಿಟ್ರಾಸ್ಪೆಕ್ಟಿವ್ ಎಫೆಕ್ಟ್‌ನಿಂದ ಕೊಡುವುದಕ್ಕಾಗುವುದಿಲ್ಲ. ಮಾನ್ಯ ಶ್ರೀ ಬೊಮ್ಮಾಯಿ ಅವರು ಹೇಳಿದ ಹಾಗೆ ಈಗ ಸುಪ್ರೀಂಕೋರ್ಟಿನ ಕೇಸಿನ ಜಡ್ಜ್‌ಮೆಂಟಿಗೂ ಮತ್ತು ಈ ಮಸೂದೆಯಲ್ಲಿ ಅಡಗಿರುವ ತತ್ವಕ್ಕೂ ಏನೇನೂ ಸಂಬಂಧವಿಲ್ಲ. ಇದು ಇಮಾಂಸಾಬಿಗೂ ಗೋಕುಲಾಷ್ಟಮಿಗೂ ಸಂಬಂಧ ಇದ್ದಹಾಗೆ ಇದೆ. ಅಜೀತ್ ಸಿಂಗ್ ವರ್ಸಸ್ ಸ್ಟೇಟ್ ಆಫ್ ಪಂಜಾಬ್–ಈ ಕೇಸ್ ಬಗ್ಗೆ ರಿಪೋರ್ಟ್ ಆಗಿರುವುದರಲ್ಲಿ ಈ ರೀತಿಯಾಗಿ ಹೇಳಿದೆ. “The question for decision by the Supreme Court was, an Officer, called the Consolidation Officer who had exercised certain powers under the Punjab Holding Consolidation (prevention of Fragmentation) Act, 1949 had not been validly appointed by the State

Government at the time when he exercised his powers. the Court held that it the time he exercised the Statutory powers, he was not appointed by the Government.. ಸ್ಟಾಚ್ಯೂಟರಿ ಬೋರ್ಡ್ ಲ್ಯಾಂಡ್ ಅಕ್ವೈರ್ ಮಾಡುವಾಗ he was not appointed by the Government as such Officer. ಆಮೇಲೆ ರಿಟ್ರಾಸ್ಪೆಕ್ಟಿವ್ ಎಫೆಕ್ಟ್‌ನೊಳಗೆ ಅವನಿಗೆ ಅಪಾಯಿಂಟ್‌ಮೆಂಟ್ ಕೊಟ್ಟು ಅನ್‌ಆತರೈಜ್ ಆ್ಯಕ್ಟನ್ನು ಆತರೈಜ್ ಮಾಡುವುದಕ್ಕೆ ನೋಡಿದರು. “It was held that the Satutory power exercised by him without the authority of law cannot be validated by means of a retrospective order by appointing him as Consolidation Oficer with retrospective effect.”

ಮಾನ್ಯ ಶ್ರೀ ಪರಮೇಶ್ವರಪ್ಪನವರು ಹೈಕೋರ್ಟ್ ಜಡ್ಜ್‌ಗಳಲ್ಲ. ಅವರು ಒಬ್ಬರನ್ನು ಹ್ಯಾಂಗ್ ಮಾಡಬೇಕೆಂದು ಜಡ್ಜ್‌ಮೆಂಟ್ ಬರೆಯುತ್ತಾರೆ ಎಂದು ಇಟ್ಟುಕೊಳ್ಳೋಣ It is invalid. It is just similar to that. ರಿಟ್ರಾಸ್ಪೆಕ್ಟಿವ್ ಎಫೆಕ್ಟಿನಿಂದ ಅವರನ್ನು ಮುಂದೆ ಹೈಕೋರ್ಟ್ ಜಡ್ಜ್ ಮಾಡಿದರೂ ಅವರು ಅಧಿಕಾರ ಇಲ್ಲದೆ ಹಿಂದೆ ಮಾಡಿದ್ದು ಅಧಿಕೃತ ಆರ್ಡರ್ ಆಗುವುದಿಲ್ಲ. ಆದರೆ From the date of their illegal promotion up to the date of reversion, ಅವರು ಮಾಡಿದ ಎಲ್ಲಾ ಕೆಲಸ ಸೊನ್ನೆಯಾಗುವುದಿಲ್ಲ. There is ample difference between these two. Legally or illegally, rightly or wrongly, he has been promoted. Under that promotion order, he has been functioning till he has been reverted. How do you nullify it? Here is a case. Ajit Sngh Vs. State of Punjab. He has been appointed under the Punjab Government with retrospective effect. The retrospective order cannot authorise him to make his action valid, ಆದ್ದರಿಂದ ಈ ಬಿಲ್ಲಿನಲ್ಲಿ ಅಡಗಿರುವ ತತ್ವಕ್ಕೂ ಇದಕ್ಕೂ ಏನೇನೂ ಸಂಬಂಧವಿಲ್ಲ.

**ಶ್ರೀ ಬಸವರಾಜಕಟ್ಟೀಮನಿ:** ಪ್ರಜಾಪ್ರಭುತ್ವದಲ್ಲಿ ಪರಮಾಧಿಕಾರ ಇರುವುದು ನ್ಯಾಯಾಂಗಕ್ಕೋ ಅಥವಾ ಶಾಸಕಾಂಗಕ್ಕೋ?

**ಶ್ರೀ ಎ.ಕೆ. ಸುಬ್ಬಯ್ಯ:** ಪ್ರಜಾಪ್ರಭುತ್ವದ ಸರ್ವಾಧಿಕಾರ ರಾಜ್ಯಾಂಗಕ್ಕೆ ಇರಬೇಕಾಗುತ್ತದೆ. ಶಾಸಕಾಂಗಕ್ಕೆ ಸರ್ವಾಧಿಕಾರ ಬರಬೇಕಾದರೆ ಯಾರು ರಾಜ್ಯಾಂಗವನ್ನು ಮಾಡಿದ್ದಾರೆಯೋ ಆ ಜನರೇ ಒಂದು ಹೊಸ ರಾಜ್ಯಾಂಗವನ್ನು

ಮಾಡುವವರೆಗೆ ಈ ಕಾನ್‌ಸ್ಟಿಟ್ಯೂಷನ್ ಪ್ರಕಾರ ಶಾಸಕಾಂಗ ಅಂದರೆ ಪಾರ್ಲಿಮೆಂಟ್ ಮತ್ತು ಲೆಜಿಸ್ಲೇಚರ್ ಎಲ್ಲಾ ನಡೆಯಬೇಕಾಗುತ್ತದೆ. ಈಗ ಕೆಲವು ಹಕ್ಕುಗಳನ್ನು ಜನಗಳಿಗೆ ಕೊಡುವಾಗ, ಆ ಕಾನೂನು ತಪ್ಪು ಇದ್ದರೆ ಆ ಕಾನೂನನ್ನು ಬದಲಾಯಿಸುವುದು ನಮ್ಮ ಜವಾಬ್ದಾರಿ. ಆದರೆ ಯಾವ ಕಾನೂನೇ ಆದರೂ ಅದು ಸಂವಿಧಾನಕ್ಕೆ ವಿರುದ್ಧವಾಗಿ ಆಗುವಂಥಾದ್ದಲ್ಲ. ಕಾನೂನು ಪ್ರಕಾರ ಕೋರ್ಟಿನಲ್ಲಿ ಪಡೆದಿರುವ ಹಕ್ಕನ್ನು ಸಿಕ್ಕದ ಹಾಗೆ ಮಾಡುವಂತಾದ್ದು ನಿಜವಾಗಿಯೂ ಸರಿಯಾದುದಲ್ಲ. ಈ ಕಾನೂನನ್ನು ಮೂರ್ಖ ಶಾಸನ ಎಂದು ಕರೆಯಬಹುದು. ಈ ಮಸೂದೆಯನ್ನು ನ್ಯಾಯಾಲಯ ನೋಡಿ ನಗಲು ಅವಕಾಶವಾಗುವುದು. ಇದನ್ನು ಇಲ್ಲಿ ಪಾಸು ಮಾಡಿದರೂ ಕೂಡ ಇದು ಫೈನಲ್ ಆಗುತ್ತದೆ ಎಂದು ಯಾರೂ ತಿಳಿಯಬೇಕಾಗಿಲ್ಲ. ಇದು ಕೋರ್ಟಿನಲ್ಲಿ ನಿಲ್ಲುವುದಿಲ್ಲ ಎಂಬುದು ಇದನ್ನು ನೋಡಿದ ತಕ್ಷಣ ಗೊತ್ತಾಗುತ್ತದೆ.

ಇದು ಹಣ ಉಳಿಸುವ ಪ್ರಶ್ನೆ ಅಲ್ಲ. ಒಂದು ವೇಳೆ ಹಣ ಉಳಿಸುವ ಉದ್ದೇಶದಿಂದ ಇದನ್ನು ಪಾಸ್ ಮಾಡಬಹುದು ; ಆ ರೀತಿ ಪಾಸ್ ಮಾಡಿದ ಮೇಲೆ ಯಾರಾದರೂ ಮತ್ತೆ ಹೈಕೋರ್ಟಿಗೆ ಮತ್ತು ಸುಪ್ರೀಂಕೋರ್ಟಿಗೆ ಹೋಗಿ ಅಲ್ಲಿ ಅವರು ಪುನಃ ಪ್ರಮೋಷನ್ ಕೊಡಲೇಬೇಕು ಎಂದು ತೀರ್ಮಾನ ಕೊಟ್ಟರೆ ಆಗ ಸರ್ಕಾರದವರು ಹಣವನ್ನು ಸೇರಿಸಿ ಕೊಡಬೇಕಾಗುತ್ತದೆ. ಆದ್ದರಿಂದ ಇದನ್ನು ಸರ್ಕಾರದವರು ಪಾಸ್ ಮಾಡದೆ ಹಿಂತೆಗೆದುಕೊಳ್ಳುವುದು ಒಳ್ಳೆಯದೆಂದು ಹೇಳುತ್ತೇನೆ. ಈ ಕಾನೂನಿನಿಂದ ಈ ಸದನಕ್ಕಾಗಲೀ, ಕೆಳಮನೆಗಾಗಲೀ, ಸರ್ಕಾರದ ಲಾ-ಸೆಕ್ರೆಟೇರಿಯಟ್‌ಗಾಗಲೀ ಗೌರವ ಬರುವುದಿಲ್ಲ. ಇದರಿಂದ ಇನ್ನಷ್ಟು ಹಣ ಕೊಡುವ ಸನ್ನಿವೇಶವೇ ನಿರ್ಮಾಣವಾಗುತ್ತದೆಂದು ಹೇಳುತ್ತೇನೆ. ಇದು ಅರ್ಥವಿಲ್ಲದ ಶಾಸನವಾಗಿದೆ. ಮತ್ತು ರಾಜ್ಯಾಂಗಕ್ಕೆ ವಿರುದ್ಧವಾಗಿದೆ. ಆದ್ದರಿಂದ ಇದನ್ನು ವಾಪಸ್ ತೆಗೆದುಕೊಂಡು, ನಾನು ಈಗ ಏನು ಕೆಲವು ಹೈಕೋರ್ಟಿನ ಜಡ್ಜ್‌ಮೆಂಟ್‌ಗಳನ್ನು ಓದಿದೆ. ಅವನ್ನು ಲಾ-ಸೆಕ್ರೆಟರಿಯವರಿಗೆ ರೆಫರ್ ಮಾಡಿ, ಅದರ ಬಗ್ಗೆ ಅವರ ಅಭಿಪ್ರಾಯವನ್ನು ತೆಗೆದುಕೊಳ್ಳಬಹುದು. ಅವರು ಇಂತಹ ಕಾನೂನು ಮಾಡಬಹುದು ಎಂದು ಮತ್ತೆ ಹೇಳಿದರೆ, ಆರ್ಟಿಕಲ್ 309ರ ಪ್ರಕಾರ ತಾವು ಇದರ ಬಗ್ಗೆ ಒಂದು ರೂಲ್ಸ್ ಹೊರಡಿಸಬಹುದು. ಆದರೆ ಈ ಸದನದಲ್ಲಿ ಈಗಲೇ ಈ ಮಸೂದೆಯನ್ನು ಅಂಗೀಕರಿಸಬಾರದು ಎಂದು ಹೇಳಿ ನನ್ನ ಅಭಿಪ್ರಾಯವನ್ನು ಮುಕ್ತಾಯ ಮಾಡುತ್ತೇನೆ.

## ಸುಗ್ರೀವಾಜ್ಞೆ ಹೊರಡಿಸುವ ಅಗತ್ಯ ಏನಿತ್ತು?

**17ನೇ ಜುಲೈ 1978**

**(ಮೈಸೂರು ನಗರಾಭಿವೃದ್ಧಿ (ತಿದ್ದುಪಡಿ) ಮಸೂದೆ - 1978)**

**ಶ್ರೀ ಎ.ಕೆ. ಸುಬ್ಬಯ್ಯ:** ಈ ಮಸೂದೆಯಲ್ಲಿ ಒರಿಜನಲ್ ಸೆಕ್ಷನ್ 10 (2)ಕ್ಕೆ ತಿದ್ದುಪಡಿ ಮತ್ತು 25(ಎ) ಎಂದು ಹೊಸ ಸೆಕ್ಷನ್ ಸೇರಿಸಿ, ಅದಕ್ಕೆ ಸಭೆಯ ಒಪ್ಪಿಗೆ ಕೇಳಲಾಗಿದೆ. ಸೆಕ್ಷನ್ 10(2) ರಲ್ಲಿ ಹತ್ತು ಸಾವಿರದವರೆಗೆ ಎಸ್ಟಿಮೇಟ್ ಮಂಜೂರು ಮಾಡಬಹುದು. ಹತ್ತು ಸಾವಿರಕ್ಕಿಂತ ಮೇಲ್ಪಟ್ಟಾದರೆ ಸರ್ಕಾರದ ಅನುಮತಿ ತೆಗೆದುಕೊಳ್ಳಬೇಕು ಎಂದಿದೆ. ಹೀಗಿರುವಾಗ ಹತ್ತು ಸಾವಿರ ಮೇಲ್ಪಟ್ಟು ಇರುವ ಎಸ್ಟಿಮೇಟಿಗೆ ಸರ್ಕಾರದಿಂದ ಅನುಮತಿ ಪಡೆಯಬಹುದಿತ್ತು; ಸುಗ್ರೀವಾಜ್ಞೆ ಹೊರಡಿಸುವ ಪ್ರಮೇಯವಿರಲಿಲ್ಲ. They could have obtained the previous sanction of the Government for the estimates costing more than Rs. 10,000 and be done with it. ಇನ್ನು ಡಿಬೆಂಚರ್ ಫ್ಲೋಟ್ ಮಾಡಿ ಸಾಲ ತೆಗೆದುಕೊಳ್ಳುವುದಕ್ಕೆ ಇದರಲ್ಲಿ ಅವಕಾಶವಿರಲಿಲ್ಲ. ಹುಡ್ಕೋ ಅವರು ಸಾಲಕೊಡುತ್ತೇವೆ ಎಂದು ಹೇಳಿದ ಕಾರಣಕ್ಕಾಗಿ 20(ಎ) ಸೆಕ್ಷನ್‌ನ್ನು ಹೊಸದಾಗಿ ಸೇರಿಸಲಾಗಿದೆ ಎಂದು ಹೇಳಿದರು. ಅದಕ್ಕೆ ಮಾನ್ಯ ಸಚಿವರ ವಿವರಣೆ ಬೇಕಾಗಿದೆ. ಸುಗ್ರೀವಾಜ್ಞೆ ಹೊರಡಿಸಿದ ಮೇಲೆ ಅವರಿಗೆ ಕೊಡಬೇಕಾದ ಸಾಲವನ್ನು ಹುಡ್ಕೋದವರು ಕೊಟ್ಟಿದ್ದಾರೆಯೇ? ಒಂದು ಪರ್ಸೆಂಟ್ ಡಾಕ್ಯುಮೆಂಟೇಷನ್ ಎನ್ನುವುದು ಪೂರ್ಣವಾಗಿದೆಯೇ? ಸುಗ್ರಿವಾಜ್ಞೆ ಹೊರಡಿಸಿದ ಮೇಲೆ ಈ ಬಗ್ಗೆ ಯಾವ ಕಾರ್ಯಕ್ರಮ ತೆಗೆದುಕೊಳ್ಳಲಾಗಿದೆ? ಹುಡ್ಕೋದವರು ಎಷ್ಟು ಸಾಲ ನೀಡಿದ್ದಾರೆ? ಎಸ್ಟಿಮೇಟ್ ಸ್ಯಾಂಕ್ಷನ್ ಎಷ್ಟು ಮಾಡಿದ್ದಾರೆ? ಈ ಎಲ್ಲಾ ವಿಚಾರಗಳ ಬಗ್ಗೆ ಮಾನ್ಯ ಸಚಿವರು ವಿವರಣೆ ಕೊಟ್ಟರೆ, ಸುಗ್ರಿವಾಜ್ಞೆಯನ್ನು ಉಪಯೋಗಿಸಿಕೊಂಡು ಸರ್ಕಾರದವರು ಕಾರ್ಯಚರಣೆ ಮಾಡಿದ್ದಾರೆಯೇ? ಒಂದು ವೇಳೆ ಮಾಡದಿದ್ದರೆ ಸುಗ್ರಿವಾಜ್ಞೆ ಹೊರಡಿಸುವ ಅವಶ್ಯಕತೆ ಏನಿತ್ತು? ಆದುದರಿಂದ, ಇದನ್ನು ನಾವು ಒಪ್ಪಿಕೊಳ್ಳುವುದು ಯೋಗ್ಯವೇ ಇಲ್ಲವೇ ಎಂದು ನಿರ್ಧರಿಸುವುದಕ್ಕೆ ಅನುಕೂಲವಾಗುತ್ತದೆ.

# ಹರಿಜನರಿಗೆ ತಲಾ ಎರಡು ಎಕರೆ ಜಮೀನು

### 8ನೇ ಆಗಸ್ಟ್ 1978

## [ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ನಿಗದಿತ ಭೂವರ್ಗಾವಣೆ ನಿಷೇಧ) ಮಸೂದೆ-1978]

**ಶ್ರೀ ಎ.ಕೆ. ಸುಬ್ಬಯ್ಯ:** ಮಾನ್ಯ ಸಭಾಪತಿಗಳೇ, ನಮ್ಮ ರಾಜ್ಯದ ಕಂದಾಯ ಮಂತ್ರಿಗಳು ತಂದಿರತಕ್ಕಂಥಾ ಮಸೂದೆ ಏನು ಇದೆ, ಈ ಮಸೂದೆಯ ಹಿಂದಿರತಕ್ಕಂಥಾ ಒಂದು ಭಾವನೆ ಮತ್ತು ಸಿದ್ಧಾಂತವನ್ನು ನಾನು ಹೃತ್ಪೂರ್ವಕವಾಗಿ ಸ್ವಾಗತ ಮಾಡುತ್ತೇನೆ. ಈ ಮಸೂದೆಯನ್ನು ತರುವುದರಿಂದ ಯಾವ ರೀತಿಯಾಗಿ ಈ ಒಂದು ಉದ್ದೇಶ ನೆರವೇರಬೇಕೋ ಆ ರೀತಿಯಾಗಿ ನೆರವೇರುತ್ತದೆ ಎಂದು ಹೇಳುವುದಕ್ಕೆ ನನಗೆ ಸ್ವಲ್ಪ ಅನುಮಾನವಿದೆ. ಕಾರಣ ಏನು ಎಂದು ಹೇಳಿದರೆ ಕಾನೂನು ಬಂದ ಹಾಗೆಲ್ಲಾ ಕಾನೂನುಗಳ ವ್ಯಾಪ್ತಿಯಿಂದ ತಪ್ಪಿಸಿಕೊಳ್ಳುವುದು ಹೇಗೆ ಎನ್ನುವುದನ್ನು ಸಹ ಮತ್ತು ಅದಕ್ಕೆ ಬೇಕಾದ ಉಪಾಯಗಳೂ ಕೂಡ ಸಮಾಜದಲ್ಲಿ ತಯಾರಾಗಿರುತ್ತದೆ. ಈಗ ನೀವು ಇದರಲ್ಲಿ ವಿತ್‌ಔಟ್ ಪ್ರೀವಿಯಸ್ ಪರ್‌ಮಿಷನ್ ಆಫ್ ದಿ ಗೌರ್ನಮೆಂಟ್ ಅಂತ ಅಲಿವಿಯೇಷನ್ ಬಗ್ಗೆ ಹೇಳಿದ್ದೀರಿ. ಸರ್ಕಾರದ ಮಂಜೂರಾತಿ ಮೊದಲೇ ಇದ್ದರೆ ಅದು ಕಾನೂನಿಗೆ ಅನ್ವಯವಾಗುವುದಿಲ್ಲ, ಕಾನೂನಿನ ಪ್ರಕಾರ ಏನೂ ಕ್ರಮ ಅದರ ಮೇಲೆ ತೆಗೆದುಕೊಳ್ಳುವುದಕ್ಕೆ ಬರುವುದಿಲ್ಲ.

ಆದರೆ, ರಾಜಕೀಯದಲ್ಲಿ ಪ್ರಭಾವವಿರುವ ವ್ಯಕ್ತಿಗಳು ಸರ್ಕಾರದ ಮಂಜೂರಾತಿಯನ್ನು ಅನೇಕ ಕಡೆ ತೆಗೆದು ಕೊಂಡಿದ್ದಾರೆ. ಕೆಲವರು ಸರ್ಕಾರದ ಮೇಲೆ ರಾಜಕೀಯ ಪ್ರಭಾವ ಬೀರಿ ಕೆಲವರು ಅಧಿಕಾರಿಗಳ ಮೇಲೆ ಹಣದ ಪ್ರಭಾವ ಬೀರಿ ಮಂಜೂರಾತಿ ತೆಗೆದುಕೊಂಡಿದ್ದಾರೆ. ಈ ರೀತಿ ಮಂಜೂರಾತಿ ಪಡೆದಿರುವ ಪ್ರಸಂಗಗಳು ಬೇಕಾದಷ್ಟಿವೆ. ಅದೇ ರೀತಿ ಇನ್ನು ಮುಂದೆ ಕೂಡ ಅಲಿವಿಯೇಷನ್ ಮಾಡಬೇಕಾದರೆ ಹಣದ ಪ್ರಭಾವ ಮತ್ತು ತಮಗಿರುವ ಸ್ಥಾನಮಾನಗಳ ಪ್ರಭಾವಗಳನ್ನು ಬೀರಿ ಸರ್ಕಾರದ ಮಂಜೂರಾತಿಯನ್ನು ನಿರಾಯಾಸವಾಗಿ ತೆಗೆದುಕೊಳ್ಳುತ್ತಾರೆ. ಅವರಿಗೆ ಅದರಲ್ಲೇನೂ ದೊಡ್ಡ ಕಷ್ಟವಿರುವುದಿಲ್ಲ. ಸುಮಾರು ವರ್ಷಗಳ ಹಿಂದೆ ಇಂತಹದೊಂದು ಪ್ರಸಂಗವನ್ನು ನಾನು ಬಹಳ ದೀರ್ಘವಾಗಿ ಇಲ್ಲಿ ಪ್ರಸ್ತಾಪ ಮಾಡಿದ್ದೆ. ಆಗ ಮಾನ್ಯ ಕೌಜಲಗಿಯವರು ಕಂದಾಯ ಸಚಿವರಾಗಿದ್ದರು ಎಂದು ನಾನು ನೆನಪು ಮಾಡಿಕೊಂಡ ಮಟ್ಟಿಗೆ

ಕಾಣುತ್ತದೆ. ಮಡಿಕೇರಿ ತಾಲ್ಲೂಕಿನಲ್ಲಿ ಹಾಕತ್ತೂರು ಎನ್ನುವ ಗ್ರಾಮವಿದೆ. ಆ ಗ್ರಾಮದಲ್ಲಿನ 12 ಮಂದಿ ಹರಿಜನರಿಗೆ ತಲಾ ಎರಡೆರಡು ಎಕರೆ ಜಮೀನನ್ನು ಸರ್ಕಾರ ಮಂಜೂರು ಮಾಡಿತ್ತು. ಸರ್ಕಾರ ಅವರಿಗೆ ಮನೆಗಳನ್ನು ಕಟ್ಟಿಸಿಕೊಟ್ಟು, ತಾಲ್ಲೂಕು ಅಭಿವೃದ್ಧಿ ಮಂಡಲಿ ಮುಖಾಂತರ ಅವರಿಗೆ ಪ್ರತ್ಯೇಕ ಸ್ಮಶಾನದ ವ್ಯವಸ್ಥೆ ಹಾಗೂ ಕುಡಿಯುವ ನೀರಿನ ಬಾವಿಯನ್ನೂ ತೆಗೆಸಿಕೊಟ್ಟಿತ್ತು. ಆ ಹರಿಜನರೆಲ್ಲಾ ಅಲ್ಲೇ ವಾಸವಾಗಿದ್ದರು. ಅವರ ಆಸ್ತಿಗಳನ್ನು ಕೊಂಡುಕೊಳ್ಳುವುದಕ್ಕೆ ಒಬ್ಬರು ಯೋಜನೆ ಹಾಕಿಕೊಂಡರು. ಅದಕ್ಕೆ ಸರ್ಕಾರದ ಮಂಜೂರಾತಿ ಬೇಕಾಗಿತ್ತು. ಆಗ ಜಿಲ್ಲಾಧಿಕಾರಿಗಳಾಗಿದ್ದವರು ಇದಕ್ಕೆ ಮಂಜೂರಾತಿ ಕೊಡುವುದಕ್ಕೆ ತಯಾರಿರಲಿಲ್ಲ. ಈ ಮಧ್ಯೆ ಆ ಜಿಲ್ಲಾಧಿಕಾರಿಗಳು ಎಂಟು ದಿವಸ ರಜಾ ಹೋದರು. ಅವರ ಜಾಗಕ್ಕೆ ಒಬ್ಬರು ಅಸಿಸ್ಟೆಂಟ್ ಕಮಿಷನರ್ ಇನ್‌ಚಾರ್ಜ್ ಆಗಿ ಬಂದರು. ಅವರು ಇನ್‌ಚಾರ್ಜ್ ಇದ್ದ ಅವಧಿಯಲ್ಲಿ ರಾತ್ರೋರಾತ್ರಿ ಮಂಜೂರಾತಿ ಕೊಟ್ಟುಬಿಟ್ಟರು; ಆ ಹನ್ನೆರಡು ಮಂದಿ ಹರಿಜನರ ಆಸ್ತಿಯ ಮಾರಾಟವೂ ನಡೆದು ಹೋಯಿತು. ಮಂಜೂರಾತಿ ಕೊಟ್ಟಂತಹ ಇನ್‌ಚಾರ್ಜ್‌ನಲ್ಲಿದ್ದ ಅಧಿಕಾರಿ ಇನ್ನಾರೂ ಅಲ್ಲ; ಆತನೂ ಒಬ್ಬ ಹರಿಜನ ಅಧಿಕಾರಿ. ಇದನ್ನು ಕೇಳಿ ತಮಗೆ ಆಶ್ಚರ್ಯವಾಗಬಹುದು. ಮಂಜೂರಾತಿ ಕೊಡಲು ನಿರಾಕರಣೆ ಮಾಡಿದವರು ಬೇರೆ ಕೋಮಿಗೆ ಸೇರಿದವರು. ಇನ್‌ಚಾರ್ಜ್ ಇದ್ದ ಅಧಿಕಾರಿ ಮಂಜೂರಾತಿಯನ್ನು ಯಾವ ಪ್ರಭಾವದ ಮೇರೆಗೆ ಕೊಟ್ಟರು ಎನ್ನುವುದನ್ನೆಲ್ಲ ಆಗ ನಾನು ಸುದೀರ್ಘವಾಗಿ ಪ್ರಸ್ತಾಪ ಮಾಡಿದ್ದೆ. ಇಲ್ಲಿ ಮೋಸ ನಡೆದಿದೆ; ಹಣದ ಪ್ರಭಾವ ನಡೆದಿದೆ. ಆ ಹನ್ನೆರಡು ಮಂದಿ ಹರಿಜನರೂ ಊರು ಬಿಟ್ಟು ಹೋಗಿದ್ದಾರೆ; ಎಲ್ಲಿಗೆ ಹೋಗಿದ್ದಾರೆನ್ನುವುದು ಇಲ್ಲಿಯತನಕ ಪತ್ತೆಯಾಗಿಲ್ಲ. ಅವರನ್ನು ಪತ್ತೆ ಮಾಡಬೇಕೆಂದು ನಾನು ಹೇಳಿದಾಗ, ಅಂದಿನ ಸಚಿವರು ಅದನ್ನು ಪರಿಶೀಲನೆ ಮಾಡುವುದಾಗಿ ತಿಳಿಸಿದ್ದರು. ಪರಿಶೀಲನೆ, ಪರಿಶೀಲನೆ–ಯಥಾಪ್ರಕಾರ ಪರಿಶೀಲನೆಯಲ್ಲೇ ಇದ್ದರೂ, ಬೇರೆ ಬೇರೆ ಮಂತ್ರಿಗಳು ಮಾತ್ರ ಬಂದು ಹೋದರು. ಈಗ ಜಮೀನು ದೊಡ್ಡ ಕಾಫಿ ತೋಟವಾಗಿ ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಆಸ್ತಿಯಾಗಿದೆ. ಪರ್ಮಿಷನ್ ತೆಗೆದುಕೊಂಡವರು ಯಾವ ಕ್ರಮಗಳನ್ನನುಸರಿಸಿ ತೆಗೆದುಕೊಂಡರು? ಪಾಪ! ಆ ಹರಿಜನರೆಲ್ಲಾ ಹೆಬ್ಬೆಟ್ಟು ಒತ್ತುವವರು, ಆ ಹರಿಜನರ ಸಂತಾನ ಎಲ್ಲಿದೆ ಎಂದು ಯಾರಿಗೂ ಇವತ್ತಿನವರೆಗೂ ಗೊತ್ತಿಲ್ಲ. ಕಾನೂನು ಪ್ರಕಾರ ಮಂಜೂರಾತಿ ಸಿಕ್ಕಿದೆ, ಮಾರಾಟ ನಡೆದಿದೆ. ಆದರೆ ಅಲ್ಲಿ ನಡೆದಿರುವುದು ಅನ್ಯಾಯ. ಇಂತಹ ಪ್ರಕರಣಗಳು ಬೇಕಾದಷ್ಟಿವೆ. ಇಂತಹವರು

ಇನ್ನು ಮುಂದೆಯೂ ಸರ್ಕಾರದಿಂದ ಈ ರೀತಿಯಾಗಿ ಮಂಜೂರಾತಿ ಪಡೆದುಕೊಳ್ಳುತ್ತಾರೆ. ಕೊಂಡು–ಕೊಂಡವನು ಸರ್ಕಾರದ ಬೆಂಬಲಿಗನಾಗಿದ್ದರೆ ಅವನಿಗೊಂದು ರೀತಿ ಕ್ರಮವನ್ನು ಅನುಸರಿಸಲಾಗುವುದು. ಸರ್ಕಾರದ ವಿರೋಧಿಯಾಗಿದ್ದರೆ, ಅವನ ವಿರುದ್ಧ ಕ್ರಮ ಜರುಗಿಸಿ, ಅವನನ್ನು ಜಮೀನಿನಿಂದ ಹೊರ ಹಾಕಲಾಗುವುದು. ಆದುದರಿಂದ, ಕೊಂಡುಕೊಂಡವರೆಲ್ಲ ಆಳುವ ಪಕ್ಷವಾದ ಕಾಂಗ್ರೆಸ್ಸಿಗೆ ಸೇರಿ ಬಿಡುತ್ತಾರೆ! ಕಾಂಗ್ರೆಸ್ ಬೆಳೆಯಲೂ ಇದು ಸಹಾಯಕವಾಗುತ್ತದೆ. ಏಕೆಂದರೆ ಕಾಂಗ್ರೆಸ್ ಸೇರುವಿಯೋ ಇಲ್ಲ ನಿನ್ನನ್ನು ಜಮೀನಿನಿಂದ ಹೊರಹಾಕಬೇಕೋ ಎಂದು ಕೊಂಡುಕೊಡವನನ್ನು ಕೇಳಿದರೆ ಅವನು ಏನು ತಾನೆ ಮಾಡಿಯಾನು? ಬೆದರಿಕೆಯಲ್ಲೂ ರಾಜಕೀಯ ಪ್ರಭಾವವನ್ನು ನಾವು ಕಾಣಬಹುದು. ಇಂತಹುದನ್ನೆಲ್ಲಾ ಮಾನ್ಯ ಸಚಿವರು ಹೇಗೆ ತಪ್ಪಿಸುತ್ತಾರೋ ನನಗೆ ಗೊತ್ತಿಲ್ಲ. ಮಾರಾಟ ಮಾಡಬೇಡಿ ಎಂದು ಹೇಳಿ, ಸರ್ಕಾರದವರು ಹರಿಜನರಿಗೆ ಜಮೀನು ಕೊಡುತ್ತಾರೆ. ಆ ಜಮೀನಿನ ಪಕ್ಕದವರು ಇದನ್ನೂ ನಾನೇ ಮಾಡಿಕೊಳ್ತೀನಿ ಬಿಡು ಎಂದು ಅಗ್ರಿಮೆಂಟ್ ಮಾಡಿಕೊಳ್ತಾನೆ. There will be no registration; there will be no document. ಕೇವಲ ದುಡ್ಡು ತೆಗೆದುಕೋ ಎಂದು ಹೇಳುತ್ತಾನೆ. ಹೀಗೆ ಹನ್ನೆರಡು ವರ್ಷಗಳಾದ ಮೇಲೆ he will be perfecting his title by adverse possession, ಅವನು ಈ ಅಡ್ವರ್ಸ್ ಪೊಸೆಷನ್ ಪ್ಲೀಡ್ ಮಾಡಿದರೆ ಅದು ಈ ಕಾನೂನಿನ ಕಕ್ಷೆಯೊಳಗೆ ಬರುವುದಿಲ್ಲ. ಆಮೇಲೆ ಆ ಜಮೀನಿನ ಬಗ್ಗೆ ಯಾವುದಾದರೊಂದು ಆಧಾರವಿದ್ದರೆ ಅದನ್ನು ನಾಶಮಾಡಿ, I am in possession of the land for 12 years without the consent and with the knowledge of the owner, and therefore I have perfected my title by adverse possession ಎಂದು ಹೇಳುತ್ತಾನೆ. ಒಂದು ವೇಳೆ ಜಮೀನನ್ನು ಮಾರಾಟ ಮಾಡಿದ್ದರೆ, ಅದು ವಾಪಸ್ಸು ಅವನಿಗೆ ಬರುತ್ತದೆ. ಎಂದು ತಾವು ಹೇಳಬಹುದು. There may be some bonafide transactions, bonafide purchasers paying very good market value or over and above the market value, in order to help the seller and after purchasing the purchaser might have invested huge amount and improved it-there may be very much bonafid purchasers. Is it moral on our part to penalise such people who have paid very good value in the interest of the seller and when the purchase was bonafide?

ಮಾರಾಟ ಮಾಡಿದವರೆಲ್ಲ ಮೋಸಕ್ಕೊಳಗಾಗಿದ್ದಾರೆಂದು ಹೇಳುವುದಕ್ಕಾಗುವುದಿಲ್ಲ. ಹಾಗೆಯೇ, ಹರಿಜನ-ಗಿರಿಜನರನ್ನೆಲ್ಲ ಮೋಸ ಮಾಡುವುದಕ್ಕಾಗುವುದಿಲ್ಲ. ನಮ್ಮ ಮಾನ್ಯ ನರಸಿಂಹಮೂರ್ತಿಯವರನ್ನು ಯಾರಾದರೂ ಮೋಸ ಮಾಡುವುದಕ್ಕಾಗುತ್ತದೆಯೇ? ಉದಾಹರಣೆಗೆ ಹೇಳುವುದಾದರೆ, ಮಾನ್ಯ ನರಸಿಂಹಮೂರ್ತಿಯವರಿಗೆ ಸರ್ಕಾರದಿಂದ ಜಮೀನು ಮಂಜೂರಾಗಿರುತ್ತದೆಂದು ಇಟ್ಟು ಕೊಳ್ಳೋಣ. ಅವರು ಅದನ್ನು ಯಾರಿಗೋ ಮಾರಿಬಿಡುತ್ತಾರೆ. ಅಂತಹ ಪ್ರಸಂಗಗಳಲ್ಲೂ ಕೊಂಡುಕೊಂಡವನಿಂದ ಅದನ್ನು ಕಿತ್ತು ಇವರಿಗೆ ವಾಪಸ್ಸು ಕೊಡಬೇಕೆ? ಇಂತಹ ಪ್ರಸಂಗಗಳು ಕೆಲವು ಇರಬಹುದು. there may be such cases. There may be many M.L.A.s and highly politically influenced persons who might have acquired land. Why should we protect such cases? There may be powerful S.C. people, economically belonging to the higher class and educated persons knowing the implications might have sold away the lands, Such cases may be brought within the a'mbit of this piece of legislation. That has to be very carefully examined. Though he belongs to Scheduled Caste, the seller may be a powerful man and the purchaser may belong to economically weaker section. Why do you penalise him? There may be one or two such cases in the entire State. ಅವರು ಹರಿಜನ-ಗಿರಿಜನ ಅಥವಾ ಹಿಂದುಳಿದ ಕೋಮಿನವರೇ ಆಗಿರಬಹುದು. ಆರ್ಥಿಕ ಪರಿಸ್ಥಿತಿ ಉತ್ತಮವಾಗಿರುವ ಇವರು ಬೆಂಗಳೂರು ನಗರದಲ್ಲಿ ವಾಸಮಾಡಿ ಕೊಂಡಿದ್ದು, ಊರಿನಲ್ಲಿರುವ ಜಮೀನನ್ನು ಆರ್ಥಿಕವಾಗಿ ಹಿಂದುಳಿದಿರುವವನೊಬ್ಬನಿಗೆ ಮಾರಿಬಿಟ್ಟು ಬಂದಿರುತ್ತಾರೆ. ಇಂತಹ ಸಂದರ್ಭಗಳಲ್ಲಿ, ಆರ್ಥಿಕವಾಗಿ ಹಿಂದುಳಿದಿರುವವನಿಂದ ಜಮೀನನ್ನು ಬಿಡಿಸಿ. ಬೆಂಗಳೂರಿನಲ್ಲಿ ಹೆಚ್ಚು ಅನುಕೂಲದಿಂದ ವಾಸ ಮಾಡುವ ಇವರಿಗೆ ವಾಪಸ್ಸು ಕೊಡಿಸುವ ಪ್ರಸಂಗಗಳು ಕೆಲವಾದರೂ ಬರುವುದುಂಟು.

In letter and spirit this Act has to be implemented. The machinery which implements this Act may misuse their authority. I am very much worried about the cases where prior permission of the Goverment has been obtained unreasonably by virtue of their influence

or by making use of their purse, such cases must also be brought within the ambit of this Act. The spirit behind this Bill is very good but after the enactment of this legislation, there will be many anomalies, these will be many ways for the people to evade the operation of this law. Very influential people may get permission from the Government. ಯಾರಾದರೂ ಒಬ್ಬರು ಪ್ರಾಭಾವಯುತರಾದಂತಹ ವ್ಯಕ್ತಿಗಳು ಬಂದು ಮಂತ್ರಿಮಂಡಲದ ಮಟ್ಟದಲ್ಲಿ ಪರ್ಮಿಷನ್ ಕೊಡಿ ಎಂದರೆ ಪರ್ಮಿಷನ್ ಕೊಡುತ್ತಾರೆ. ಶ್ರೀಮಾನ್ ಬಸವಲಿಂಗಪ್ಪನವರೇ ಯಾವಾಗಲೂ ಮಂತ್ರಿಗಳಾಗಿ ಇರುತ್ತಾರೆ ಎಂದು ಹೇಳುವುದಕ್ಕಾಗುವುದಿಲ್ಲ. ಅವರು ಬದಲಾವಣೆಯಾಗಬೇಕಾದ ಪ್ರಸಂಗ ಬರಬಹುದು. ಆದ್ದರಿಂದ ಇದಕ್ಕೆ ಪರ್ಮಿಷನ್ ಕೊಡುವಾಗ ಕೆಲವೊಂದು ನಿರ್ಧಿಷ್ಟವಾದ ನಿಯಮಗಳನ್ನು ಹಾಕಿಕೊಳ್ಳಬೇಕಾಗುತ್ತದೆ. ರೂಲ್ಸ್ ಮಾಡಿಕೊಳ್ಳಬೇಕಾಗುತ್ತದೆ. ಆ ರೂಲ್ಸ್ ಮಾಡುವಂತಹ ಕಾಲದಲ್ಲಿ ನಾನು ಕೆಲವೊಂದು ಪ್ರಕರಣಗಳನ್ನು ಏನು ಹೇಳಿದ್ದೇನೆ, ಆ ಪ್ರಕರಣಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಆದಷ್ಟು ಮಟ್ಟಿಗೆ ಕಾನೂನು ತಪ್ಪಿಸಿ ಕಾನೂನಿನ ಕಕ್ಷೆಗೆ ಬಾರದ ಹಾಗೆ ಅಡ್ಡ ಹಾದಿ ಹಿಡಿದುಕೊಂಡು ನಡೆಯತಕ್ಕವರಿಗೆ ಅಭಿಮಾನದಿಂದ ಪರ್ಮಿಷನ್ ಕೊಡುವುದರಲ್ಲಿ ಮೋಸವಾಗಬಹುದು. ಅನೇಕ ರೀತಿಯಲ್ಲಿ ಕಾನೂನು ತಪ್ಪಿಸುವುದಕ್ಕೆ ಜನ ಪ್ರಯತ್ನ ಮಾಡುತ್ತಾರೆ. ಇವುಗಳನ್ನೆಲ್ಲಾ ತಪ್ಪಿಸುವುದಕ್ಕೆ ಎಷ್ಟರ ಮಟ್ಟಿಗೆ ರೂಲ್ಸ್‌ನಲ್ಲಿ ಸಾಧ್ಯವಾಗುತ್ತದೆ ಎಂಬುದನ್ನು ಆಲೋಚನೆ ಮಾಡಿ ಹೆಚ್ಚಿನ ಜಾಗರೂಕತೆಯಿಂದ ರೂಲ್ಸ್ ಮಾಡಬೇಕು ಎಂದು ಈ ಸಂದರ್ಭದಲ್ಲಿ ಸೂಚಿಸಿ, ರೂಲ್ಸ್ ಮಾಡಿದ ತಕ್ಷಣ ಆದಷ್ಟು ಬೇಗ ಅದನ್ನು ಎರಡು ಸದನಗಳ ಮುಂದಿಡಬೇಕು ಎಂದು ಸೂಚಿಸಲು ಇಷ್ಟಪಡುತ್ತೇನೆ. ಏಕೆಂದರೆ As early as possible you may subject that rule to the scrutiny of both the Houses of Legislature to effect any improvement so that the law can be implemented perfectly.

# ಸಾರ್ವಜನಿಕ ಕ್ಷೇತ್ರದಲ್ಲಿರುವವರಲ್ಲಿ ತ್ಯಾಗದ ಮನೋಭಾವ ಇರಬೇಕು

## 26ನೇ ಸೆಪ್ಟೆಂಬರ್ 1979

## [ಕರ್ನಾಟಕ ಮಂತ್ರಿಗಳ ಸಂಬಳ ಮತ್ತು ಭತ್ಯೆ (2ನೇ ತಿದ್ದುಪಡಿ) ಮಸೂದೆ - 1979]

**ಶ್ರೀ ಎ.ಕೆ. ಸುಬ್ಬಯ್ಯ:** ಈ ಮಸೂದೆಯನ್ನು ಸುಗ್ರೀವಾಜ್ಞೆ ಮೂಲಕ ತಂದಾಗ ನಾನು ಪತ್ರಿಕಾ ಹೇಳಿಕೆ ಕೊಟ್ಟು ಖಂಡನೆ ಮಾಡಿದ್ದೇನೆ. ಈ ಮಸೂದೆಯಲ್ಲಿ ಪ್ರವಾಸ ಮಾಡುವ ಸಂದರ್ಭದಲ್ಲಿ ಸಚಿವರುಗಳಿಗೆ, ಮುಖ್ಯ ಸಚೇತಕರಿಗೆ, ಸಭಾಪತಿಯವರಿಗೆ ಮತ್ತು ವಿರೋಧ ಪಕ್ಷದ ನಾಯಕರಿಗೆ ಕೊಡುವ ಪ್ರವಾಸ ಭತ್ಯೆಯನ್ನು ಪ್ರತಿ ಕಿಲೋ ಮೀಟರಿಗೆ 75 ಪೈಸೆಯಿಂದ 1-00 ರೂಪಾಯಿ ಮಾಡುವ ತಿದ್ದುಪಡಿ ತರಲಾಗಿದೆ. ಪೆಟ್ರೋಲ್ ಬೆಲೆ ಜಾಸ್ತಿಯಾಗಿರುವುದರಿಂದ ಪ್ರವಾಸ ಭತ್ಯವನ್ನೂ ಜಾಸ್ತಿ ಮಾಡಲಾಯಿತೆಂಬ ಕಾರಣವನ್ನು ನೀಡಿ ಈ ಮಸೂದೆಯನ್ನು ಮಂಡಿಸಿದ ಸಚಿವರು, ಸುಗ್ರೀವಾಜ್ಞೆಯನ್ನು ಹೊರಡಿಸಲಾಯಿತೆಂದು ಹೇಳಿದರು. ಇವರು ಸುಗ್ರೀವಾಜ್ಞೆ ಹೊರಡಿಸಿದ ನಂತರವೂ ಪೆಟ್ರೋಲ್ ಬೆಲೆ ಜಾಸ್ತಿಯಾಗಿದೆ. ಹಾಗಾದರೆ ಮತ್ತೆ ಇದನ್ನು 1-25 ರೂಪಾಯಿಗೆ ಏರಿಸಬಹುದಿತ್ತಲ್ಲ? ಕಾರನ್ನು ಓಡಿಸಿದರೆ ಪ್ರತಿ ಕಿಲೋ ಮೀಟರಿಗೆ ಎಷ್ಟು ಖರ್ಚಾಗುತ್ತದೆ? 75 ಪೈಸೆ ಖರ್ಚಾಗಬಹುದೆಂದು ತಿಳಿದು ಅದನ್ನು ಪ್ರವಾಸ ಭತ್ಯೆಯನ್ನಾಗಿ ಕೊಡುತ್ತಾರೆ. ಆಯಿಲ್ ಚಾರ್ಜ್, ವರ್ಕ್‌ಷಾಪ್ ಬಿಲ್ ಮುಂತಾದ್ದನ್ನೆಲ್ಲ ಸರ್ಕಾರದವರೇ ಕೊಡುತ್ತಾರೆ. ಬರೀ ಪೆಟ್ರೋಲನ್ನು ಮಾತ್ರ ನಾವು ಹಾಕಿಸಿಕೊಳ್ಳಬೇಕು. ಇದರ ಜೊತೆಗೆ ಡೈಲಿ ಅಲೋಯನ್ಸ್ ಕೊಡುತ್ತಾರೆ. ಐದು ಲೀಟರ್ ಪೆಟ್ರೋಲಿನ ಬೆಲೆ 23-90 ರೂಪಾಯಿಗಳು. ಇಷ್ಟರಲ್ಲಿ ಸುಮಾರು ಐವತ್ತು ಕಿಲೋ ಮೀಟರ್ ದೂರದಷ್ಟು ಸಾಧಾರಣವಾದ ಅಂಬಾಸಿಡರ್ ಕಾರ್‌ನಲ್ಲಿ ಹೋಗಬಹುದು. ದೂರದ ಪ್ರಯಾಣದಲ್ಲಿ ಒಂದು ಲೀಟರ್ ಪೆಟ್ರೋಲ್‌ಗೆ ಒಂದು ಸಾಧಾರಣವಾದ ಅಂಬಾಸಿಡರ್ ಹತ್ತು ಮೈಲಿಗಳವರೆಗೂ ಓಡುತ್ತದೆ. ಆದರೆ ನಗರ ಮಿತಿಯಲ್ಲಿ ಪ್ರಯಾಣ ಮಾಡಿದರೆ ಸ್ವಲ್ಪ ಕಡಿಮೆ ಕೊಡುತ್ತದೆ. ದೂರದ ಪ್ರಯಾಣದಲ್ಲಿ ಒಂದು ಲೀಟರಿಗೆ ಎಂಟು ಕಿಲೋ ಮೀಟರು ಓಡುವ ಅಂಬಾಸಿಡರ್ ಕಾರುಗಳ ಸ್ಥಿತಿ ಸರಿಯಾಗಿಲ್ಲವೆಂದೇ

ಹೇಳಬಹುದು. ಅಂತಹವುಗಳನ್ನು ಉಪಯೋಗಿಸುವುದರ ಮೇಲೆ ನಿರ್ಬಂಧ ಹಾಕಬೇಕಾಗುತ್ತದೆ.

**ಶ್ರೀ ಎಂ.ಡಿ. ನಟರಾಜ್:** ಐದು ಲೀಟರುಗಳಿಗೆ ಐವತ್ತು ಕಿಲೋ ಮೀಟರು ಓಡುತ್ತದೆಯೇ?

**ಶ್ರೀ ಎ.ಕೆ. ಸುಬ್ಬಯ್ಯ:** ಒಳ್ಳೆಯ ಸ್ಥಿತಿಯಲ್ಲಿರುವ ಅಂಬಾಸಿಡರ್ ಕಾರ್ ದೂರದ ಪ್ರಯಾಣದಲ್ಲಿ ಇಷ್ಟನ್ನು ಕೊಡುತ್ತದೆ. ಆದರೆ, ಶಾಸಕರ ಭವನದ ಕಾರುಗಳು ಕಾರುಗಳೆ? ಅವರೇನು ವರ್ಕ್‌ಷಾಪ್ ನಡೆಸುತ್ತಿದ್ದಾರೆಯೇ? ಒಂದು ಲೀಟರಿಗೆ ಎಂಟು ಕಿಲೋ ಮೀಟರು ಓಡುವ ಕಾರುಗಳನ್ನು ಖಾಸಗಿಯವರು ಇಟ್ಟುಕೊಂಡರೆ ಉದ್ಧಾರವಾಗುತ್ತಾರೆಯೆ? ಎಂಟು ಕಿಲೋಮೀಟರು ಕೊಡುವುದು ಕೇವಲ ಸರ್ಕಾರಿ ಕಾರುಗಳು, ಅಷ್ಟೆ. ನಗರಸಭೆ ಮಿತಿಯಲ್ಲಿ ಕಾರುಗಳನ್ನು ನಿಧಾನವಾಗಿ ಓಡಿಸಬೇಕಾಗುತ್ತದೆ. ಕೆಲವು ಕಡೆ ಎರಡನೇ ಗೇರ್‌ನಲ್ಲಿ ಓಡಿಸಬೇಕಾಗುತ್ತದೆ. ಟ್ರಾಫಿಕ್ ಸಿಗ್ನಲ್‌ಗಳು ಇರುತ್ತವೆ ಅಂತಹ ಕಡೆಗಳಲ್ಲಿ ಒಂದು ಲೀಟರಿಗೆ ಸುಮಾರು ಎಂಟು-ಎಂಟೂವರೆ ಕಿಲೋಮೀಟರು ಓಡುತ್ತದೆ. ಆದರೆ ದೂರದ ಪ್ರಯಾಣದಲ್ಲಿ ಮಾತ್ರ ಒಂದು ಲಿಟರಿಗೆ ಸುಮಾರು ಒಂಬತ್ತು-ಹತ್ತು ಕಿಲೋಮೀಟರು ಹೋಗಬೇಕು. ಇಲ್ಲದಿದ್ದರೆ ಆ ಕಾರನ್ನು ತಿರಸ್ಕಾರ ಮಾಡಬೇಕಾಗುತ್ತದೆ. ಹೀಗೆಲ್ಲಾ ಇದ್ರೂ, ಇಪ್ಪತ್ತೈದು ಪೈಸೆಗಿಂತಲೂ ಜಾಸ್ತಿ ಖರ್ಚಾಗುತ್ತದೆಯೆ? ಹಾಗಾದರೆ ಒಂದು ರೂಪಾಯಿಗೆ ಏರಿಸುವ ಅಗತ್ಯವೇನಿದೆ? ಇದರ ಅರ್ಥವೇನು? ಕಾನೂನುಗಳನ್ನು ಮಾಡುವ ಮಂತ್ರಿಗಳು ಮತ್ತು ಶಾಸಕರು ತಮಗೆ ಬೇಕಾದ ಅನುಕೂಲಗಳನ್ನೆಲ್ಲ ಮಾಡಿಕೊಳ್ಳುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಪೆಟ್ರೋಲ್ ಬೆಲೆ ಜಾಸ್ತಿಯಾಯಿತೆಂದಾಕ್ಷಣ ಪ್ರವಾಸ ಭತ್ಯವನ್ನು ಜಾಸ್ತಿ ಮಾಡುವುದಕ್ಕೆ ಸುಗ್ರೀವಾಜ್ಞೆ ಹೊರಡಿಸಿದ್ದಾಯಿತು. ಆದರೆ, ಅಷ್ಟೇ ನಿಗಾವನ್ನು ಬಡವನ ಕೆಲಸದ ಬಗ್ಗೆ ವಹಿಸಲಾಗುತ್ತಿದೆಯೇ? ಕೊಳಚೆ ಪ್ರದೇಶಗಳಲ್ಲಿ ವಾಸ ಮಾಡುವ ಬಡಜನಗಳ ಸಮಸ್ಯೆಯ ಬಗ್ಗೆ ನಾನು ಇಲ್ಲಿ ಪ್ರಸ್ತಾಪ ಮಾಡಿದ್ದೆ. ಅದಕ್ಕೆ ಹಾಗೆ ಮಾಡ್ತೀವಿ. ಹೀಗೆ ಮಾಡ್ತೀವಿ ಅಂತ ಭರವಸೆಯನ್ನು ಕೊಟ್ಟಿದ್ರು. ಆದರೆ, ಅದು ಈಡೇರಿದೆಯೇ? ಅದಿನ್ನೂ ಭರವಸೆಯಾಗಿಯೇ ಉಳಿದಿದೆ. ಮೊನ್ನೆ ದಿವಸ ಮಾನ್ಯ ಮುಖ್ಯಮಂತ್ರಿಗಳು ನಗರದ ಕೆಲವು ಕೊಳಚೆ ಪ್ರದೇಶಗಳಿಗೆ ಭೇಟಿ ಕೊಟ್ಟಾಗ "He was shocked to see the sub-human condition of the people" ಎಂದು ಪತ್ರಿಕೆಯಲ್ಲಿ

ವರದಿಯಾಗಿದೆ. ಏಳೆಂಟು ವರ್ಷಗಳಿಂದ ಮುಖ್ಯಮಂತ್ರಿಗಳಾಗಿರುವ ಇವರಿಗೆ ಮೊನ್ನೆ ದಿವಸ ಷಾಕ್ ಆಗಿದೆ. ಬೆಂಗಳೂರು ನಗರದಲ್ಲಿರುವ ಕೊಳಚೆ ಪ್ರದೇಶಗಳ ದುಸ್ಥಿತಿಯನ್ನು ನಾವು ಸಾಕಷ್ಟು ಪ್ರಸ್ತಾಪ ಮಾಡಿದ್ದೇವೆ. ಆದರೆ, ಚುನಾವಣೆ ಹತ್ತಿರ ಬರುತ್ತಿರುವಾಗಲೆ ಎಲ್ಲಾ ಕಡೆ "ಸ್ಪಾಟ್ ಡಿಸಿಷನ್"! ನೋಡಿದಿರಾ! ನಾವು ಎಷ್ಟು ನಿಗಾ ವಹಿಸಿ ಕೆಲಸ ಮಾಡುತ್ತಿದ್ದೇವೆ?

**ಶ್ರೀ ಟಿ.ಎ. ರೆಡ್ಡಿ:** ಕೊಳಚೆ ಪ್ರದೇಶಗಳಿಗೆ ಭೇಟಿ ಕೊಟ್ಟರೆ "ಚುನಾವಣೆ ಉದ್ದೇಶಕ್ಕಾಗಿ" ಎಂದು ತಾವು ಏತಕ್ಕೆ ಭಾವಿಸಬೇಕು?

**ಶ್ರೀ ಎ.ಕೆ. ಸುಬ್ಬಯ್ಯ:** ಚುನಾವಣೆ ಬರದೆ ಹೋಗಿದ್ದರೆ ಅವರು ಅಲ್ಲಿಗೆ ಹೋಗುತ್ತಿದ್ದರೆ? ಸುಭೇದಾರಪಾಳ್ಯಂನಲ್ಲಿ ಹರಿಜನ-ಗಿರಿಜನರಿಗಾಗಿ ಸ್ವಾಧೀನಪಡಿಸಿಕೊಂಡಿದ್ದ ಜಮೀನು ಅವರಿಗೆ ಸಿಕ್ಕದೆ ಬಹಳ ಕಷ್ಟದಲ್ಲಿದ್ದಾರೆಂಬುದನ್ನು ನಾವು ಸರ್ಕಾರದ ಗಮನಕ್ಕೆ ತಂದಾಗ, ಅವರಿಗೆ ಪರಿಹಾರ ಕೊಡಲಾಗುವುದೆಂದು ಭರವಸೆ ಕೊಡಲಾಗಿತ್ತು. ಆದರೆ, ಅದು ಇದುವರೆವಿಗೂ ಭರವಸೆಯಾಗಿಯೇ ಉಳಿದಿದೆ. ಮಂತ್ರಿಗಳು ಮತ್ತು ಶಾಸಕರು ಬಡವರ ಬಗ್ಗೆ ಎಷ್ಟರಮಟ್ಟಿಗೆ ನಿಗಾ ವಹಿಸಿ ಕೆಲಸ ಮಾಡುತ್ತಿದ್ದಾರೆನ್ನುವುದನ್ನು ಜನ ನೋಡುತ್ತಿದ್ದಾರೆ. ಮಂತ್ರಿಗಳು ಮತ್ತು ಶಾಸಕರು ಸಂಬಳ ಸವಲತ್ತುಗಳನ್ನು ಹೆಚ್ಚು ಮಾಡಿಕೊಂಡು ಮಸೂದೆ ಪಾಸ್ ಮಾಡಿದಾಗ ನಮ್ಮನ್ನು ಜನ ಕೆಂಗಣ್ಣಿನಿಂದ ನೋಡಿದರು. ನಾವು ಹೋದ ಕಡೆಗಳಲ್ಲೆಲ್ಲ ಜನರು ಇದರ ಪ್ರಸ್ತಾಪ ಮಾಡಿ. ಸಂಬಳ ಜಾಸ್ತಿ ಮಾಡಿಕೊಂಡಿರಿ. ನಿವೃತ್ತಿ ವೇತನ ಬರುವ ಹಾಗೆ ಮಾಡಿಕೊಂಡಿರಿ, ಆದರೆ ನಮಗೇನನ್ನು ಮಾಡಿಕೊಟ್ಟಿರಿ? ಎಂದು ಕೇಳುತ್ತಾರೆ. ಅದಕ್ಕೆ ಉತ್ತರ ಕೊಡುವ ಪರಿಸ್ಥಿತಿಯಲ್ಲಿ ನಾವಿಲ್ಲ. ಏಕೆಂದರೆ, ಬಡವರ ಕೆಲಸಗಳನ್ನು-ನಮ್ಮ ಕೆಲಸಗಳಿಗೆ ಎಷ್ಟು ಆಸಕ್ತಿ ವಹಿಸಿ ಮಾಡುತ್ತೇವೆಯೋ ಅಷ್ಟು ಆಸಕ್ತಿ ವಹಿಸಿ ಮಾಡುತ್ತಿಲ್ಲ. ಒಂದು ಕಿಲೋ ಮೀಟರಿಗೆ 75 ಪೈಸೆಯಿಂದ 1-00 ರೂಪಾಯಿಗೆ ಏರಿಸುವ ಅಗತ್ಯವಿರಲಿಲ್ಲ. ಈ ತಿದ್ದುಪಡಿಗಳನ್ನೆಲ್ಲ ತರುವುದರ ಬದಲಿಗೆ, ಶಾಸಕರು ನಿವೃತ್ತಿ ವೇತನ ಪಡೆಯಬೇಕಾದರೆ ಕನಿಷ್ಟ ಐದು ವರ್ಷವಾದರೂ ಶಾಸನಕನಾಗಿರಬೇಕೆಂಬ ಕಾಲಮಿತಿಯನ್ನು ಹಾಕುವ ತಿದ್ದುಪಡಿ ತರಬೇಕಾಗಿತ್ತು. ಈಗಿರುವ ಶಾಸನದಲ್ಲಿ ಶಾಸಕನಾಗಿ ಇಂತಿಷ್ಟು ಅವಧಿವರೆಗೆ ಇರಬೇಕೆಂಬ ನಿಯಮವೇನೂ ಇಲ್ಲ. ನಾಳೆ ವಿಧಾನ ಸಭೆಯನ್ನು ವಿಸರ್ಜಿಸಿದರೆ ವಿಧಾನ ಸಭೆಯ ಸದಸ್ಯರೆಲ್ಲರಿಗೂ ನಿವೃತ್ತಿ

ವೇತನ ಸಿಗುತ್ತದೆ; ಅಥವಾ ವಿಧಾನ ಸಭಾ ಚುನಾವಣೆಯಾಗಿ ಒಂದೇ ಒಂದು ತಿಂಗಳು ಆದಮೇಲೆ ಅದು ವಿಸರ್ಜನೆಯಾದರೆ ಅವರಿಗೂ ನಿವೃತ್ತಿ ವೇತನ ಸಿಗುತ್ತದೆ ಹೀಗೆಲ್ಲಾ ನಾವು ನಮಗೆ ಬೇಕಾದಂತೆ ಸವಲತ್ತುಗಳನ್ನು ಮಾಡಿಕೊಂಡು, ನಾಳೆ ಸಾರ್ವಜನಿಕರ ಮುಂದೆ ಮುಖ ತೋರಿಸುವುದು ಹೇಗೆ? ಒಂದುಟರ್ಮ್ ಅಂದರೆ 5 ವರ್ಷ ಅವಧಿಯಾಗುವವರೆವಿಗೂ ಪೆನ್‌ಷನ್ ಕೊಡುವುದಕ್ಕಾಗುವುದಿಲ್ಲವೆಂದು ಬಹಳ ಬೇಗ ತಿದ್ದುಪಡಿ ಮಸೂದೆ ತರಬೇಕಾಗಿತ್ತು. ಅದನ್ನು ಬಿಟ್ಟು 75 ಪೈಸೆ ಬದಲಿಗೆ ಒಂದು ರೂಪಾಯಿ ಡಿ.ಎ. ಜಾಸ್ತಿ ಮಾಡಿಕೊಳ್ಳುವುದಕ್ಕೆ ತಂದಿದ್ದೀರಿ. ಕಾರುಗಳನ್ನು ರಿಪೇರಿ ಮಾಡಿಸಿ, ಮೆಂಟೇನನ್ಸ್ ಚನ್ನಾಗಿಟ್ಟುಕೊಳ್ಳಬೇಕೆಂದು ಹೇಳುತ್ತೇನೆ. ಸರ್ಕಾರದಲ್ಲಿ ಎಲ್ಲಿ ನೋಡಿದರೂ ದುರ್ವ್ಯವಹಾರಗಳೇ. ಇದಕ್ಕೆ ಬದಲಾಗಿ ಎಲ್ಲರಿಗೂ ಡೀಸೆಲ್ ಕಾರು ಕೊಡಿಸಿ, ಇನ್ನೂ 25 ಪೈಸೆ ಕಡಿಮೆಯಾಗುತ್ತದೆಂದು ಹೇಳುತ್ತೇನೆ. ಎಷ್ಟು ಖರ್ಚಾಗುತ್ತದೆಯೋ ಅಷ್ಟು ತೆಗೆದುಕೊಳ್ಳಿ. ಇವತ್ತು ಜನತೆ ಊಟಕ್ಕೆ ಇಲ್ಲದೆ ಸಾಯುತ್ತಿದ್ದಾರೆ. ಇಲ್ಲಿ ಟಿ.ಎ. ಜಾಸ್ತಿ ಮಾಡಿಕೊಳ್ಳುವುದು. ಡಿ.ಎ. ಜಾಸ್ತಿ ಮಾಡಿಕೊಳ್ಳುವುದು, ಸಂಬಳಗಳನ್ನು ಜಾಸ್ತಿ ಮಾಡಿಕೊಳ್ಳುವುದು ಇದೇ ಆಗಿದೆ. ಇವತ್ತು ನಾವು ಜನತೆಯ ಟೀಕೆಗೆ ಗುರಿಯಾಗಿದ್ದೇವೆ. ಸಾರ್ವಜನಿಕ ಕ್ಷೇತ್ರದಲ್ಲಿ ಇದ್ದ ಮೇಲೆ, ಹಣ ಮತ್ತು ಲಾಭ ಮಾಡತಕ್ಕಂಥಾದ್ದೇ ಕೆಲಸವಾಗಿ ಇಟ್ಟುಕೊಳ್ಳಬಾರದು. ಸಾರ್ವಜನಿಕ ಮನುಷ್ಯರಾದವರು ತ್ಯಾಗದ ದೃಷ್ಟಿಯನ್ನು ಇಟ್ಟುಕೊಳ್ಳಬೇಕು. ಈ ಬಿಲ್ಲಿಗೆ ನಾನು ವಿರೋಧ ಮಾಡುತ್ತೇನೆ.

## ಶಾಸನ ಮತ್ತು ಶಾಸಕರನ್ನು ಕುರಿತಂತೆ

**12ನೇ ಜೂನ್ 1973**

**ಶ್ರೀ ಎ.ಕೆ. ಸುಬ್ಬಯ್ಯ:** ಈ ಶೂನ್ಯ ವೇಳೆಯಲ್ಲಿ ಪ್ರಸಿದ್ಧವಾದ ಮತ್ತು ಗಂಭೀರವಾದ ಒಂದು ವಿಚಾರವನ್ನು ಇಲ್ಲಿ ಪ್ರಸ್ತಾಪ ಮಾಡಲಿಕ್ಕೆ ತಮ್ಮ ಅನುಮತಿಯನ್ನು ನಾನು ಕೇಳುತ್ತಿದ್ದೇನೆ. ಈ ದಿವಸ ಬೆಳಿಗ್ಗೆ ಪತ್ರಿಕೆ ನೋಡಿ ನನಗೆ ಬಹಳ ದಿಗ್ಭ್ರಮೆಯಾಯಿತು. ವಿಧಾನ ಸಭೆಯ ಸದಸ್ಯರಾದ ಮಾನ್ಯ ಶ್ರೀ ವಾಟಾಳ್ ನಾಗರಾಜ್‌ರವರು ಕಾರ್ಪೋರೇಷನ್ನಿನ ವಿರೋಧ ಪಕ್ಷದವರ ಜೊತೆಗೆ ಬೆಲೆ ಏರಿಕೆ ಬಗ್ಗೆ ಒಂದು ಪ್ರದರ್ಶನ ನಡೆಸಬೇಕೆಂದು ಅವರ ಮುಂದಾಳತ್ವದಲ್ಲಿ ಕೆಲವರು ವಿಧಾನಸೌಧದವರೆಗೆ ಬಂದಿದ್ದರು. ಅವರ ಮನವಿಯನ್ನು ಮುಖ್ಯ ಮಂತ್ರಿಗಳಿಗೆ ಕೊಡಬೇಕೆಂದೂ ಅವರು ಇಲ್ಲಿಗೆ ಬಂದಿದ್ದರು. ಆದರೆ ಶ್ರೀ ವಾಟಾಳ್ ನಾಗರಾಜ್‌ರವರಿಗೆ ಪೊಲೀಸರು ಯಾವುದೋ ಹಳೆಯ ಚಳುವಳಿಯ ಪ್ರಕರಣದಲ್ಲಿ ಬಂಧಿಸಲಿದ್ದಾರೆಂದು ಅವರಿಗೆ ತಿಳಿದು ಬಂತು ಎಂದು ಪೇಪರಿನಲ್ಲಿದೆ. ಇವರನ್ನು ಹಿಡಿಯಲು ವಿಧಾನ ಸೌಧದ ನಾಲ್ಕು ದ್ವಾರದಲ್ಲೂ ಆರು ಜನ ಸಬ್ ಇನ್ಸ್‌ಪೆಕ್ಟರುಗಳು ಹಾಗೂ ಹತ್ತಾರು ಪೊಲೀಸರು ಪಾರಾ ಕಾಯುತ್ತಿದ್ದರೆಂದು ನನಗೆ ತಿಳಿದು ಬಂದಿದೆ. ಆದರೆ ಅವರಿಗೆ ರಾತ್ರಿ ಹತ್ತು ಗಂಟೆಯವರೆಗೆ ಈ ಶಾಸಕರು ಎಲ್ಲಿದ್ದಾರೆಂಬುದು ಗೊತ್ತಾಲಿಲ್ಲ, ಆದರೆ ಇದಕ್ಕೆ ಮೊದಲೇ ವಿಧಾನಸೌಧಕ್ಕೆ ಶ್ರೀ ವಾಟಾಳ್ ನಾಗರಾಜ್‌ರವರನ್ನು ಒಬ್ಬರು ಡೆಪ್ಯುಟಿ ಸೆಕ್ರೆಟರಿಯ ರೂಮಿನಲ್ಲಿ ಕೂಡಿ ಹಾಕಿ ಬೀಗ ಹಾಕಿದರೋ ಏನೋ ನಮಗೆ ಸರಿಯಾದ ಇನ್‌ಫಾರ್‌ಮೇಷನ್ ಸಿಕ್ಕಲಿಲ್ಲ. ಆದರೆ ಈ ರೀತಿ ಒಬ್ಬ ಶಾಸಕರು ಜನರ ಹಿತವನ್ನು ಕಾಪಾಡಲು ಹಾಗೂ ಸಾರ್ವಜನಿಕರ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡುವಂತಹ ಶಾಸಕರಿಗೆ ಪೋಲೀಸರು ಇಂತಹ ವರ್ತನೆ ತೋರಿದರೆ ಇನ್ನು ನಮ್ಮ ರಾಜ್ಯದಲ್ಲಿ ಜನತೆಗೆ ನ್ಯಾಯ ಹೇಗೆ ಸಿಗಬೇಕು? ಶಾಸಕರಿಗೆ ಏನೂ ಪ್ರಾಧಾನ್ಯತೆ ಇಲ್ಲವೇ?ಈ ಶಾಸಕರು ಬೆಂಗಳೂರಿನಲ್ಲಿ ಸಿಗುತ್ತಿರಲಿಲ್ಲವೇ? ಇವರೇನು ದರೋಡೆಕೋರರೇ? ವಿಧಾನ ಸೌಧದ ಮುಂದೆ ಪ್ರದರ್ಶನ ನಡೆಸಲು ಬಂದಂತಹ ಒಬ್ಬರು ಶಾಸಕರಾದ ಶ್ರೀ ವಾಟಾಳ್ ನಾಗರಾಜ್‌ರವರಿಗೆ ಇಂತಹ ಅವಮಾನ ಮಾಡಿದರೆ ಇವರೇನು ದರೋಡೆ

ಮಾಡಿದವರೆಂದು ಪೊಲೀಸರು ಭಾವಿಸಿದ್ದಾರೇನು? ಇದರಿಂದ ಪೊಲೀಸರ ವರ್ತನೆ ಏನು ತೋರಿಸುತ್ತದೆ ಎಂದರೆ ಅವರ ಮನಸ್ಸಿಗೆ ಬಂದಂತೆ ಮಾಡುವುದೇ ಅವರ ನಿಯಮ ಎಂದು ಕಾಣುತ್ತದೆ. ಕಳ್ಳ ಸಾಗಾಣಿಕೆ ಮಾಡುವ ದರೋಡೆಕೋರರನ್ನು ಹಿಡಿಯುವಂತೆ ಇವರನ್ನು ಹಿಡಿಯಲು ಇವರೇನು ಅಂತಹ ಚೋರರಾಗಿದ್ದರೆ? ಶಾಸಕರ ಬಗ್ಗೆ ಸ್ವಲ್ಪ ಮರ್ಯಾದೆಯಿಂದ ಹಾಗೂ ಜವಾಬ್ದಾರಿಯಿಂದ ಪೊಲೀಸರು ಸರಿಯಾಗಿ ವರ್ತಿಸಬೇಕಂದು ತಾವು ಸರಕಾರಕ್ಕೆ ಆದೇಶ ನೀಡಬೇಕೆಂದು ತಮ್ಮ ಮೂಲಕ ಕೋರುತ್ತೇನೆ. ಸಾರ್ವಜನಿಕರ ಸೇವೆ ಮಾಡುವುದು ಶಾಸಕರ ಕರ್ತವ್ಯ. ಹೀಗಿರುವಾಗ ಒಬ್ಬ ಶಾಸಕರಿಗೆ ಈ ರೀತಿ ಪೊಲೀಸರು ಅವಮಾನ ಮಾಡಿದರೆ ಇವರಿಗೇನು ನೀತಿ ನಿಯಮಗಳೇ ಇಲ್ಲವೇನು? ಇದಕ್ಕಾಗಿ ಸರಕಾರ ಸೂಕ್ತವಾದ ಆದೇಶ ಕೊಡಬೇಕೆಂದು ಇಲ್ಲಿ ಹೇಳುತ್ತೇನೆ.

## ಶಾಸಕರಿಗೆ ಸೌಲಭ್ಯ

### 29ನೇ ಆಗಸ್ಟ್ 1974

**ಶ್ರೀ ಎ.ಕೆ. ಸುಬ್ಬಯ್ಯ:** ಲೆಜಿಸ್ಲೇಚರ್ಸ್ ಹೋಮಿನಲ್ಲಿ ಆಡಳಿತದ ವಿಚಾರವಾಗಿ ಒಂದು ಮಾತು ಹೇಳಬೇಕೆಂದು ಬಯಸುತ್ತೇನೆ. ಏತಕ್ಕೆ ತಡೆ ಹಿಡಿದೆ ಅಂದರೆ ಇಲ್ಲಿ ಸ್ವಂತ ಅನುಕೂಲದ ವಿಚಾರ ಪ್ರಸ್ತಾಪ ಮಾಡಲಿಕ್ಕೆ ಬಂದಿಲ್ಲ. ಸಾರ್ವಜನಿಕರ ವಿಚಾರ ಮಾತಾನಾಡುವುದಕ್ಕೆ ಬಂದಿದ್ದೇವೆ. ಹೇಗೆ ಹೇಳಬೇಕೋ ಎಂದು ಇದ್ದೆ. ಈಗ ಅದು ಪ್ರಸ್ತಾಪಕ್ಕೆ ಬಂದಿದೆ. ಆಡಳಿತ ವಿಚಾರ ಸ್ವಲ್ಪ ಹೇಳುತ್ತೇನೆ. ಫೋನ್ ಮಾಡಿ ಕಾಫಿ ತಿಂಡಿ ತನ್ನಿ ಎಂದರೆ ವ್ಯವಸ್ಥೆಯಿಲ್ಲ. ಗೆಸ್ಟ್ ಬರುತ್ತಾರೆ, ಕಾಫಿ ಕುಡಿಯೋಣ ಎಂದರೆ ಅಷ್ಟಕ್ಕೂ ವ್ಯವಸ್ಥೆ ಇಲ್ಲ. ನಾವು ಏತಕ್ಕೆ ಲೆಜಿಸ್ಲೇಚರ್ ಆಗಿ ಇರಬೇಕೋ ದುಃಖವಾಗುತ್ತದೆ. ಕಾಫಿಯನ್ನು ರೂಮಿಗೆ ಸಪ್ಲೆ ಮಾಡಿದರೆ ಎಕ್ಸ್‌ಟ್ರಾ ಚಾರ್ಜ್ ಆಗುತ್ತದೆಂದು ಹೇಳುತ್ತಾರೆ. ಆಗಲಿ ಸಪ್ಲೆ ಮಾಡಿ ಎಂದು ಹೇಳಿದರೆ ರೂಮ್‌ಬಾಯ್ ಕಳಿಸಬೇಕು, ಕ್ಯಾಂಟೀನ್‌ನಲ್ಲಿ ವ್ಯವಸ್ಥೆಯಿಲ್ಲ 'ಎಂದು ಹೇಳುತ್ತಾರೆ. ರೂಮ್‌ಬಾಯ್ ಎಲ್ಲೂ ಸಿಕ್ಕುವುದಿಲ್ಲ. ರಿಸೆಪ್ಷನಿಸ್ಟ್‌ಗೆ ಹೇಳಿದರೆ, 'ನಾನು ರಿಸಪ್ಷನಿಸ್ಟ್, ರೂಮ್‌ಬಾಯ್ ವಿಚಾರ ನನಗೆ ಗೊತ್ತಿಲ್ಲ' ಎಂದು ಹೇಳುತ್ತಾನೆ. ರೂಮ್ ಬಾಯ್ ಹುಡುಕಿ ಕಳಿಸಿದರೆ, ದುಡ್ಡು ಮೊದಲು ಕಳಿಸಬೇಕು ಎಂದು ಹೇಳುತ್ತಾರೆ. ಈ ರೀತಿ ನಮಗೆ ಕಾಫಿ ತಿಂಡಿ ರೂಮಿಗೆ ಸರಿಯಾಗಿ ಸಪ್ಲೆ ಆಗುತ್ತಾ ಇಲ್ಲ. ದೊಡ್ಡ ಆಡಳಿತಕ್ಕೆ ಹೆಸರಾದಂಥ ಚನ್ನಬಸಪ್ಪನವರ ಹಾಸ್ಟೆಲ್ ಈ ರೀತಿ ಇದೆ ಎಂದರೆ, ಬೇರೆ ಕಡೆ ಹೇಗೆ ಇದೆ ಎಂದು ತಿಳಿದುಕೊಳ್ಳುವುದಕ್ಕೆ ಸಾಧ್ಯ ಇದೆ ಜನರಲ್ ಹಾಸ್ಟೆಲಿನಲ್ಲಿ ಕಾಫಿ ತಿಂಡಿಯನ್ನು ತೆಗೆದುಕೊಳುವುದನ್ನು ಬಿಟ್ಟು ಈಗ ಹೊರಗಡೆ ತೆಗೆದುಕೊಳ್ಳುತ್ತೇನೆ. 2–3 ದಿವಸದಿಂದ ಕಾಫಿಯನ್ನು ಸಹ ಅಲ್ಲಿ ತೆಗೆದುಕೊಳ್ಳುವುದಿಲ್ಲ. ನೆಟ್ಟಗೆ ಇಲ್ಲಿಗೆ ಬರುತ್ತೇನೆ. ಊಟ ಮುಗಿಸಿಕೊಂಡು ಹೋಗುತ್ತೇನೆ. ಈ ರೀತಿ ಅವ್ಯವಸ್ಥೆ ಇದೆ. ನಾವು ಎಲ್ಲಿಯಾದರೂ ಬೀದಿಯಲ್ಲಿ ಮಲಗಿಕೊಂಡು ಇಲ್ಲಿಗೆ ಬರುತ್ತೇವೆ. ಅದಕ್ಕೂ ತಯಾರಾಗಿದ್ದೇವೆ. ಶಾಸಕರಿಗೆ ಈ ರೀತಿಯ ಅವಮಾನವಾಗುವ ಪರಿಸ್ಥಿತಿ ಇರಬಾರದು.

# ಸ್ವತಂತ್ರ ಶಾಸನ ಸಭೆಗೆ ಸಚಿವಾಲಯ

**19ನೇ ಏಪ್ರಿಲ್ 1975**

**ಶ್ರೀ ಎ.ಕೆ. ಸುಬ್ಬಯ್ಯ:** ಇನ್‌ಡಿಪೆಂಡೆಂಟ್ ಲೆಜಿಸ್ಲೇಚರ್ ಸೆಕ್ರೆಟರಿಯೇಟ್ ಬಗ್ಗೆ ಪ್ರಸ್ತಾಪ ಮೊದಲೇ ಬಂದಿತ್ತು. ಬೇರೆಯವರು ಜವಾಬ್ದಾರಿಯನ್ನು ತೆಗೆದುಕೊಂಡರೆ ಅಭ್ಯಂತರವೇನಿಲ್ಲ. ಈಗ ಮುಖ್ಯ ಮಂತ್ರಿಗಳು ಇರುವುದರಿಂದ ಆ ವಿಚಾರವನ್ನು ಪ್ರಸ್ತಾಪ ಮಾಡುತ್ತಿದ್ದೇನೆ. ಇದರ ಬಗ್ಗೆ ಎರಡು ಮೂರು ಮೀಟಿಂಗ್‌ನಲ್ಲೂ ಭಾಗವಹಿಸಿ ಇಂಡಿಪೆಂಡೆಂಟ್ ಲೆಜಿಸ್ಲೇಚರ್ ಸೆಕ್ರೆಟರಿಯೇಟ್ ಆಗಬೇಕೆಂದು ತೀರ್ಮಾನ ಮಾಡಿ ಅಪ್ರೂವ್ ಮಾಡಿದ್ದಾರೆ. ಮುಖ್ಯ ಮಂತ್ರಿಗಳು ಸಹ ತತ್ವಶಃ ಒಪ್ಪಿಕೊಂಡಿದ್ದರು. ಕಮಿಟಿಯಲ್ಲಿ ಫೈನಲೈಸ್ ಮಾಡಿ ಮುಗಿಸಿ ಈ ಅಧಿವೇಶನದಲ್ಲಿ ತರುವ ಮಾತು ಕೊಟ್ಟಿದ್ದರ ಮೇಲೆ ಈ ದಿವಸ 19ನೇ ತಾರೀಖು ಅಸೆಂಬ್ಲಿಯ ಮುಂದೆ ತರಬೇಕಾಗಿತ್ತು. ಮತ್ತು ಇದು ಅಜೆಂಡಾದಲ್ಲಿಯೂ ಕೂಡ ಸೇರಿತ್ತು. ಈಗ ಸಿಕ್ಕಿದಂತ ವರ್ತಮಾನದ ಪ್ರಕಾರ ಅಸೆಂಬ್ಲಿಯಲ್ಲಿ ತರುವುದಿಲ್ಲ ಎನ್ನುವ ಧೋರಣೆ ಇರುವುದು ಕಂಡು ಬಂದಿದೆ. ಕ್ಯಾಬಿನೇಟ್ ತೀರ್ಮಾನ ಆ ಬಗ್ಗೆ ಆಗಬೇಕು ಅಂದರೆ, ಈ ಅಧಿವೇಶನದಲ್ಲಿ ಅದು ಬರುವಂತೆ ಕಾಣುವುದಿಲ್ಲ. ಇಷ್ಟು ಹೊತ್ತಿಗೆ ಫಾರ್ಮಾಲಿಟಿ ಪ್ರಕಾರ ಮಾಡಬೇಕಾಗಿತ್ತು. ಎಲ್ಲ ಫಾರ್ಮಾಲಿಟಿ ಪ್ರಕಾರ ತೀರ್ಮಾನ ಮಾಡಿ ಫೈನಲೈಸ್ ಆದ ಮೇಲೆ, ಮಾನ್ಯ ಶಿವಪ್ಪನವರೂ ಕೂಡ ಅದರಲ್ಲಿ ಇದ್ದರು. ಅದನ್ನು ಚರ್ಚೆ ಇಲ್ಲದೆ ಪಾಸ್ ಮಾಡೋಣ ಎಂದು ಒಪ್ಪಿ ನೆನ್ನೆ ಫೈನಲೈಸ್ ಮಾಡಿದ್ದರು. ಈವತ್ತು ಅಸೆಂಬ್ಲಿ ಕೂತುಕೊಳ್ಳುವುದಿಲ್ಲ. ಈ ಅಧಿವೇಶನದಲ್ಲಿ ಅದು ಬರುವಂತ ಪರಿಸ್ಥಿತಿ ಇಲ್ಲ. ಮಾನ್ಯ ಮುಖ್ಯ ಮಂತ್ರಿಗಳು ಒಂದು ಆಶ್ವಾಸನೆ ಕೊಟ್ಟು, ಈ ಅಧಿವೇಶನದೊಳಗೆ ಇಂಡಿಪೆಂಡೆಂಟ್ ಲೆಜಿಸ್ಲೇಚರ್ ಸೆಕ್ರೆಟರಿಯೇಟ್ ಜಾರಿಗೆ ತರುತ್ತೇವೆಂದು ಹೇಳಿ, ಕಡೇ ಘಳಿಗೆಯಲ್ಲಿ ಯಾವ ಬಿಲ್ ಇಲ್ಲದಂತೆ ಸರ್ಕಾರದವರು ಮಾಡಿದ್ದು ಸರಿಯಲ್ಲ. ದಯವಿಟ್ಟು ಈ ಅಧಿವೇಶನದೊಳಗೆ ಆ ಒಂದು ಕಾನೂನು ತಂದು ಇಂಡಿಪೆಂಡೆಂಟ್ ಲೆಜಿಸ್ಲೇಚರ್ ಸೆಕ್ರೆಟರಿಯೇಟ್ ಬಗ್ಗೆ ಫೈನಲೈಸ್ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಇದರ ಬಗ್ಗೆ ಮುಖ್ಯ ಮಂತ್ರಿಗಳು ಏನು ಹೇಳುತ್ತಾರೆ?

**ಶ್ರೀ ಡಿ. ದೇವರಾಜ ಅರಸ್ :** ಇದರ ಬಗ್ಗೆ ನಾನು ಹೆಚ್ಚಿಗೆ ಏನು ಹೇಳಬೇಕಾದ ಅಗತ್ಯವಿಲ್ಲ. ಕಾರಣಾಂತರದಿಂದ ನಾವು ಯಾವ ಯಾವ ರೀತಿ ಬಿಸಿನೆಸ್ ಪ್ರೋಗ್ರಾಂ ಹಾಕುತ್ತೇವೆ ಆ ರೀತಿಯಲ್ಲಿ ನಡೆಯುತ್ತಾ ಇಲ್ಲ. ಸರ್ಕಾರಕ್ಕಿಂತ ಮಾನ್ಯ ಸದಸ್ಯರಿಗೆ ಹೆಚ್ಚಿನ ರೆಸ್ಪಾನ್ಸಿಬಿಲಿಟಿ ಇದೆ. ಆದುದರಿಂದ ಇದು ವಿಳಂಬವಾಗಿದೆಯೆಂದರೆ ಅದು ತಮ್ಮ ಅಭಿಪ್ರಾಯನ್ನು ಈಗಾಗಲೇ ತರಬೇಕಾಗಿತ್ತು. ಆದರೆ ಬೇರೆ ಬೇರೆ ಮನಿ ಬಿಲ್‌ಗಳು ಇದ್ದು ಅವುಗಳಿಗೆ ಪೂರ್ತಿಕಾಲ ವಿನಿಯೋಗವಾಗಿರುವುದರಿಂದ ಇದನ್ನು ತರುವುದಕ್ಕಾಗಲಿಕ್ಕಿಲ್ಲ. ಮುಂದಿನ ಅಧಿವೇಶನದಲ್ಲಿ ಎರಡೂ ಮನೆಗಳಲ್ಲಿ ಅದನ್ನು ತರುವುದಕ್ಕೆ ಪ್ರಯತ್ನ ಪಡುತ್ತೇನೆ.

**ಶ್ರೀ ಎ.ಕೆ. ಸುಬ್ಬಯ್ಯ :** ನೆನ್ನೆ ನಡೆದ ಮೀಟಿಂಗ್‌ನಲ್ಲಿ ಅದನ್ನು ಈವತ್ತು ತರುವುದಕ್ಕೆ ತೀರ್ಮಾನವಾಗಿತ್ತು.

**ಶ್ರೀ ಡಿ. ದೇವರಾಜ ಅರಸ್ :** ಅದನ್ನು ತರುವುದಕ್ಕೆ ಕೆಲವು ಫಾರ್ಮಾಲಿಟೀಸ್ ಇವೆ. ಕೆಲವು ಪಾಲಿಸಿಗಳು ಇವೆ. ಅಧ್ಯಕ್ಷರೇ, ತಮಗೇ ಗೊತ್ತಿದೆ, ಏನೆಂದರೆ, ಆ ಮನೆಯಲ್ಲಿ ಮೂರು ರೀಡಿಂಗ್ ಆಗಬೇಕು. ಈ ಮನೆಯಲ್ಲಿ ಮೂರು ರೀಡಿಂಗ್ ಆಗಬೇಕು. ನಂತರ ಗವರ್ನರ್‌ಗೆ ಹೋಗಿ ಬರಬೇಕು. ಇದು ಕ್ಯಾಬಿನೆಟ್ ಮುಂದೆ ಹೋಗಬೇಕಾಗುತ್ತದೆ. ಅಲ್ಲಿ ಅಪ್ರೂವಲ್ ತೆಗೆದುಕೊಂಡು ಆ ಮೇಲೆ ಕೆಳಗಿನ ಮನೆಯಲ್ಲಿ ಪಾಸು ಆಗಿ ಅದು ಈ ಮನೆಯಲ್ಲಿ ಬಂದು ಪಾಸ್ ಮಾಡಬೇಕಾಗುತ್ತದೆ.

**ಶ್ರೀ ಎ.ಕೆ. ಸುಬ್ಬಯ್ಯ :** ಇದು ಸಂತೋಷದ ವಿಚಾರವಲ್ಲ. ಚರ್ಚೆ ಇಲ್ಲದೆ ಪಾಸ್ ಮಾಡಬೇಕೆಂದು ಹೇಳಿದ್ದೀರಿ. ಕಡೇ ಘಳಿಗೆಯಲ್ಲಿ ಅಸೆಂಬ್ಲಿ ಅಡ್ಜರ್ನ್ ಆಗುವ ಕಡೆ ದಿವಸ ಕ್ಯಾಬಿನೇಟ್ ಮುಂದೆ ಹೋಗಬೇಕು ಎನ್ನುವ ವಿಚಾರ ಒಂದು ವಾರದ ನಂತರ ಹೊಳೆಯಿತೇ? ಕಡೇ ಘಳಿಗೆಯಲ್ಲಿ ಈ ರೀತಿ ರಾಜಕೀಯ ಮಾಡತಕ್ಕದ್ದು ಸರಿಯಿಲ್ಲ.

**ಶ್ರೀ ಗೋವಿಂದ ಪಿ. ಒಡೆಯರಾಜ್ :** ಲೆಜಿಸ್ಲೇಚರ್ ಸೆಕ್ರೆಟರಿಯೇಟ್‌ನ್ನು ಇಂಡಿಪೆಂಡೆಂಟ್ ಮಾಡುವುದರ ಬಗ್ಗೆ ಬಿಲ್ ತರುತ್ತೇವೆಂದು ವಾಗ್ದಾನ ಕೊಟ್ಟು ಅದರಂತೆ ಸರ್ಕಾರ ನಡೆದುಕೊಳ್ಳದಿದ್ದರೆ ಹೇಗೆ?

**ಸಭಾಪತಿಯವರು :** ಸರ್ಟನ್ ಫಾರ್ಮಾಲಿಟೀಸ್ ಇರುತ್ತದೆ. ಅವನ್ನು ನಾವು ಅನುಸರಿಸಬೇಕಾಗುತ್ತದೆ.

# ಎಸ್.ಎಂ. ಕೃಷ್ಣ ಅವರ ರಾಜೀನಾಮೆ ಕುರಿತು ಚರ್ಚೆ

**22ನೇ ಜುಲೈ 1977**

**ಶ್ರೀ ಎ.ಕೆ. ಸುಬ್ಬಯ್ಯ:** ಮಾನ್ಯ ಎಸ್.ಎಂ. ಕೃಷ್ಣ ಅವರು ತಮ್ಮ ಮಂತ್ರಿ ಪದವಿಗೆ ರಾಜೀನಾಮೆ ನೀಡಿದ ಮೇಲೆ, ಈ ಸದನದಲ್ಲಿ ಹೇಳಿಕೆ ಕೊಡಲಿಲ್ಲ. ಸಾಮಾನ್ಯವಾಗಿ, ಮಂತ್ರಿ ಪದವಿಗೆ ರಾಜೀನಾಮೆ ಕೊಟ್ಟವರು ಸದನದಲ್ಲಿ ಹೇಳಿಕೆ ಕೊಡುವ ಸಂಪ್ರದಾಯವಿದೆ. ಆದುದರಿಂದ ಮಾನ್ಯ ಎಸ್.ಎಂ. ಕೃಷ್ಣ ಅವರು ಏತಕ್ಕೆ ರಾಜೀನಾಮೆ ಕೊಟ್ಟರೆಂಬುದು ನಮಗೆ ಗೊತ್ತಾಗುವುದು ಬೇಡವೆ?

**ಶ್ರೀ ಡಿ. ಕರಿಯಪ್ಪಗೌಡ :** ಅವರಿಗೆ ಕುರ್ಚಿ ಇಲ್ಲದೇ ಇರುವುದರಿಂದ, ಹೇಳಿಕೆ ಕೊಡುವ ಪ್ರಮೇಯವೇ ಇಲ್ಲ.

**ಶ್ರೀ ಎಂ. ರಘುಪತಿ :** ಕುರ್ಚಿ ಇಲ್ಲದ ಮೇಲೆ ಅವರು ಹೇಗೆ ಹೇಳಿಕೆ ಕೊಡುತ್ತಾರೆ?

**ಶ್ರೀ ಎ.ಕೆ. ಸುಬ್ಬಯ್ಯ :** ಮಾನ್ಯ ಶ್ರೀ ಎಸ್.ಎಂ. ಕೃಷ್ಣ ಅವರು ಈ ಸದನದ ಒಬ್ಬ ಸದಸ್ಯನಾಗಿ ಮಂತ್ರಿ ಮಂಡಲದಲ್ಲಿದ್ದು, ಈ ಸದನವನ್ನು ಪ್ರತಿನಿಧಿಸುತ್ತಿದ್ದರು. ಇದು ನಮಗೆ ತುಂಬ ಹೆಮ್ಮೆಯ ವಿಚಾರ. ಮೇಲ್ಮನೆಗೆ ಸೂಕ್ತ ಪ್ರಾತಿನಿಧ್ಯವನ್ನು ಮಂತ್ರಿ ಮಂಡಲದಲ್ಲಿ ಕೊಡಬೇಕೆಂತಲೂ ನಾವು ವಾದ ಮಾಡಿದ್ದೆವು.

**ಸಭಾಪತಿಯವರು :** ತಮಗೆ ಮಂತ್ರಿಗಳಾಗುವುದಕ್ಕೆ ಇಷ್ಟವಿದೆಯೋ?

**ಶ್ರೀ ಎ.ಕೆ. ಸುಬ್ಬಯ್ಯ :** ಅದನ್ನು ಆಮೇಲೆ ನೋಡೋಣ. ಮಾನ್ಯ ಶ್ರೀ ಎಸ್.ಎಂ. ಕೃಷ್ಣ ಅವರು ತಮ್ಮ ಮಂತ್ರಿ ಪದವಿಗೆ ರಾಜೀನಾಮೆ ನೀಡಿದ ಮೇಲೆ ಮಂತ್ರಿ ಮಂಡಲದಲ್ಲಿ ಈ ಸಭೆಯ ಪ್ರಾತಿನಿಧ್ಯವಿಲ್ಲವಾಗಿದೆ. ಈ ಮನೆಯ ಸದಸ್ಯರಾದವರು ಮಂತ್ರಿಗಳಾಗಿದ್ದು ರಾಜೀನಾಮೆ ನೀಡಿದರೆ ಹೇಳಿಕೆ ನೀಡಬಹುದೆಂದು ನಿಯಮವಿದೆ. ಅವರು ರಾಜೀನಾಮೆ ನೀಡಿದ ಬಗ್ಗೆ ನಮ್ಮ ಮನಸ್ಸಿನಲ್ಲಿ ಆತಂಕವಿದೆ. ಅವರು ರಾಜೀನಾಮೆ ನೀಡುವ ಮುನ್ನ ಈ ಮನೆಯ ಸದಸ್ಯರಾದುದರಿಂದ ನಮ್ಮ ಸಲಹೆ ಕೇಳಬಹುದಿತ್ತು. ನಾವು ಮಾರ್ಗದರ್ಶನ ಮಾಡುತ್ತಿದ್ದೆವು. ಆದರೆ,

ಅವಕಾಶ ನಮಗೆ ಸಿಗಲಿಲ್ಲ. ಇದ್ದಕ್ಕಿದ್ದ ಹಾಗೆ ಅವರು ರಾಜೀನಾಮೆ ಕೊಡಲು ಅವರ ತಲೆಗ್ಯಾರಾದರೂ ಬಡಿದಿದ್ದರೆ? ಅಥವಾ ಯಾವುದಾದರೊಂದು ರಾಜಕೀಯ ಕಾರಣದಿಂದ ರಾಜೀನಾಮೆ ಕೊಟ್ಟಿದ್ದಾರೆಯೇ? ಈ ಬಗ್ಗೆ ನಮ್ಮ ಮನಸ್ಸಿನಲ್ಲಿ ಆತಂಕವಿರುವುದರಿಂದ, ಮಾನ್ಯ ಶ್ರೀ ಕೃಷ್ಣ ಅವರು ಹೇಳಿಕೆ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

**ಸಭಾಪತಿಯವರು :** ಹೇಳಿಕೆ ಕೊಡುವ ಮುನ್ನ ಹೇಳಿಕೆಯ ಲಿಖಿತ ಪ್ರತಿಯನ್ನು ನಮಗೆ ಕೊಡಬೇಕು ಮತ್ತು ಅದು ಸಭೆಯ ಕಾರ್ಯಕಲಾಪಗಳ ಪಟ್ಟಿಯಲ್ಲಿ ನಮೂದಾಗಬೇಕೆಂದು ನಿಯಮವಿದೆ. ಆದರೂ, ನಾನು ಇದನ್ನು ವಿಶೇಷವೆಂದು ಭಾವಿಸಿ, ಅವರು ಹೇಳಿಕೆ ನೀಡಲು ಅನುಮತಿ ನೀಡುತ್ತೇನೆ. ಅವರು ಹೇಳಿಕೆ ಕೊಡುವುದಕ್ಕೆ ನನ್ನ ಅಭ್ಯಂತರವಿಲ್ಲ.

**ಶ್ರೀ ಅಬ್ದುಲ್ ನಜೀರ್‌ಸಾಬ್ :** ರಾಜೀನಾಮೆ ಕೊಡದಿದ್ದರೆ ಕೊಡಿ ಎನ್ನುತ್ತಾರೆ, ಕೊಟ್ಟರೆ ಏತಕ್ಕೆ ಕೊಟ್ಟಿರಿ ಎಂದು ಕೇಳುತ್ತಾರೆ.

**ಶ್ರೀ ಎಂ. ರಘುಪತಿ :** ಮಾನ್ಯ ಎಸ್.ಎಂ. ಕೃಷ್ಣ ಅವರು ಹೇಳಿಕೆ ಕೊಡುವುದರ ಮುಖಾಂತರ ಒಂದು ಹೊಸ ಸಂಪ್ರದಾಯವನ್ನು ಹಾಕಬೇಕೆಂದು ಹೇಳುತ್ತೇನೆ.

**ಶ್ರೀ ಎ.ಕೆ. ಸುಬ್ಬಯ್ಯ :** ಇದು ಒಂದು ದೊಡ್ಡ ಆತಂಕಕಾರಿ ಪ್ರಶ್ನೆಯಾಗಿದೆ ನಮಗೆ. ನಾವು ಈ ಸದನದ ಸದಸ್ಯರ ಕಷ್ಟಸುಖಗಳನ್ನು ವಿಚಾರಿಸುವುದಕ್ಕೆ ಆಗದಿದ್ದ ಮೇಲೆ, ಇಲ್ಲಿ ನಾವು ಏತಕ್ಕೆ ಕೆಲಸ ಮಾಡಬೇಕಾಗಿದೆ?

**Sri S.M. Krishna :** Mr. Chairman, Sir, I do not know whether I can seek your indulgence to make a statement because the other day I was present here for a short while and the Leader of the Opposition did make a reference to my resignation.

**ಶ್ರೀ ಡಿ. ಕರಿಯಪ್ಪ ಗೌಡ :** ಮಾನ್ಯ ಕೃಷ್ಣ ಅವರು ಬೇರೆ ಸ್ಥಾನದಲ್ಲಿ ಕುಳಿತಿದ್ದಾರೆ. ಅವರು ಯಾವ ಸ್ಥಾನದಲ್ಲಿ ಬೇಕಾದರೂ ಕುಳಿತು ಹೇಳಿಕೆ ಕೊಡಬಹುದೇ? ಅವರ ಸ್ಥಾನದಲ್ಲಿ ಕುಳಿತು ಹೇಳಿಕೆ ಕೊಟ್ಟರೆ ಒಳ್ಳೆಯದು.

**ಸಭಾಪತಿಯವರು :** ಹೇಳಿಕೆ ಕೊಡುವ ಮೊದಲು ಅದರ ಕಾಪಿ ಕೊಟ್ಟಿದ್ದರೆ ಅನುಕೂಲವಾಗುವುದು.

**Sri A.K. Subbaiah :** It is the sence of the House that he should make a stetement.

**Mr. Chairman :** We are going to close by this evening because we have only one Bill to finish. It would have been better if he had given a written statement in advance. Even then he can make a statement if he wants to.

## ಸಭಾಪತಿಗಳ ಸ್ಥಾನ ಖಾಲಿಯಾದ ತಕ್ಷಣ ತುಂಬಬೇಕು

**12ನೇ ಜುಲೈ 1978**

**ಶ್ರೀ ಎ.ಕೆ. ಸುಬ್ಬಯ್ಯ:** ಈ ಸದನದ ಸಭಾಪತಿಯವರ ಸ್ಥಾನ ಖಾಲಿಯಾಗಿದೆ. ತಾವು ಉಪ ಸಭಾಪತಿಗಳಾಗಿ ತಮ್ಮ ಕಾರ್ಯವನ್ನು ಬಹಳ ಯಶಸ್ವಿಯಾಗಿ ಎಲ್ಲರ ಮೆಚ್ಚಿಗೆಗೆ ಅನುಗುಣವಾಗಿ ನಡೆಸುತ್ತಿದ್ದೀರಿ. ಅದು ಬೇರೆ ವಿಚಾರ. ಈ ರಾಜ್ಯಾಂಗದಲ್ಲಿ ಸಭಾಪತಿಯ ಸ್ಥಾನವಾಗಲಿ ಅಥವಾ ಉಪಸಭಾಪತಿಯ ಸ್ಥಾನವಾಗಲಿ ಖಾಲಿಯಾದ ತಕ್ಷಣ ಅದನ್ನು ತುಂಬಬೇಕೆಂದು ಹೇಳುವಂತಹ ಅಂಶ ಇದೆ. ನಮ್ಮ ಈ ಸದನದ ನಿಯಮಾವಳಿ ಪ್ರಕಾರ ಮಾನ್ಯ ರಾಜ್ಯಪಾಲರು ತಕ್ಷಣ ಒಂದು ತಾರೀಖನ್ನು, ಗೊತ್ತು ಮಾಡಿ ಚುನಾವಣೆ ಮಾಡಬೇಕೆಂದು ಇದೆ. ಅ ಬಗ್ಗೆ ರಾಜ್ಯಪಾಲರಿಗೆ ಸರ್ಕಾರದವರು ತಿಳಿಸಬೇಕು. ಈ ಸ್ಥಾನ ಖಾಲಿಯಾಗಿ ಇಂದಿಗೆ 12 ದಿನಗಳಾದವು. ಈ ಲಾಗಾಯ್ತು ಚುನಾವಣೆಯನ್ನು ನಡೆಸುವಂತಹ ಸೂಚನೆ ಕಂಡುಬಂದಿಲ್ಲ. ಚುನಾವಣೆಯನ್ನು ನಡೆಸಿ ಆ ಸ್ಥಾನವನ್ನು ತುಂಬತಕ್ಕದ್ದು ಬಹಳ ಅವಶ್ಯಕವಾಗಿದೆ. ಈ ಬಗ್ಗೆ ಸರ್ಕಾರದ ಆಲೋಚನೆಯಾದರು ಏನು? ಮತ್ತು ಯಾವ ಕ್ರಮವನ್ನು ಕೈಗೊಂಡಿದ್ದೀರಿ ಏನು ಎಂಬುದನ್ನು ತಿಳಿಸಬೇಕು.

**Sri D. Devaraj Urs :** I am told that a letter has been sent from your office to the Government and I don't know whether that letter has gone to the Governor or not. I shall verify and if it is not sent, I will see that it is sent immediately.

## ಸಭೆಗೆ ಪ್ರಾಮುಖ್ಯತೆ ಇಲ್ಲವೇ?

**20ನೇ ಮಾರ್ಚ್ 1979**

**ಶ್ರೀ ಎ.ಕೆ. ಸುಬ್ಬಯ್ಯ:** ಈಗ ಬಡ್ಜೆಟ್ ಚರ್ಚೆಯಲ್ಲಿ ಭಾಗವಹಿಸುವುದಕ್ಕೆ ಕಷ್ಟವಾಗುತ್ತದೋ ಸುಲಭವಾಗುತ್ತದೋ ಆ ಪ್ರಶ್ನೆ ಬೇರೆ. ನನಗೆ ಈಗ ಸುದ್ದಿ ಬಂದಿರುವ ಪ್ರಕಾರ, ಕೆಳಮನೆಯಲ್ಲಿ ಈ ಕಾರಣದ ಮೇಲೆ ಚರ್ಚೆಯನ್ನು ಮುಂದಕ್ಕೆ ಹಾಕಿದ್ದಾರೆ. ಯಾವ ಕಾರಣದ ಮೇಲೆ ಕೆಳಮನೆಯಲ್ಲಿ, ಚರ್ಚೆಯನ್ನು ಮುಂದಕ್ಕೆ ಹಾಕಿದರೋ ಆ ಕಾರಣ ಇಲ್ಲಿ ಏಕೆ ಅನ್ವಯವಾಗುವುದಿಲ್ಲ? ಇಲ್ಲಿ ನಾವು ಚರ್ಚೆ ಮುಂದುವರಿಸಬಹುದು ಎಂದರೆ ಅಲ್ಲಿ ಏಕೆ ಮುಂದುವರಿಸಲಿಲ್ಲ? ಈ ಬಗ್ಗೆ ಮಾನ್ಯ ಹಣಕಾಸಿನ ಮಂತ್ರಿಗಳು ಉತ್ತರಿಸಿದರೆ ಒಳ್ಳೆಯದು. ಈ ಬಗ್ಗೆ ಸರ್ಕಾರದ ಧೋರಣೆ ಏನು? ಅಲ್ಲಿ ಚರ್ಚೆ ಮಾಡುವುದಕ್ಕೆ ಸಾಧ್ಯವಿಲ್ಲ. ಆದರೆ ಇಲ್ಲಿ ಮಾಡಬಹುದೆ? ಇಲ್ಲಿ ಚರ್ಚೆ ಮಾಡುವುದಕ್ಕೆ ಸಾಧ್ಯತೆ ಇದೆ ಎಂದರೆ ಅಲ್ಲಿ ಏಕೆ ಮಾಡಲಿಲ್ಲ? ಇದೇ ನಮ್ಮ ಮುಖ್ಯವಾದ ಪ್ರಶ್ನೆ. ಅಲ್ಲಿ ಚರ್ಚೆಯನ್ನು ಮುಂದೆ ಹಾಕುವುದಕ್ಕೆ ಬೇರೆ ಕಾರಣಗಳು ಇದ್ದು, ಅಂಥ ಕಾರಣಗಳು ಇಲ್ಲಿ ಇಲ್ಲದಿದ್ದರೆ, ಇಲ್ಲಿ ಚರ್ಚೆಯನ್ನು ಪ್ರಾರಂಭಿಸುವುದಕ್ಕೆ ಅಭ್ಯಂತರವಿಲ್ಲ. ಆದ್ದರಿಂದ ಈ ಬಗ್ಗೆ, ಈಗ ತಾನೇ ಕೆಳಮನೆಯಿಂದ ಬಂದಿರತಕ್ಕ ಮಾನ್ಯ ಹಣಕಾಸಿನ ಮಂತ್ರಿಗಳು ವಿವರ ನೀಡಿದರೆ ಒಳ್ಳೆಯದು.

**ಶ್ರೀ ಎಸ್.ಎಂ. ಯಾಹ್ಯಾ :** ಕೆಳಮನೆಯಲ್ಲಿ ಇದೇ ವಿಷಯವನ್ನು ಎತ್ತಿದರು. ವಾದ ವಿವಾದ ಬಹಳಷ್ಟು ನಡೆಯಿತು. ಆ ಮನೆಯಲ್ಲಿ ಏಕೆ ಚರ್ಚೆಯನ್ನು ಪ್ರಾರಂಭ ಮಾಡಲಿಲ್ಲವೆಂದರೆ ಅಲ್ಲಿನ ಸದಸ್ಯರುಗಳು ಯೋಚನೆ ಮಾಡುವಂತಹ ಸ್ಥಿತಿಯಲ್ಲಿ ಇರಲಿಲ್ಲ. ಅವರುಗಳು ಇವತ್ತೇ ಚರ್ಚೆಯನ್ನು ನಡೆಸಬೇಕೆಂಬ ಅಭಿಪ್ರಾಯವನ್ನು ಕೂಡ ಹೊಂದಿರಲಿಲ್ಲ. ನಾಳೆ ಮಾಡೋಣವೆಂದರು. ಅಲ್ಲಿನ ಸದಸ್ಯರುಗಳನ್ನವಲಂಬಿಸಿ ಚರ್ಚೆಯನ್ನು ಮುಂದಕ್ಕೆ ಹಾಕಲಾಯಿತು.

**ಶ್ರೀ ಎ.ಕೆ. ಸುಬ್ಬಯ್ಯ :** ಆ ಸದಸ್ಯರುಗಳು ಮಾಡಲಿಕ್ಕೆ ತಯಾರಿಲ್ಲ, ನಾವು ಮಾಡಲಿಕ್ಕೆ ತಯಾರಿದ್ದೇವೆ ಎಂದರೆ ಏನು ಅರ್ಥ? ಅವರಿಗಿಂತ ವಿಶೇಷವಾದ ಯೋಗ್ಯತೆ ನಮಗೆ ಇದೆಯೇ? ಅಥವಾ ಆ ಸಭೆ ಅಷ್ಟೊಂದು ಪ್ರಾಮುಖ್ಯವಾದುದಲ್ಲವೆ? ಇಲ್ಲಿ ಮಾಡಬಹುದು, ಅಲ್ಲಿ ಮಾಡಬಾರದು ಎಂಬ ಪ್ರಶ್ನೆ ಬರುತ್ತದೆ. ಒಂದು

ವೇಳೆ ಇಲ್ಲಿ ಇವತ್ತು ಚರ್ಚೆಯನ್ನು ಪ್ರಾರಂಭಿಸಿದರೆ, ನಾಳೆ ಪರಿಸ್ಥಿತಿ ಯಾವ ಮಟ್ಟಕ್ಕೆ ಹೋಗಬಹುದೆಂಬುದನ್ನು ಹೇಳಲಿಕ್ಕೆ ಸಾಧ್ಯವಿಲ್ಲ. ಕೆಳಮನೆಯವರು ನೀವು ಏಕೆ ಚರ್ಚೆಯನ್ನು ಮಾಡಿದಿರಿ ಎಂದು ಕೇಳಬಹುದು. ಒಟ್ಟಿನಲ್ಲಿ ನಾನು ಈ ವಿಚಾರವನ್ನು ಅಧ್ಯಕ್ಷರಿಗೆ ಮತ್ತು ಸರ್ಕಾರಕ್ಕೆ ಬಿಡುತ್ತೇನೆ. ನನ್ನದೇನು ಅಭ್ಯಂತರವಿಲ್ಲ.

**ಸಭಾಪತಿಯವರು :** ಆ ಭಯವಂತು ಇದೆ.

**Sri A.K. Subbaiah :** We are in an awkward position.

**ಶ್ರೀ ಎಸ್.ಐ. ಶೆಟ್ಟರ್ :** ನೋಟೀಸ್ ಆಫೀಸ್‌ನಲ್ಲಿ ಎಲ್ಲ ಪುಸ್ತಕಗಳನ್ನು ಸೇರಿಸಿ ಒಂದು ದೊಡ್ಡ ಬಂಡಲ್ ಮಾಡಿ ಕೊಡುತ್ತಾರೆ. ಅವುಗಳನ್ನೆಲ್ಲ ನಾವು ರೂಮಿಗೆ ಹೊತ್ತುಕೊಂಡು ಹೋಗುವುದೆಂದರೆ ಹೇಗೆ? ಇದು ಯಾವ ನ್ಯಾಯ? ಆದ್ದರಿಂದ, ಎಲ್ಲ ಪುಸ್ತಕಗಳನ್ನು ನಮ್ಮ ನಮ್ಮ ಕೊಠಡಿಗಳಿಗೆ ಕಳುಹಿಸಿಕೊಡತಕ್ಕ ವ್ಯವಸ್ಥೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

# ಲೋಕನಾಯಕ ಶ್ರೀ ಜಯಪ್ರಕಾಶ್ ನಾರಾಯಣ್ ಬೇಗ ಚೇತರಿಸಿಕೊಳ್ಳಲಿ

**22ನೇ ಮಾರ್ಚ್ 1979**

**ಶ್ರೀ ಎ.ಕೆ. ಸುಬ್ಬಯ್ಯ:** ಲೋಕ ನಾಯಕ ಶ್ರೀ ಜಯಪ್ರಕಾಶ್ ನಾರಾಯಣ್ ರವರ ಬಗ್ಗೆ ದುಃಖದ ಸುದ್ದಿ ಬಂತು. ಅದರ ಜೊತೆಯಲ್ಲಿಯೇ ಸ್ವಲ್ಪ ಸಮಾಧಾನಕರವಾದ ಸುದ್ದಿ ಕೂಡ ಬಂತು. ನಾವು ಅವರು ಬಹಳ ಬೇಗನೇ ಗುಣಮುಖರಾದರು ಎನ್ನುವ ವರ್ತಮಾನವನ್ನು ಕೇಳುವುದಕ್ಕೆ ಬಹಳ ಕಾತುರರಾಗಿ, ಹಾತೊರೆಯುತ್ತಿದ್ದೇವೆ ಮತ್ತು ಅಷ್ಟೇ ಶೀಘ್ರವಾಗಿ ಸುಧಾರಿಸುತ್ತಾರೆ ಎಂಬುದನ್ನು ತಿಳಿಯಲು ನಾವುಗಳೆಲ್ಲರೂ ಕುತೂಹಲಿಗಳಾಗಿದ್ದೇವೆ. ಅವರು ನಮ್ಮ ಇಂದಿನ ಮಹಾನ್ ನಾಯಕರು. ಆದುದರಿಂದ ಸರ್ವೇ ಸಾಮಾನ್ಯವಾಗಿ ಎಲ್ಲರ ಮನಸ್ಸಿನಲ್ಲಿಯೂ ಅವರು ಬೇಗನೆ ಗುಣಮುಖರಾಗಲೀ ಎಂದು ಶುಭ ಹಾರೈಕೆ ಇರುವುದರಿಂದ ಇಂಥಾ ಪರಿಸ್ಥಿತಿಯಲ್ಲಿ ಅವರು ಶೀಘ್ರದಲ್ಲಿ ಗುಣಮುಖರಾಗಿ ಮತ್ತೆ ದೇಶಕ್ಕೆ ಮಾರ್ಗದರ್ಶನ ನೀಡುವಂತೆ ಆಗಲೀ ಎಂದು ಹಾರೈಸಿ ನಾವು ಮತ್ತೆ ಪುನಃ ನಾಳೆ ಸಭೆ ಸೇರುವುದು ಒಳ್ಳೆಯದೆಂದು ಕಾಣುತ್ತದೆ. ನಿನ್ನೆಯಿಂದ ಲೋಕನಾಯಕ ಶ್ರೀ ಜಯಪ್ರಕಾಶ್‌ನಾರಾಯಣರ ಆರೋಗ್ಯ ಬಹಳ ಹದಗೆಟ್ಟಿರುವ ವಿಚಾರ ಎಲ್ಲಾ ಜನಗಳಿಗೂ ಒಂದು ಕಳವಳವನ್ನು ಉಂಟು ಮಾಡಿದೆ. ಇವತ್ತಿನ ಪರಿಸ್ಥಿತಿಯಲ್ಲಿ ಶ್ರೀ ಜಯಪ್ರಕಾಶ್ ನಾರಾಯಣರಂತಹ ಮಹಾವ್ಯಕ್ತಿ ನಮ್ಮ ದೇಶದಲ್ಲಿ ಇಲ್ಲವೇ ಇಲ್ಲವೆಂದು ಹೇಳಬಹುದು. ಅವರ ಆರೋಗ್ಯ ಶೀಘ್ರಗತಿಯಲ್ಲಿ ಸುಧಾರಿಸಲಿ ಎಂದು ಹೇಳಿ ನಮ್ಮ ದೇಶದ ಜನಕೋಟಿ ಹಾರೈಸುತ್ತಿದ್ದಾರೆ. ನಿನ್ನೆ ದಿವಸ ಲೋಕಸಭೆಯಲ್ಲಿ ಎಲ್ಲ ಸದಸ್ಯರೂ ಕೂಡ ಒಟ್ಟಾಗಿ ಮಾನ್ಯ ಜಯಪ್ರಕಾಶ್ ನಾರಾಯಣರ ಆರೋಗ್ಯ ಅತಿ ಶೀಘ್ರವಾಗಿ ಸುಧಾರಿಸಲಿ ಎಂದು ಶುಭ ಕೋರಿದ್ದಾರೆ. ಬೇರೆ ಬೇರೆ ರಾಜ್ಯಗಳ ವಿಧಾನಸಭೆಗಳಲ್ಲಿ ಈ ಒಂದು ಆಶಯವನ್ನು ವ್ಯಕ್ತ ಮಾಡಿದ್ದಾರೆ. ನಾವೂ ಕೂಡ ಈ ಸಂದರ್ಭದಲ್ಲಿ ಶ್ರೀ ಜಯಪ್ರಕಾಶ್ ನಾರಾಯಣರ ವ್ಯಕ್ತಿತ್ವದ ಮಹತ್ವವನ್ನು ಅರಿತುಕೊಂಡು ಅವರ ಸೇವೆ ನಮ್ಮ ದೇಶಕ್ಕೆ ಅಗತ್ಯವಾಗಿರುವಂಥ ಕಾರಣದಿಂದ ಅವರು ಶೀಘ್ರಗತಿಯಿಂದ ಗುಣಮುಖರಾಗಲಿ ಎಂದು ಈ ಸಭೆ ಒಕ್ಕೊರಲಿನಿಂದ ಅವರಿಗೆ ಶುಭ ಕೋರುವುದಕ್ಕೆ ತಾವು ಅನುಮತಿ ಕೊಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

## ಷೇಮ್ – ಷೇಮ್

**27ನೇ ಸೆಪ್ಟೆಂಬರ್ 1979**

**ಶ್ರೀ ಎ.ಕೆ. ಸುಬ್ಬಯ್ಯ:** ಮಾನ್ಯ ಉಪ ಸಭಾಪತಿಗಳೇ, ತಾವು ತಮ್ಮ ಪೀಠವನ್ನಲಂಕರಿಸಲು ಬರುವಾಗ ಇಲ್ಲಿ ಯಾರಾದರೂ ಸದಸ್ಯರು ಷೇಮ್ ಷೇಮ್ ಎಂದು ಕೂಗುವುದಾದರೆ, ಇದೇನು ಮೈದಾನವೋ, ವಿಧಾನ ಪರಿಷತ್ತೋ ಎಂಬುದು ಗೊತ್ತಾಗುತ್ತಿಲ್ಲ. ಈ ರೀತಿ ಕಾರ್ಯಕಲಾಪವನ್ನು ನಡೆಸುವುದಾದರೆ ಇದು ಅವಮಾನವಲ್ಲವೇ? ತಾವು ಪೀಠಕ್ಕೆ ಬಂದು ಅಲಂಕರಿಸುವ ಸಂದರ್ಭದಲ್ಲಿ ಷೇಮ್ ಷೇಮ್ ಎಂದು ಕೂಗುವುದು ಸರಿಯೇ? ನಾವು ಕಾರ್ಯಕಲಾಪವನ್ನು ರಾಜ್ಯಾಂಗಕ್ಕೆ ಅನುಗುಣವಾಗಿ ನಡೆಸಿಕೊಂಡು ಹೋಗಬೇಕೆಂಬ ನಿಯಮಕ್ಕೆ ಎಲ್ಲರೂ ಬದ್ಧರಾಗಿದ್ದೇವೆ. ಜವಾಬ್ದಾರಿಯುತ ಸದಸ್ಯರಾಗಿ ಕೆಲಸ ಮಾಡುವುದಕ್ಕೆ ನಾವು ಇಲ್ಲಿ ಬಂದಿದ್ದೇವೆ. ನಾವು ಈಗ ಉಪಸಭಾಪತಿಯವರನ್ನು ಬರಬೇಕೆಂದು ಕೇಳಿಕೊಂಡು ಕರೆಸಿಕೊಂಡಿದ್ದೇವೆ. ಇಂಥ ಒಂದು ಸಂದರ್ಭದಲ್ಲಿ, ತಾವು (ಉಪ ಸಭಾಪತಿಯವರು) ಬರುವಂಥ ಸಂದರ್ಭದಲ್ಲಿ ಸದಸ್ಯರು ಷೇಮ್ ಷೇಮ್ ಎಂದು ಹೇಳುವುದಾದರೆ ಈ ಮನೆಗೆ ಸಭಾಪತಿಯವರು ಏತಕ್ಕೆ ಬರಬೇಕು, ನಾವು ಏತಕ್ಕೆ ಬರಬೇಕು? ಅವರು ಷೇಮ್ ಷೇಮ್ ಎಂದು ಏತಕ್ಕೆ ಕೂಗಿದರು? ಸರ್ಕಾರ ನಡೆಸುವಂಥ ಪಕ್ಷದ ಕಡೆಯಿಂದ ಆ ಮಾತು ಬಂತು. ಹಾಗಾದರೆ ಸದನದ ಕಾರ್ಯಕಲಾಪ ನಡೆಸುವುದು ಸರ್ಕಾರಕ್ಕೆ ಬೇಡವೋ? ಇದನ್ನು ಮೊದಲು ಇತ್ಯರ್ಥ ಮಾಡಬೇಕು. ಬೇಡ ಎಂದು ಹೇಳಿದರೆ ಯಾರಿಗೂ ಬೇಡ, ಮನೆಗೆ ಹೋಗೋಣ. ಉದ್ದೇಶಪೂರ್ವಕವಾಗಿಯೇ ಈ ಪೀಠಕ್ಕೆ ಅಪಮಾನ ಮಾಡುವಂಥ ಪಿತೂರಿ ಇದೆ ಎಂದು ಭಾವಿಸುವುದಕ್ಕೆ ಇದರಿಂದ ಅವಕಾಶವಾಗುವುದಿಲ್ಲವೇ? ಆದ್ದರಿಂದ ಈ ಸದನವನ್ನು ಗೌರವಾನ್ವಿತವಾಗಿ ನಡೆಸಿಕೊಂಡು ಹೋಗಬೇಕೋ ಬಿಡಬೇಕೋ ಎಂಬುದನ್ನು ಮೊದಲು ಇತ್ಯರ್ಥ ಮಾಡಿ. ಈ ರೀತಿ ಸಭೆ ನಡೆಯುವುದಾದರೆ ಏನೂ ಪ್ರಯೋಜನವಿಲ್ಲ. ಆಡಳಿತ ಪಕ್ಷಕ್ಕೆ ಸೇರಿದಂಥ ಸದಸ್ಯರು ಮನಸ್ಸಿಗೆ ಬಂದ ಹಾಗೆ ಮಾತನಾಡದ ಹಾಗೆ ತಡೆಗಟ್ಟುವುದಕ್ಕೆ ಆ ಕಡೆಯಲ್ಲಿ ನಾಯಕರು ಅಥವಾ ಸಚೇತಕರು ಇದ್ದಾರೋ ಇಲ್ಲವೋ ಎಂದು ತಿಳಿಯುವುದಕ್ಕೆ ನಾನು ಬಯಸುತ್ತಿದ್ದೇನೆ.

# ಶಾಸಕರಿಗೆ ಪೆನ್ಶನ್

## 21ನೇ ಫೆಬ್ರವರಿ 1984

**ಶ್ರೀ ಎ.ಕೆ. ಸುಬ್ಬಯ್ಯ:** ಶಾಸಕರಿಗೆಲ್ಲ ನಿವೃತ್ತಿ ವೇತನ ಕೊಡುವಾಗ ಬಿಟ್ಟು ಹೋದ ಕೆಲವರನ್ನು ಇದರಲ್ಲಿ ಸೇರಿಸುವುದು ಆಗಿದೆ. ಏಕೆಂದರೆ ಕೆಲವರಿಗೆ ಕೊಟ್ಟ ಮೇಲೆ ಕೆಲವರಿಗೆ ಏತಕ್ಕೆ ಬಿಡಬೇಕು ಎಂದು ಈ ಮಾತನ್ನು ಒಪ್ಪಿಕೊಳ್ಳಬಹುದು. ಮಧ್ಯಂತರ ಚುನಾವಣೆಯಲ್ಲಿ ಬಂದವರಿಗೆ ಎಲ್ಲರಿಗೂ ನಿವೃತ್ತಿ ವೇತನ ಕೊಟ್ಟ ಮೇಲೆ ಚುನಾವಣೆಯಲ್ಲಿ ಸ್ಪರ್ಧಿಸಿ ಸೋತವರಿಗೂ ಕೂಡ ನಿವೃತ್ತಿ ವೇತನ ಕೊಡತಕ್ಕ ವ್ಯವಸ್ಥೆ ಮಾಡಬೇಕಾಗಿತ್ತು. ಆದರೆ ನಿವೃತ್ತಿ ವೇತನವನ್ನು ಶಾಸಕರಿಗೆ ಕೊಡತಕ್ಕದ್ದು ನ್ಯಾಯಸಮ್ಮತವೇ ಎಂಬ ಯಕ್ಷ ಪ್ರಶ್ನೆ ನಮ್ಮ ದೇಶದಲ್ಲಿದೆ. ಆಂಧ್ರ ಸರ್ಕಾರ ಬದಲಾದ ಮೇಲೆ ಶಾಸಕರಿಗೆ ಕೊಡತಕ್ಕ ನಿವೃತ್ತಿ ವೇತನವನ್ನು ರದ್ದು ಮಾಡಿತ್ತು. ಬೇರೆಯವರು ತೆಗೆದುಕೊಳ್ಳುವಾಗ ಇವರಿಗೇಕೆ ಬಿಡಬೇಕು ಅಂದಾಗ ಆ ಪ್ರಶ್ನೆ ಬೇರೆ. ಒಟ್ಟಾರೆ ಜನತಾ ಸರ್ಕಾರ ಬಂದ ಮೇಲೆ ಒಂದು ದಿಟ್ಟ ನಿಲುವು ತೆಗೆದುಕೊಂಡು ಶಾಸಕರಿಗೆ ಕೊಡತಕ್ಕ ನಿವೃತ್ತಿ ವೇತನವನ್ನು ಪೂರ್ತಿಯಾಗಿ ರದ್ದು ಮಾಡಿ ಯಾರು ನಿಜವಾಗಿ ಶಾಸಕರಾಗಿ ಬಂದು ಎಲ್ಲವನ್ನು ಕಳೆದುಕೊಂಡಿದ್ದಾರೆ. ಯಾರು ಸಮಾಜಕ್ಕಾಗಿ ಎಲ್ಲವನ್ನು ತ್ಯಾಗ ಮಾಡಿದ್ದಾರೆ ಅಂಥವರನ್ನು ಗುರುತಿಸಲು ಒಂದು ಅಳತೆಗೋಲನ್ನು ಇಟ್ಟುಕೊಂಡು ಗುರುತಿಸಿ ನಿವೃತ್ತಿ ವೇತನವನ್ನು ಕೊಡತಕ್ಕ ವ್ಯವಸ್ಥೆ ಮಾಡಬೇಕೆಂದು ನಾನು ಹೇಳುತ್ತೇನೆ. ಇತ್ತೀಚಿನ ದಿನಗಳಲ್ಲಿ ನಾವು ನೋಡುತ್ತಿರುವ ಹಾಗೆ ಶಾಸಕರಾಗಿ ಬಂದವರು ನಿವೃತ್ತಿಯಾಗುವಾಗ ಯಾರ್‍ಯಾರು ಎಷ್ಟೆಷ್ಟು ಕಳೆದುಕೊಳ್ಳುತ್ತಾರೆ, ಯಾರ್‍ಯಾರು ಎಷ್ಟೆಷ್ಟು ಗಳಿಸುತ್ತಾರೆಂದು ಹೇಳತಕ್ಕದ್ದು ಪರಿಶೋಧನೆ ಮಾಡತಕ್ಕ ಅಂಶ. ಕೆಲವರು ಕಳೆದು ಕೊಳ್ಳುವವರು ಇದ್ದಾರೆ.  ಇಲ್ಲವೆಂದು ಅಲ್ಲ. ಆದರೆ ಕಾಲ ಬರಬರುತ್ತಾ ಶಾಸಕರಾಗಿ ಬಂದವರು ಕಳೆದುಕೊಂಡು ಪಾಪರ್ ಆಗತಕ್ಕವರ ಸಂಖ್ಯೆ ಕಡಿಮೆಯಾಗುತ್ತಿದೆ. ಅವರು ಬಂದ ತಕ್ಷಣ ಒಂದು ಅವಧಿಯಲ್ಲಿ ಮೂರು ತಲೆ ಮಾರಿಗೆ ಆಗುವಷ್ಟು ಹಣ ಆಸ್ತಿಯನ್ನು ಗಳಿಸಿಕೊಂಡು ಹೋಗುವವರು ಇದ್ದಾರೆ. ಅಂಥವರಿಗೂ ಇವೊತ್ತು ನೀವು ನಿವೃತ್ತಿ ವೇತನವನ್ನು ಕೊಡುತ್ತಿದ್ದೀರಿ. ಇದು ನಿಜವಾಗಿ, ಪೆನ್‌ಷನ್ ಎಂದು ಹೇಳುವ ಶಬ್ದಕ್ಕೆ ಕಳಂಕ ಬರುತ್ತದೆ. ನಾವೆಲ್ಲಾ ಸಾರ್ವಜನಿಕರ ಸೇವೆ ಮಾಡುತ್ತೇವೆಂದು ಪ್ರತಿಜ್ಞೆ ಸ್ವೀಕಾರ ಮಾಡಿದ್ದೇವೆ. ಅದಕ್ಕೆ ತಕ್ಕಂತೆ ನಾವು ಕೆಲಸ ಮಾಡಬೇಕು. ನಾವು ಇವೊತ್ತಿನ ದಿವಸ ಸಂಬಳ ತೆಗೆದುಕೊಳ್ಳುತ್ತಿದ್ದೇವೆ. ಹಿಂದೆ ಬ್ರಿಟೀಷರ

ಕಾಲದಲ್ಲಿ ಎಂ.ಆರ್.ಎ. ಗಳಿಗೆ ಸಂಬಳ ಇರಲಿಲ್ಲ. ನಾವು ಚುನಾವಣೆಯಲ್ಲಿ ಗೆದ್ದು ಬರುವಾಗ ಏನು ಕಳೆದುಕೊಳ್ಳುತ್ತೇವೆ ಅದನ್ನು ತೆಗೆದುಕೊಳ್ಳುವುದಕ್ಕೆ ತಯಾರಾಗಿ ಬಂದರೆ ತಪ್ಪಾಗುತ್ತದೆ. ನಾವು ನೀವು ಚುನಾವಣೆಗೆ ನಿಂತಾಗ ತ್ಯಾಗ ಮಾಡುತ್ತೇವೆ. ಸೇವೆ ಮಾಡುತ್ತೇವೆಂದು ಹೇಳುವುದು ಮತ್ತೆ ಇಲ್ಲಿ ಬಂದು ಚುನಾವಣೆಯಲ್ಲಿ ಖರ್ಚು ಮಾಡಿದ್ದನ್ನು ಸಂಪಾದಿಸುವುದಕ್ಕೆ ಪ್ರಯತ್ನ ಮಾಡುವುದು ಸರಿಯಲ್ಲ. ಬೈ ಎಲೆಕ್ಷನ್‌ನಲ್ಲಿ ಗೆದ್ದು ಬಂದವರಿಗೆ ಕೂಡ ಪೆನ್‌ಷನ್ ಕೊಡುವುದು ಎಂದರೆ ಏನು ಅರ್ಥ? ಕನಿಷ್ಠ 10–15 ವರ್ಷಗಳ ಕಾಲ ಸೇವೆ ಮಾಡಿದ ನಂತರ ಅವರಿಗೆ ಬೇರೆ ಯಾವುದೇ ಉತ್ಪತ್ತಿ ಇಲ್ಲದಿದ್ದರೆ ಅಂಥವರಿಗೆ ಪೆನ್‌ಷನ್ ಕೊಟ್ಟರೆ ಅದನ್ನು ನಾನು ಒಪ್ಪುತ್ತೇನೆ. ಆದರೆ ಆದಾಯ ತೆರಿಗೆ ಕೊಡುವವರಿಗೂ ಸಹ ಪೆನ್‌ಷನ್ ಕೊಡುವುದನ್ನು ನಾನು ಒಪ್ಪುವುದಿಲ್ಲ. ಇವೊತ್ತು ತಂದಿರುವ ತಿದ್ದುಪಡಿ ಇರಲಿ, ಈ ಸರ್ಕಾರ ಇರುವುದರೊಳಗೆ ಶಾಸಕರಿಗೆ ಕೂಡ ತಕ್ಕ ಪೆನ್‌ಷನ್ ಏನಿದೆ ಅದನ್ನು ರದ್ದು ಮಾಡುವುದು ಒಳ್ಳೆಯದು. ಇಲ್ಲದಿದ್ದರೆ, ಶಾಸಕರಾಗಿ 15 ವರ್ಷಗಳ ಕಾಲ ನಿರಂತರವಾಗಿ ಸೇವೆ ಮಾಡಿ ಸಂಸಾರವನ್ನು ಹಾಳು ಮಾಡಿಕೊಂಡವರಿಗೆ ಕೊಡತಕ್ಕ ವ್ಯವಸ್ಥೆ ಮಾಡಬೇಕು. ಅದನ್ನು ಬಿಟ್ಟು ಈ ರೀತಿ ಪೆನ್‌ಷನ್ ತೆಗೆದುಕೊಂಡರೆ ಜನರಿಗೆ ಹೊಟ್ಟೆಯುರಿ ಬರುತ್ತದೆ. ಶಾಸಕರಿಗೆ ಇರತಕ್ಕ ಗೌರವವೂ ಹೋಗುತ್ತದೆ. ನಾವು ಶಾಸಕರಾಗಿ ಜನ ಸೇವೆ ಮಾಡುವುದಕ್ಕೆ ಬಂದಿದ್ದೇವೆ. ಹಿಂದೆ ದೇವರಾಜ ಅರಸು ಅವರ ಸರ್ಕಾರ ಇದ್ದಾಗ ನಾನು ಜನತಾ ಪಕ್ಷದ ಶಾಸಕನಾಗಿ ವಿರೋಧ ಪಕ್ಷದಲ್ಲಿದ್ದೆ. ಆಗ ಅವರು ಶಾಸಕರಿಗೆ ನಿವೃತ್ತಿ ವೇತನಕ್ಕೆ ಸಂಬಂಧಪಟ್ಟ ಮಸೂದೆಯನ್ನು ತರುತ್ತೇವೆ. ಅದನ್ನು ಎಲ್ಲರೂ ಸ್ವಾಗತ ಮಾಡುತ್ತೇವೆಂದು ಹೇಳಿದರು. ಆಗ, ನೀವು ತಂದರೆ ನಾವು ಅದನ್ನು ವಿರೋಧ ಮಾಡುತ್ತೇವೆಂದು ಹೇಳಿ ನಮ್ಮ ವಿರೋಧವನ್ನು ಸೂಚಿಸಿದೆವು. ಆಗ ಅವರು ತರಲಿಲ್ಲ. ನಂತರ ನಾವು ಬೇರೆ ಪಕ್ಷಕ್ಕೆ ಬಂದೆವು. ಬೈ ಎಲೆಕ್ಷನ್‌ನಲ್ಲಿ ಗೆದ್ದವರಿಗೆ, ಸೋತವರಿಗೆ, ಠೇವಣಿ ಕಳೆದುಕೊಂಡವರಿಗೆ ಎಲ್ಲರಿಗೂ ನಿವೃತ್ತಿ ವೇತನ ಕೊಡತಕ್ಕದ್ದು ಎಂದರೆ ನಾವು ಸಮಾಜದ ಹಣವನ್ನು ಲೂಟಿ ಮಾಡತಕ್ಕ ನೀತಿಯನ್ನು ಅನುಸರಿಸಿದಂತೆಯೇ ಸರಿ. ನಮಗೆ ಇರತಕ್ಕ ಜವಾಬ್ದಾರಿ ಏನಿದೆ ಅದನ್ನು ದುರ್ವ್ಯವಹಾರ ರೂಪದಲ್ಲಿ ನಮ್ಮ ಸ್ವಂತ ಉಪಯೋಗಕ್ಕೋಸ್ಕರ ಮಾಡುತ್ತಿದ್ದೇವೆಂದು ಹೇಳಬಹುದು. ಇದು ಬಹಳ ದೋಷಪೂರ್ಣವಾದ ನೀತಿ. ಇದನ್ನು ಜನತಾ ಸರ್ಕಾರ ಅಮೂಲಾಗ್ರವಾಗಿ ಪರಿಶೀಲನೆ ಮಾಡಬೇಕೆಂದು ಹೇಳುತ್ತಾ, ಈಗಿರತಕ್ಕ ತಿದ್ದುಪಡಿ ಏನಿದೆ ಇದು ಸದ್ಯಕ್ಕೆ ಇರಲಿ ಎಂದು ಹೇಳಿ ಸಭಾಪತಿಯವರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಮಾನ್ಯ ಸದಸ್ಯರ ಹಕ್ಕುಚ್ಯುತಿ

**22ನೇ ಜನವರಿ 1990**

**ಶ್ರೀ ಎ.ಕೆ. ಸುಬ್ಬಯ್ಯ:** ನಾನು ಪ್ರಸ್ತಾಪ ಮಾಡಬೇಕೆಂದಿರುವ ಸಣ್ಣ ವಿಷಯವೊಂದಿದೆ. ನಾನು ಬ್ರೀಚ್ ಆಫ್ ಪ್ರಿವಿಲೇಜ್ ನೋಟೀಸ್‌ನ್ನು ಕೊಟ್ಟಿದ್ದೇನೆ. ಆ ವಿಚಾರವನ್ನು ಈಗ ಹೇಳಬಯಸುತ್ತೇನೆ. ನಾನು ಇವೊತ್ತು ಬೆಳಿಗ್ಗೆ ಹಕ್ಕುಚ್ಯುತಿ ನಿರ್ಣಯವನ್ನು ಮಂಡನೆಗಾಗಿ ಕಳುಹಿಸಿಕೊಟ್ಟಿದ್ದೇನೆ. ಈ ಹಕ್ಕುಚ್ಯುತಿ ನಿರ್ಣಯವು ಕೊಡಗು ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ಮತ್ತು ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯದರ್ಶಿಯವರ ವಿರುದ್ಧ ಕಳುಹಿಸಿಕೊಟ್ಟುದುದಾಗಿದೆ. ಇದರೊಳಗೆ ಯಾವ ರಾಜಕೀಯವೂ ಇಲ್ಲ. ಇದು ಸದನದ ಹಕ್ಕಿಗೆ ಸಂಬಂಧಪಟ್ಟದ್ದು. ಕೊಡಗಿನ ಜಿಲ್ಲಾ ಪರಿಷತ್ತು ಕಾಂಗ್ರೆಸ್ ಪಕ್ಷದ ಕೈಯಲ್ಲಿ ಇದೆ. ಆಡಳಿತ ಯಾವ ಪಕ್ಷದ ಕೈಯಲ್ಲಿದ್ದರೂ ಸದನದ ಸದಸ್ಯರ ಹಕ್ಕು ಬಹಳಷ್ಟು ಪವಿತ್ರವಾದುದು. ಸದನದ ಹಕ್ಕು ಪಕ್ಷಾತೀತವಾದುದು. ಆ ಹಕ್ಕು ಪಕ್ಷಕ್ಕಿಂತ ಮೇಲಿರತಕ್ಕಂಥಾದ್ದು. ಇದು ನನ್ನ ಪಕ್ಷಕ್ಕೆ ಸೇರಿರುವಂಥ ವಿಚಾರವಾದರೂ ಕೂಡ ಸದನದ ಸದಸ್ಯರಿಗೆ ಇರುವ ಹಕ್ಕುಗಳ ಒಂದು ಪಾವಿತ್ರ್ಯತೆ ಮತ್ತು ಅಪೂರ್ವ ಹಿನ್ನೆಲೆಯಲ್ಲಿ ಈ ವಿಷಯವನ್ನು ಪ್ರಸ್ತಾಪ ಮಾಡುತ್ತೇನೆ. ನಾನು ಕರ್ನಾಟಕ ರಾಜ್ಯದ ಕೊಡಗು ಜಿಲ್ಲೆಯ ವಿರಾಜಪೇಟೆಯವನು. ನಾನು ಕೊಡಗು ಜಿಲ್ಲೆಯವನು ಅಲ್ಲ ಎಂದು ಯಾರೂ ಹೇಳುವುದಿಲ್ಲ ಮತ್ತು ಅದನ್ನು ಯಾರೂ ಅಲ್ಲಗಳೆಯುವಂತಿಲ್ಲ. ನಾನು ಕಳೆದ ಚುನಾವಣೆಯಲ್ಲಿ ವಿರಾಜಪೇಟೆಯಲ್ಲಿ ನನ್ನ ಪವಿತ್ರವಾದ ಮತ ಚಲಾವಣೆಯನ್ನು ಮಾಡಿದ್ದೇನೆ. ನಾನು ಮಾನ್ಯ ಶ್ರೀ ಜನಾರ್ಧನಪೂಜಾರಿಯವರಿಗೆ ಓಟು ಮಾಡಿದ್ದೇನೆ...

**ಶ್ರೀ ಎಂ.ಸಿ. ನಾಣಯ್ಯ :** ಮಾನ್ಯ ಸಭಾಪತಿಯವರೆ ....

**ಶ್ರೀ ಎ. ರಾಮಣ್ಣ :** ತಮ್ಮ ಮತದಾನದಲ್ಲಿ ಗೌಪ್ಯತೆ ಇಲ್ಲವೆ?

**ಶ್ರೀ ಎ.ಕೆ. ಸುಬ್ಬಯ್ಯ :** ನಾನು ಮತದಾನ ಮಾಡಿದುದನ್ನು ಹೇಳಿದ್ದೇನೆ. ಇಂಥವರಿಗೆ ಮತವನ್ನು ಹಾಕಿ ಎಂದು ಬಲಾತ್ಕಾರ ಮಾಡುವ ಹಾಗಿಲ್ಲ ಮತ್ತು ಆ ಹಕ್ಕು ಕೂಡ ಯಾರಿಗೂ ಇಲ್ಲ. ಆದರೆ ಚುನಾವಣೆಯಾದ ಮೇಲೆ ಇಂಥವರಿಗೆ ಓಟು ಕೊಟ್ಟಿದ್ದೇನೆ ಎಂದು ಹೇಳುವುದು ತಪ್ಪಾಗುವುದಿಲ್ಲ....

ಒಂದು ಜಿಲ್ಲಾ ಪರಿಷತ್ತಿನ ವ್ಯಾಪ್ತಿಯೊಳಗೆ ಯಾರು ಈ ಸದನದ ಸದಸ್ಯರಾಗಿರುತ್ತಾರೋ ಅವರು ಅವರ ಜಿಲ್ಲೆಯ ಜಿಲ್ಲಾಪರಿಷತ್ತಿನ ಕಾರ್ಯಕಲಾಪಗಳಲ್ಲಿ ಭಾಗವಹಿಸುವುದಕ್ಕೆ ಹಕ್ಕುಳ್ಳವರಾಗಿರುತ್ತಾರೆ. ಹಾಗೂ ನಾನು ಒಬ್ಬ ಸದಸ್ಯನಾಗಿ ಜಿಲ್ಲಾ ಪರಿಷತ್ತಿನ ಕಾಯಿದೆ 139ರ 3ನೇ ವಿಧಿ ಪ್ರಕಾರ ನನಗೆ ಹಕ್ಕು ಇದೆ. ನನಗೆ ಲೆಜಿಸ್ಲೇಚರ್‌ನಲ್ಲಿ ಟಿ.ಎ. ಡಿ.ಎ. ಕೊಡುತ್ತಿದ್ದರೂ ವಿರಾಜಪೇಟೆ ಹೆಸರಿನ ಲೆಕ್ಕದಲ್ಲೇ. ನಾನೂ ಇದುವರೆಗೂ ಅದೇ ರೀತಿ ಸೈನ್ ಮಾಡಿ ಪಡೆಯುತ್ತಿದ್ದೇನೆ. ಇಷ್ಟೆಲ್ಲಾ ಇದ್ದರೂ ಕೊಡಗು ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ನಾನು ಅದರ ಮೀಟಿಂಗ್‌ಗಳಲ್ಲಿ ಭಾಗವಹಿಸಿದರೆ ಅಲ್ಲಿ ದಿನನಿತ್ಯ ನಡೆಯುವ ಭ್ರಷ್ಟಾಚಾರಗಳನ್ನು ಬಯಲಿಗೆಳೆಯುವೆನೆಂದು ನನ್ನ ಮೇಲೆ ವೈಯಕ್ತಿಕವಾಗಿ ದ್ವೇಷ ಸಾಧಿಸಿ ಚೀಫ್ ಸೆಕ್ರೆಟರಿಗೆ ಹೇಳಿ ಇದುವರೆಗೂ ನಡೆದ ಒಂದು ಮೀಟಿಂಗಿಗೂ ನನಗೆ ಆಹ್ವಾನ ಪತ್ರ ಕಳಿಸಿಲ್ಲ. ಮಾತ್ರವಲ್ಲ, ಅನೇಕ ಸಲ ಅನೇಕ ಸದಸ್ಯರು ಈ ಬಗ್ಗೆ ಪ್ರಸ್ತಾಪ ಮಾಡಿ ಎ.ಕೆ. ಸುಬ್ಬಯ್ಯನವರಿಗೆ ಏಕೆ ಆಹ್ವಾನ ಕಳಿಸುತ್ತಿಲ್ಲವೆಂದು ಕೇಳಿದರೆ ಅವರು ಕೊಡಗಿನವರೇ ಅಲ್ಲ. ಆದ್ದರಿಂದ ಅವರಿಗೆ ಕಳಿಸುವ ಅಗತ್ಯವಿಲ್ಲ ಎಂದು ಹೇಳಿ ತಹಸೀಲ್ದಾರ್‌ರವರ ಮೇಲೆ ರಾಜಕೀಯ ಒತ್ತಡ ತಂದು ವೋಟರ್ಸ್ ಲಿಸ್ಟ್‌ನಲ್ಲಿದ್ದ ನನ್ನ ಹೆಸರನ್ನು ತೆಗೆಸಿ ಹಾಕಿದ್ದರು. ಆಗ ನಾನು ಪ್ರತಿಭಟನೆ ಮಾಡಿ ಮತ್ತೆ ನನ್ನ ಹೆಸರು ಸೇರಿಸುವಂತೆ ಮಾಡಿದ ಮೇಲೂ ನನಗೆ ಮೀಟಿಂಗಿಗೆ ಆಹ್ವಾನ ಪತ್ರ ಕಳಿಸುತ್ತಿಲ್ಲ. ಇದು ಬಹಿರಂಗವಾಗಿದೆ. ಪತ್ರಿಕೆಗಳಲ್ಲಿ ಬಂದಿದೆ. ನ್ಯಾಯಾಲಯದ ಮುಂದೆ ಹೋಗಿದೆ. ಇಷ್ಟೆಲ್ಲಾ ಆದರೂ ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ಚೀಫ್ ಸೆಕ್ರೆಟರಿಗೆ ಆಹ್ವಾನ ಪತ್ರಿಕೆ ಕಳಿಸಲು ಸೂಚನೆ ನೀಡಿಲ್ಲ.

ಅಲ್ಲದೆ ಸಭಾಪತಿಗಳೇ, ಕಳೆದ ವರ್ಷ ಒಂದು ಕ್ಯಾಲೆಂಡರನ್ನು ಜಿಲ್ಲಾ ಪರಿಷತ್ತಿನವರು ಮಾಡಿದ್ದರು. ಅದರಲ್ಲಿ ಜಿಲ್ಲಾ ಪರಿಷತ್‌ನ ಸದಸ್ಯರು ಯಾರ‍್ಯಾರು ಎಂದು ಇತ್ತು. ನನ್ನ ಹೆಸರೂ ಪ್ರಿಂಟಾಗಿ ಅದರಲ್ಲಿ ನನ್ನ ಹೆಸರಿನ ಮೇಲೆ ಪೇಪರನ್ನು ಅಂಟಿಸಿ ಡಿಸ್ಟ್ರಿಬ್ಯೂಟ್ ಮಾಡಿದ್ದಾರೆ. ಇದಕ್ಕಿಂತ ಕಂಟೆಂಪ್ಟ್ ಯಾವುದು ಬೇಕು, ಬ್ರೀಚ್ ಆಫ್ ಪ್ರಿವಿಲೇಜ್ ಯಾವುದು ಬೇಕು? ನಾನು ಕಾಂಗ್ರೆಸ್ ಪಕ್ಷಕ್ಕೆ ಬರಬೇಕೆನ್ನುವಾಗಲೂ ಇಲ್ಲಿನ ಕೆಲವರು ಭಯಪಟ್ಟಿದ್ದುಂಟು. ಅಲ್ಲಿರುವುದು ಕಾಂಗ್ರೆಸ್ ಜಿಲ್ಲಾ ಪರಿಷತ್ತೇ. ಇಲ್ಲಿ ಜಿಲ್ಲಾ ಪರಿಷತ್ತಿನವರು ಯಾವ ಕಾರಣದ ಮೇಲೆ ನೋಟಿಸ್ ಕಳಿಸುತ್ತಿಲ್ಲವೋ ಆ ಕಾರಣದಿಂದ ನಾವು ಏನು ಗುರಿಯನ್ನು ಇಟ್ಟುಕೊಂಡು ಬಂದಿದ್ದೇವೋ ಅದನ್ನು ಬಿಡುವುದಕ್ಕೆ ಸಾಧ್ಯವಿಲ್ಲ. ಇದು ಸದನದ ಹಕ್ಕು ಮತ್ತು

ಸದನದ ಸದಸ್ಯನಾದ ನನ್ನ ಹಕ್ಕು ಕೂಡ. ಇಲ್ಲಿರುವವರೆಲ್ಲರೂ ಬೆಂಗಳೂರಿನಲ್ಲಿ ವಾಸಿಸುತ್ತಿಲ್ಲವೇ? ಆದರೂ ಅವರವರ ಜಿಲ್ಲೆಯ ಜಿಲ್ಲಾ ಪರಿಷತ್ತುಗಳಲ್ಲಿ ಭಾಗವಹಿಸುತ್ತಿಲ್ಲವೇ? ಮಾನ್ಯ ಹೆಚ್.ಟಿ. ರೆಡ್ಡಿಯವರನ್ನು ಶಿವಮೊಗ್ಗ ಜಿಲ್ಲಾ ಪರಿಷತ್‌ನವರು ಕರೆಯುವುದಿಲ್ಲವೇನು? ನಾಗೇಗೌಡರು ಮುನಿಸಿಪಾಲಿಟಿ ಎಂಬ ಕಾರಣದಿಂದ ಕರೆಯುತ್ತಿಲ್ಲ. ಇದುವರೆಗೂ ಸರ್ಕಾರ ಏಕೆ ಈ ಬಗ್ಗೆ ಕೇಳಲಿಲ್ಲ. ಏಕೆಂದರೆ ಇದು ಸರ್ಕಾರದ ಗಮನಕ್ಕೆ ಬಂದಿದೆ. ನನ್ನ ಪಾರ್ಟಿಯ ಮುಖಂಡರ ಗಮನಕ್ಕೂ ಬಂದಿದೆ. ಇಷ್ಟೆಲ್ಲ ಆದರೂ ಒಬ್ಬ ಸದಸ್ಯನ ಹಕ್ಕನ್ನು ರಕ್ಷಿಸಲು ಯಾರೂ ಮುಂದೆ ಬರಲಿಲ್ಲವೇಕೆ? ಸಂಬಂಧಪಟ್ಟ ಸಚಿವರೂ ಮುಂದೆ ಬಂದಿಲ್ಲ. ಈಗಿನ ಸರ್ಕಾರ ನಮ್ಮದು. ಆದರೂ ಕೂಡ ದುರ್ದೈವದಿಂದ ನಮ್ಮ ಮಾತಿಗೆ ಏನೂ ಬೆಲೆ ಇಲ್ಲ. ಆದ್ದರಿಂದ ಈ ಸದನದ ಸಭಾಪತಿಗಳಾದ ತಾವು ಏನಾದರೂ ಮಾಡಬೇಕು. ಈಗ ಅಂತಹ ಪರಿಸ್ಥಿತಿ ಇದೆ. ನಮ್ಮ ಸರ್ಕಾರ ಬಂದರೂ ಕೂಡ ಇದರ ಬಗ್ಗೆ ಕ್ಲಾರಿಫೈ ಮಾಡಿಲ್ಲ. ಆದ್ದರಿಂದ ಸರ್ಕಾರ ಕೂಡ ಹಕ್ಕುಚ್ಯುತಿ ಮಾಡಿದೆ. ಸರ್ಕಾರ ಇಷ್ಟೊಂದು ಹಗರಣಕ್ಕೆ ಯಾಕಾಗಿ ದಾರಿ ಮಾಡಿಕೊಡಬೇಕಾಗಿತ್ತು? ಇದನ್ನೆಲ್ಲ ನೋಡಿದರೆ ನಾನು ಕೊಡಗಿನ ವಾಸಿಯಲ್ಲವೆಂಬ ಭಾವನೆ ತಾಳಬೇಕಾಗುತ್ತದೆ. ಇಂಥಾ ಪ್ರಕರಣ ಇಡೀ ಸದನದ ಚರಿತ್ರೆಯಲ್ಲಿ ಇರಲಿಕ್ಕಿಲ್ಲ. ಆದ್ದರಿಂದ ತಾವು ಇದರ ಬಗ್ಗೆ ಕ್ರಮ ತೆಗೆದುಕೊಳ್ಳಬೇಕು.

# ಪೊಲೀಸ್ ವ್ಯವಸ್ಥೆಗೆ ಸಂಬಂಧಪಟ್ಟಂತೆ ಅಪರಾಧವನ್ನು ಕಂಡು ಹಿಡಿಯುವುದು ಪೊಲೀಸರ ಕರ್ತವ್ಯ

**3ನೇ ಏಪ್ರಿಲ್ 1969**

**ಶ್ರೀ ಎ.ಕೆ. ಸುಬ್ಬಯ್ಯ:** ಕೇಸುಗಳನ್ನು ತನಿಖೆ ಮಾಡುವ ಪೊಲೀಸ್ ಅಧಿಕಾರಿಗಳಿಗೆ ಸ್ವಲ್ಪ ಉತ್ತೇಜನ ಕೊಡಬೇಕೆಂದು ಮಂತ್ರಿಯವರು ಹೇಳಿದ್ದಾರೆ. ಏಕೆ ಉತ್ತೇಜನ ಕೊಡಬೇಕಾದಂತಹ ಪರಿಸ್ಥಿತಿ ಬಂತು, ಉತ್ತೇಜನ ಕೊಡದಿದ್ದರೆ ತಾನಾಗಿ ಸರಿಯಾಗಿ ನಡೆಯುವುದಿಲ್ಲ ಎಂದು ಏನಾದರೂ ಸರ್ಕಾರಕ್ಕೆ ಗೊತ್ತಿದೆಯೋ? ಈ ತರಹ ತೊಂದರೆ ಸರ್ಕಾರಕ್ಕೆ ಬಂದಿದೆಯೇ? ಈ ಬಿಲ್ಲಿನ ಉದ್ದೇಶವನ್ನು ನೋಡಿದ ಮೇಲೆ ನಾವು ಅರ್ಥಮಾಡಿಕೊಳ್ಳಬಹುದೇನೆಂದರೆ, ಈ ರೀತಿಯ ಗಿಫ್ಟ್ ಗೂಡ್ಸ್ ಅನ್–ಆತೊರೈಸ್ಡ್ ಆಗಿ ಅನೇಕ ಜನರು ಇಟ್ಟುಕೊಂಡು ಮೋಸ ಮಾಡುತ್ತಿದ್ದಾರೆ. ಇದನ್ನು ಕಂಡು ಹಿಡಿಯುವುದು ಬಹಳ ಕಷ್ಟವಾಗಿದೆ. ಅದಕ್ಕೋಸ್ಕರ ಈ ಇನ್‌ಸೆಂಟಿವ್ ಕೊಡಬೇಕಾಗಿದೆ. ಮತ್ತು ಸಾಮಾನ್ಯವಾಗಿ ಕಳ್ಳತನ ನಡೆಯುತ್ತಾ ಇದೆ ಎಂದು ಅರ್ಥ ಮಾಡಿಕೊಳ್ಳಬೇಕಾಗಿದೆ. ಈ ರೀತಿ ಕಳ್ಳತನ ಬಹಳ ನಡೆಯುತ್ತಾ ಇದೆ. ಇದನ್ನು ತಡೆಗಟ್ಟುವುದು ಬಹಳ ಕಷ್ಟ. ತನಿಖೆ ಮಾಡತಕ್ಕ ಅಧಿಕಾರಿಗಳಿಗೆ ಏನಾದರೂ ಉತ್ತೇಜನ ಕೊಡುವಂತೆ ಇರಬೇಕೆಂದು ಹೇಳತಕ್ಕದ್ದು. ಸ್ಪಷ್ಟವಾಗಿ ಇದ್ದಿದ್ದರೆ, ಅದನ್ನು ಸ್ಪಷ್ಟವಾಗಿ ಓಬ್ಜೆಕ್ಟ್ಸ್ ಅಂಡ್ ರೀಸನ್ನಿನಲ್ಲಿ ಕೊಡಬೇಕಾಗಿತ್ತು. ಇನ್‌ಸೆಂಟಿವ್ ಕೊಡಬೇಕೆಂದು ಮಾತ್ರ ಹೇಳಿದ್ದಾರೆ. ಇದನ್ನು ಏಕೆ ಕೊಡಬೇಕು? ಹೀಗೆ ಎಲ್ಲಾ ಅಧಿಕಾರಿಗಳಿಗೆ ಸಂಬಂಧಪಟ್ಟ ಹಾಗೆ ಇನ್‌ಸೆಂಟಿವ್ ಕೊಡುತ್ತಾ ಹೋಗಬೇಕೇ ಅಥವಾ ಇದಕ್ಕೆ ಸ್ಪೆಶಲ್ ಆಗಿ ಇನ್‌ಸೆಂಟಿವ್ ಕೊಡಬೇಕೆಂದು ಹೇಳತಕ್ಕ ಅಭಿಪ್ರಾಯಕ್ಕೆ ಸರ್ಕಾರ ಬರಲು ಕಾರಣ ಏನೆನ್ನುವುದು ಪ್ರಶ್ನೆ ಮಾಡಲಿಕ್ಕೆ ಇಷ್ಟಪಡುತ್ತೇನೆ. ಇದರಲ್ಲಿ ಹೊಸದಾಗಿ ಒಂದು ಸೆಕ್ಷನ್ ಸೇರಿಸಿದ್ದಾರೆ. ಯಾರಾದರೂ ಒಳ್ಳೆಯ ಉತ್ಸಾಹದಿಂದ ಮುತುವರ್ಜಿವಹಿಸಿ ಕೇಸನ್ನು ಪತ್ತೆ ಹಚ್ಚಿದರೆ, ಅವರಿಗೆ ಏನಾದರೂ ಇನ್‌ಸೆಂಟಿವ್ ಕೊಡಬೇಕು ಎನ್ನುವ ಅಧಿಕಾರವನ್ನು, ಕೇಸನ್ನು ವಿಚಾರಣೆ ಮಾಡುವ ಮ್ಯಾಜಿಸ್ಟ್ರೇಟರಿಗೆ ಕೊಟ್ಟಿದ್ದೀರಿ. ಈ ಕೇಸ್ ಫೈಲ್ ಬಿಲ್ಟ್ ಆಗಿ ಮ್ಯಾಜಿಸ್ಟ್ರೇಟ್ ಮುಂದೆ ಬರುತ್ತದೆ. ಆ ಕೇಸಿನ ತನಿಖೆಯಲ್ಲಿ ನೂರಾರು ಜನರು ಸೇರಿಕೊಂಡಿರುತ್ತಾರೆ. ಯಾವ ಪೊಲೀಸ್ ಅಧಿಕಾರಿಯ ವಿಶೇಷ ಪ್ರಯತ್ನದಿಂದ ಅಪರಾಧಿಯ ಪತ್ತೆಯಾಯಿತು ಎನ್ನುವುದನ್ನು ಮ್ಯಾಜಿಸ್ಟ್ರೇಟರು ಫೈಲು ನೋಡಿ ತೀರ್ಮಾನ

ಮಾಡುವುದು ತುಂಬಾ ಕಷ್ಟದ ಪ್ರಶ್ನೆ. ಸಾಕ್ಷಿಗಳು ಇದ್ದರೆ ಸಾಕ್ಷಿಗಳನ್ನು ವಿಚಾರಣೆ ಮಾಡುತ್ತಾರೆ. ಅಪರಾಧಿ ಆಗಿದ್ದ ಪಕ್ಷದಲ್ಲಿ ಮ್ಯಾಜಿಸ್ಟ್ರೇಟರು ಶಿಕ್ಷೆ ವಿಧಿಸುತ್ತಾರೆ. ಆದರೆ ಪತ್ತೆ ಹಚ್ಚುವುದಕ್ಕೆ ಯಾರು ವಿಶೇಷ ಪ್ರಯತ್ನ ಮಾಡಿದ್ದಾನೆಂದು ಎಲ್ಲಾ ಸಂದರ್ಭಗಳಲ್ಲಿಯೂ ಕಂಡು ಹಿಡಿಯುವುದಕ್ಕೆ ಮ್ಯಾಜಿಸ್ಟ್ರೇಟರಿಂದಲೂ ಸಾಧ್ಯವಾಗುವುದಿಲ್ಲ. ಇದು ವಿಶೇಷವಾಗಿ ಇಲಾಖೆಯ ಅಧಿಕಾರಿಗಳಿಗೆ ಗೊತ್ತಿರುತ್ತದೆ. ಏನಿದ್ದರೂ ಇನ್‌ಸೆಂಟಿವ್ ಕೊಡತಕ್ಕದ್ದನ್ನು ಇಲಾಖೆಯವರೇ ಮಾಡಬೇಕಾಗಿತ್ತು. ಈ ತರಹ ಜುಲ್ಮಾನೆಯ ಕೆಲವು ಭಾಗಗಳನ್ನು ಅಪರಾಧಿಯಿಂದ ನೊಂದವರಿಗೆ ಕೊಡುವ ವ್ಯವಸ್ಥೆ ಕ್ರಿಮಿನಲ್ ಪ್ರೊಸೀಜರ್ ಕೋಡಿನಲ್ಲಿ ಇದೆ. ಅಪರಾಧಿಯಿಂದ ಯಾರು ನೊಂದಿದ್ದಾರೋ, ಅವರಿಗೆ ಆ ರೀತಿ ಕೊಡಲಿಕ್ಕೆ ಆಜ್ಞೆ ಮಾಡಬಹುದೇ? ಇಂಥ ಆಜ್ಞೆಯನ್ನು ಮ್ಯಾಜಿಸ್ಟ್ರೇಟರು ಬಹಳ ಅಪರೂಪವಾಗಿ ನೂರಕ್ಕೆ ಒಂದರಲ್ಲಿ ಕೊಡಬಹುದು. ಆದರೆ ಇಲ್ಲಿ ಇನ್‌ಸೆಂಟಿವ್ ಕೊಡಬೇಕೆಂದು ಹೇಳಿರುವುದು ಅಪರಾಧವನ್ನು ಪತ್ತೆ ಹಚ್ಚಿದವರಿಗೆ. ನಿರ್ದಿಷ್ಟವಾಗಿ ಏನು ಇನ್‌ಸೆಂಟಿವ್ ಪೊಲೀಸು ಅಧಿಕಾರಿಗೆ ಸಿಗುತ್ತದೆ ಎಂದು ನಾನು ಕೇಳುತ್ತೇನೆ. ಸೆಕ್ಷನ್ ಮೂರರಲ್ಲಿ ಅಪರಾಧಿಗೆ ಕೊಡಬಹುದು ಅಥವಾ ಜುಲ್ಮಾನೆ ಮಾಡಬಹುದು ಅಥವಾ ಇವೆರಡನ್ನು ಬೇಕಾದರೆ ಮಾಡಬಹುದು. ಪೊಲೀಸು ಆಫೀಸರ್ರಿಗೆ ಇನ್‌ಸೆಂಟಿವ್ ಕೊಡಲೇಬೇಕು ಎನ್ನತಕ್ಕ ಸಂದರ್ಭ ಇರುವಾಗ ಇಲ್ಲಿ ಮ್ಯಾಜಿಸ್ಟ್ರೇಟರು ಜುಲ್ಮಾನೆ ಮಾತ್ರ ವಿಧಿಸುತ್ತಾರೆಯೇ? ಏನು ಇನ್‌ಸೆಂಟಿವ್ ಕೊಟ್ಟ ಹಾಗೆ ಆಯಿತು? ಚಿಕ್ಕ ಅಪರಾಧವಾದರೆ, ಫೈನ್ ಹಾಕಿ ಬಿಟ್ಟುಬಿಡಬಹುದು. ಅಪರಾಧ ದೊಡ್ಡದು ಇದ್ದರೆ, ಜೈಲಿಗೆ ಕಳಿಸಿಬಿಡಬಹುದು. ಅಪರಾಧ ದೊಡ್ಡದು ಆಗುವಾಗ ಇನ್‌ಸೆಂಟಿವ್ ಹೆಚ್ಚು ಕೊಡುವ ಸಂದರ್ಭ ಬರುತ್ತದೆ. ಆದರೆ ಅಂಥ ಸಂದರ್ಭಗಳಲ್ಲಿ ಫೈನ್ ವಿಧಿಸಿರುವುದಿಲ್ಲ. ಆರು ತಿಂಗಳು, ಮೂರು ತಿಂಗಳು ಜೈಲಿಗೆ ಕಳುಹಿಸುತ್ತಾರೆ. ಈ ಮೂರು ತರಹದ ಜೈಲಿನ ಶಿಕ್ಷೆಯಲ್ಲಿ ಪೊಲೀಸು ಆಫೀಸರಿಗೆ ಏನು ಕೊಡೋಣ? ಫೈನ್ ಎಂದು ಹೇಳುತ್ತಾರೆ. ಎಷ್ಟು ಸಿಗುತ್ತದೆ? 5 ರೂಪಾಯಿ ಫೈನ್ ಮಾಡಿದರೆ, ಅದರಲ್ಲಿ ಎರಡೂವರೆ ರೂಪಾಯಿ ಪೊಲೀಸು ಅಧಿಕಾರಿಗೆ ಕೊಟ್ಟರೆ, ಅದು ಇನ್‌ಸೆಂಟಿವ್ ಆಗುತ್ತದೋ? 500 ರೂಪಾಯಿ ಲಂಚ ಈ ಬಗ್ಗೆ ಸಿಗುವುದಾದರೆ, ಅದನ್ನು ತೆಗೆದುಕೊಂಡು ಕೇಸ್ ಬಿಟ್ಟುಬಿಡಬಹುದು. ಫೈನ್ ಇಷ್ಟು ನಿರ್ದಿಷ್ಟವಾಗಿ ಹಾಕಬೇಕೆಂದು ಇಲ್ಲ; ಜೈಲಿಗೆ ಹಾಕಬೇಕೆಂದು ಇಲ್ಲ. ಎರಡೂ ಮಾಡಬಹುದು. ಫೈನ್ ಹಾಕಿದ ಸಂದರ್ಭದಲ್ಲಿ ಮಾತ್ರ ಇನ್‌ಸೆಂಟಿವ್ ಸಿಗುತ್ತದೆ. ಅದು ಕೂಡ ಮ್ಯಾಜಿಸ್ಟ್ರೇಟರರು

ಇನ್‌ಸೆಂಟಿವ್ ಕೊಡಲು ಆಜ್ಞೆ ಮಾಡಬಹುದು ಅಥವಾ ಬಿಡಬಹುದು. ಅದು ಆ ಕೇಸನ್ನು ತನಿಖೆ ಮಾಡುವ ಮ್ಯಾಜಿಸ್ಟ್ರೇಟರಿಗೆ ಬಿಟ್ಟದ್ದು. ಅಂಥ ಸಂದರ್ಭದಲ್ಲಿ ಹೆಚ್ಚು ಪ್ರಯತ್ನ ಪಟ್ಟು ಕೇಸ್ ತನಿಖೆ ಮಾಡಿ ಕಂಡು ಹಿಡಿಯುವ ಅಧಿಕಾರಿಗೆ ತನಿಖೆಗೆ ಇಂತಿಷ್ಟು ನಿರ್ದಿಷ್ಟವಾದ ಬಹುಮಾನ ಬರುತ್ತದೆ ಎನ್ನುವ ನಿಶ್ಚಯ ಇಲ್ಲ. ಬರುವ ಚಾನ್ಸಸ್ ಕೂಡ ಬಹಳ ಕಡಿಮೆ. ಆದ್ದರಿಂದ ಈ ಒಂದು ತಿದ್ದುಪಡಿಯ ಅವಶ್ಯಕತೆ ಇತ್ತೇ ಎಂದು ಕೇಳುತ್ತೇನೆ. ಇದರಿಂದ ಏನು ಸಾಧನೆ ಮಾಡಿದಂತಾಗುತ್ತದೆ ಅನ್ನುವ ಬಗ್ಗೆ ಅನುಮಾನವಾಗುತ್ತದೆ. ಈ ತಿದ್ದುಪಡಿಯ ಅವಶ್ಯಕತೆ ಇದೆ ಎಂದು ನಮ್ಮ ಮಿತ್ರರು ಹೇಳಿದರು. ದಾನವಾಗಿ ಬಂದಿರುವ ಹಾಲಿನ ಪುಡಿಯನ್ನು ಕಳ್ಳತನ ಮಾಡುವುದು ಸರಿಯಲ್ಲ ಎಂಬುದನ್ನು ನಾನು ಒಪ್ಪುತ್ತೇನೆ. ಅಪರಾಧವನ್ನು ತಡೆ ಹಿಡಿಯಬೇಕು ಎಂಬುದನ್ನು ನಾನು ಒಪ್ಪುತ್ತೇನೆ. ಆದರೆ ಈ ತಿದ್ದುಪಡಿಯಿಂದ ಯಾವ ರೀತಿಯ ಅನುಕೂಲವಾಗುತ್ತದೆ ಎಂಬುದು ಅನುಮಾನವಾಗಿದೆ. ಪೊಲೀಸರ ಕರ್ತವ್ಯವೇ ಅಪರಾಧವನ್ನು ಕಂಡು ಹಿಡಿಯುವುದು. ಇವರಿಗೆ ಯಾವ ರೀತಿ ಪತ್ತೆ ಹಚ್ಚಬೇಕು ಎಂಬುದು ಗೊತ್ತಿರುತ್ತದೆ. ಆದರೆ ಈ ತಿದ್ದುಪಡಿಯ ಮೂಲಕ ಅವರಿಗೆ ಬಹುಮಾನ ಕೊಡುವ ಅವಕಾಶವನ್ನು ಕಲ್ಪಿಸಿಕೊಡುತ್ತಿದ್ದಾರೆ. ಏನು ಬಹುಮಾನ ಕೊಡುತ್ತಾರೆ ಎಂಬುದನ್ನು ಇಲ್ಲಿ ನಿರ್ದಿಷ್ಟವಾಗಿ ಹೇಳಿಲ್ಲ. ಆದಕಾರಣ ಈ ತಿದ್ದುಪಡಿಯನ್ನು ಸರ್ಕಾರದವರು ವಾಪಸ್ ತೆಗೆದುಕೊಳ್ಳುವ ಮೂಲಕ ಮತ್ತೆ ಆಲೋಚನೆ ಮಾಡುವುದು ಒಳ್ಳೆಯದೆಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ಹೇಡಿತನ ನನ್ನಲ್ಲಿಲ್ಲ

**20ನೇ ಏಪ್ರಿಲ್ 1975**

**ಶ್ರೀ ಎ.ಕೆ. ಸುಬ್ಬಯ್ಯ:** ನಾನು ಒಂದು ಪ್ರಿವಿಲೇಜ್ ನೋಟೀಸ್ ಕಳುಹಿಸಿದ್ದೇನೆ. ಕಳೆದ ತಿಂಗಳು ವಿರಾಜಪೇಟೆಯಲ್ಲಿ ನಾನು ಸಾರ್ವಜನಿಕರ ಸಭೆಯನ್ನು ಉದ್ದೇಶಿಸಿ ಭಾಷಣ ಮಾಡಿದ್ದೇನೆ ಎಂದು ಪೊಲೀಸರು ರಿಪೋರ್ಟ್ ಮಾಡಿದ್ದಾರೆ. ಅದನ್ನು ಮಾನ್ಯ ಮುಖ್ಯಮಂತ್ರಿಯವರು ಓದಿದ್ದಾರೆ. ಇದರ ಬಗ್ಗೆ ನಾನು ಹೇಳುವುದೇನೆಂದರೆ, ನಾನು ಅಲ್ಲಿ ಯಾವುದೇ ಬಹಿರಂಗ ಸಭೆಯನ್ನುಉದ್ದೇಶಿಸಿ ಮಾತನಾಡಿಲ್ಲ; ಒಂದು ವೇಳೆ ಮಾತನಾಡಿದ್ದರೆ, ಮಾತನಾಡಿಲ್ಲ ಎಂದು ಹೇಳುವ ಹೇಡಿತನ ನನ್ನಲ್ಲಿಲ್ಲ. ಆದರೆ ಉದ್ದೇಶಪೂರ್ವಕವಾಗಿ ನನ್ನ ಹೆಸರನ್ನು ಇಲ್ಲಿ ತಂದು ಪೊಲೀಸಿನವರು ಮಾಡಿರುವ ಅಪರಾಧಗಳಿಗಾಗಿ ಸರಕಾರದಿಂದ ರಕ್ಷಣೆ ಪಡೆಯುವ ದೃಷ್ಟಿಯಿಂದ ಅವರು ತಪ್ಪು ವರದಿಯನ್ನು ಸರಕಾರಕ್ಕೆ ಕಳುಹಿಸಿಕೊಟ್ಟಿದ್ದಾರೆ. ಪೊಲೀಸಿನವರು ಅವರ ಮನಸ್ಸಿಗೆ ಬಂದ ಹಾಗೆ, ತಪ್ಪು ರಿಪೋರ್ಟ್ ಕೊಟ್ಟು ಈ ರೀತಿ ತಪ್ಪಿಸಿಕೊಳ್ಳುವುದಾದರೆ, ನಮ್ಮ ಕರ್ತವ್ಯವನ್ನು ನಾವು ನಿರ್ವಹಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಅವರು ಕೊಟ್ಟಿರುವ ವರದಿ ಸತ್ಯಕ್ಕೆ ದೂರವಾದ ಕಾರಣ ಮತ್ತು ಅದನ್ನು ಉದ್ದೇಶಪೂರ್ವಕವಾಗಿ ಮಾಡಿರುವುದರಿಂದ, ನಮ್ಮ ಹಕ್ಕಿಗೆ ಚ್ಯುತಿ ಬಂದಿದೆ.

# ಜನ ನಿರ್ಭಯದಿಂದ ಓಡಾಡಲು ಸಾಧ್ಯವಾಗಬೇಕು

**7ನೇ ಜುಲೈ 1978**

**ಶ್ರೀ ಎ.ಕೆ. ಸುಬ್ಬಯ್ಯ:** ಮಾನ್ಯ ರಘುಪತಿ ಅವರು ಏನು ನಿಲುವಳಿ ಸೂಚನೆಯನ್ನು ತಂದಿದ್ದಾರೆ. ಆ ಸೂಚನೆಯನ್ನು ಇವೊತ್ತು ಸ್ವೀಕಾರ ಮಾಡುವುದಕ್ಕೆ ಯೋಗ್ಯವಾಗಿದೆ ಎಂದು ನನಗನ್ನಿಸುತ್ತದೆ. ಆ ದೃಷ್ಟಿಯಿಂದ ಅವರ ನಿಲುವಳಿ ಸೂಚನೆಯನ್ನು ತಾವು ಒಪ್ಪಿಕೊಳ್ಳಬೇಕೆಂದು ಕೇಳಿಕೊಳ್ಳುವುದರ ಜೊತೆಗೆ ಈ ಬಗ್ಗೆ ತಮಗೆ ಮನವರಿಕೆ ಮಾಡಿಕೊಡುವುದು ನಮ್ಮ ಜವಾಬ್ದಾರಿಯಾಗಿದೆ. ಒಂದು ತಿಂಗಳಿನಲ್ಲಿಯೇ ಮಾನ್ಯ ರಘುಪತಿಯವರು ಹೇಳಿದಂತೆ ಇಂತಹ ಎರಡು ಘಟನೆಗಳು ನಮಗೆ ಗೊತ್ತಿರುವಂತೆ ನಡೆದಿವೆ. ಜೊತೆಗೆ ಈ ಎರಡೂ ಘಟನೆಗಳು ಹೆಚ್ಚುಕಡಿಮೆ ಒಂದೇ ರೀತಿಯಲ್ಲಿ ನಡೆದಿವೆ. ಇವು ಬೆಳಕಿಗೆ ಬಂದಿರುವಂತಹ ಘಟನೆಗಳು. ಇನ್ನು ಬೆಳಕಿಗೆ ಬರದೆ ನಡೆದುಹೋಗಿರುವಂತಹ ಘಟನೆಗಳು ಎಷ್ಟು ಇವೆಯೋ ನಮಗೆ ಗೊತ್ತಿಲ್ಲ. ಇದನ್ನೆಲ್ಲಾ ನೋಡಿದಾಗ ಇದರ ಹಿಂದೆ ವ್ಯವಸ್ಥಿತವಾದಂಥ ಷಡ್ಯಂತರವಿರುವಂತೆ ಕಾಣುತ್ತಿದೆ. ಈ ಘಟನೆಗಳು ದಿನನಿತ್ಯ ನಡೆದು ಹೋಗುವಂತಹ ಘಟನೆಗಳಲ್ಲ. There must be a racket active indulging in this kind of activities in Bangalore City. ಈ ರೀತಿ ಷಡ್ಯಂತರ ವ್ಯವಸ್ಥಿತವಾಗಿ ನಡೆಯಬೇಕಾದರೆ, ಇದನ್ನು ತಡೆಗಟ್ಟುವ ಬಗ್ಗೆ ಸರ್ಕಾರಕ್ಕೂ ಸಾಕಷ್ಟು ಉತ್ಸಾಹವಿದೆ. ಮತ್ತು ಸರ್ಕಾರಕ್ಕೂ ಇದರ ಬಗ್ಗೆ ವಿವರಗಳನ್ನು ಸಂಗ್ರಹಿಸುವಂತಹ ಅವಶ್ಯಕತೆ ಇದೆ.

ಈ ದೃಷ್ಟಿಯಿಂದ ಮಾನ್ಯ ಸದಸ್ಯರು ಸಭೆಯ ಮುಂದೆ ತಂದಿರುವ ನಿಲುವಳಿ ಸೂಚನೆಗೆ ಅವಕಾಶ ಮಾಡಿಕೊಟ್ಟರೆ, ಅದರ ಮುಖಾಂತರ ಅನೇಕ ಪ್ರಕರಣಗಳು ಹೊರಗೆ ಬಂದು ಸಾಕಷ್ಟು ಬೆಳಕು ಚೆಲ್ಲಬಹುದು ಮತ್ತು ಇವುಗಳನ್ನು ತಪ್ಪಿಸುವುದಕ್ಕೆ ಸರ್ಕಾರವೂ ಯೋಗ್ಯ ಕ್ರಮಗಳನ್ನು ತೆಗೆದುಕೊಳ್ಳುವುದಕ್ಕೆ ಅನುಕೂಲವಾಗಬಹುದು. ಮುಖ್ಯವಾಗಿ ರಾತ್ರಿ ಹತ್ತುಗಂಟೆ ಆದನಂತರ ಒಂದೊಂದು ರಿಕ್ಷಾದಲ್ಲಿ ಮೂರು–ನಾಲ್ಕು ಜನ ಕುಳಿತುಕೊಂಡು ಮನ ಬಂದ ರೀತಿಯಲ್ಲಿ ಓಡಾಡುವುದನ್ನು ತಹಬಂದಿಗೆ ತರಬೇಕೆಂದು ಹೇಳುತ್ತೇನೆ. ಪೊಲೀಸರೇನಾದರೂ ಆಟೋರಿಕ್ಷಾ ಚಾಲಕರ ಮೇಲೆ ಕೈ ಮಾಡಿದರೆ ಅಥವಾ ಸಾರ್ವಜನಿಕರೇನಾದರೂ ಘರ್ಷಣೆ ಮಾಡಿದರೆ they can hold the entire city into ransome. Government should seriously think whether the Government can ban the running of autorikshas after

10-00 P.M. ಪೊಲೀಸ್ ಠಾಣೆಗೆ ಮುತ್ತಿಗೆ ಹಾಕಿದರು! ಆಟೋರಿಕ್ಷಾ ಚಾಲಕರಿಂದ ಪದೇ ಪದೇ ಇಂಥಾ ಅಕೃತ್ಯಗಳು ನಡೆಯುತ್ತಿರುವುದು ಬೆಳಕಿಗೆ ಬಂದರೂ ಅದರ ಪೂರ್ಣ ಜವಾಬ್ದಾರಿಯನ್ನು ಆಟೋರಿಕ್ಷಾ ಚಾಲಕರೇ ತೆಗೆದುಕೊಂಡು ಸಾರ್ವಜನಿಕವಾಗಿ ಕ್ಷಮೆ ಕೇಳದಿದ್ದರೆ, ಮಾನ್ಯ ರಘುಪತಿಯವರು ಹೇಳಿದ ಹಾಗೆ ಸಾರ್ವಜನಿಕರೇ ಏನಾದರೂ ಕಾರ್ಯಾಚರಣೆ ಮಾಡಿಯಾರು. ಆದುದರಿಂದ ಇದನ್ನು ನಾವು ಬಹಳ ತೀವ್ರವಾಗಿ ಯೋಚನೆ ಮಾಡಬೇಕಾಗುತ್ತದೆ. ಈ ರೀತಿ ಅಕೃತ್ಯಗಳು ನಡೆಯದ ಹಾಗೆ ರಾತ್ರಿ ಹತ್ತುಗಂಟೆ ನಂತರ ಏನಾದರೂ ರೆಗ್ಯುಲೇಟ್ ಮಾಡಬೇಕು. ಹತ್ತುಗಂಟೆ ನಂತರ ನಗರದಲ್ಲಿ ಆಟೋರಿಕ್ಷಾವನ್ನು ಓಡಿಸುವುದು ಬೇಡ. ಸಾರ್ವಜನಿಕರ ಪ್ರಯಾಣ ಸೌಕರ್ಯಕ್ಕೆ ಬಿ.ಟಿ.ಎಸ್. ಬಸ್ಸುಗಳನ್ನು ಒದಗಿಸುವ ವ್ಯವಸ್ಥೆ ಮಾಡಬೇಕು. ಹತ್ತುಗಂಟೆ ನಂತರ ಆಟೋ ರಿಕ್ಷಾ ಚಾಲಕರು ನಿಶಾಚರರಂತೆ ಅಕೃತ್ಯಗಳಲ್ಲಿ ತೊಡಗಿರುವುದನ್ನು ತಪ್ಪಿಸದಿದ್ದರೆ ಸಾರ್ವಜನಿಕರಿಗೆ ಬಹಳ ಕಷ್ಟವಾಗುತ್ತದೆ. ರಾತ್ರಿ ಹತ್ತುಗಂಟೆ ಮೇಲೆ ಆಟೋ ರಿಕ್ಷಾ ಸಂಚಾರವನ್ನು ಪ್ರತಿಬಂಧಿಸಬೇಕು ಅಥವಾ ರಾತ್ರಿ ಚಲನಚಿತ್ರಗಳ ಎರಡನೆ ಆಟವನ್ನು ರದ್ದುಪಡಿಸಬೇಕು. ಶಾಂತಿ ಕೆಡದ ಬೆಂಗಳೂರು ನಗರದಲ್ಲಿ ಪದೇ ಪದೇ ನಡೆಯುತ್ತಿರುವ ಷಡ್ಯಂತರ ಕೃತ್ಯಗಳಿಂದ ಜನ ಬೀದಿಯಲ್ಲಿ ನಿರ್ಭಯವಾಗಿ ತಿರುಗಾಡುವುದಕ್ಕಾಗುವುದಿಲ್ಲವೆಂದರೆ ಎಲ್ಲರೂ ನಾಚಿಕೆಪಡತಕ್ಕ ವಿಚಾರವಾಗಿದೆ. ಇದರಲ್ಲಿ ರಾಜಕೀಯದ ಪ್ರಶ್ನೆ ಬರುವುದಿಲ್ಲ. ಸರ್ಕಾರವಾಗಲೀ ವಿರೋಧಪಕ್ಷವಾಗಲೀ ಎಲ್ಲರೂ ನಾಚಿಕೆ ಪಡತಕ್ಕ ವಿಚಾರವಾಗಿದೆ ಇದು. ಇಂತಹ ಕೃತ್ಯಗಳನ್ನು ತಪ್ಪಿಸಲು ಸರ್ಕಾರ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕು. ಆದುದರಿಂದ, ಮಾನ್ಯ ಉಪಸಭಾಪತಿಯವರು ಮಾನ್ಯ ಸದಸ್ಯ ಶ್ರೀ ರಘುಪತಿಯವರು ತಂದಿರುವ ನಿಲುವಳಿ ಸೂಚನೆಗೆ ಒಪ್ಪಿಗೆ ಕೊಟ್ಟರೆ ಅನೇಕ ವಿಚಾರಗಳನ್ನು ಬಯಲಿಗೆಳೆದು ಅವುಗಳ ಬಗ್ಗೆ ಬೆಳಕು ಚೆಲ್ಲಬಹುದು. ಆದ್ದರಿಂದ ಅದಕ್ಕೆ ಒಪ್ಪಿಗೆ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

# ಕರ್ನಾಟಕ ರಾಜ್ಯದ ಪೊಲೀಸರು ನಿಷ್ಠೆ ಹಾಗೂ ದಕ್ಷತೆಗೆ ಹೆಸರುವಾಸಿ

**22ನೇ ಜುಲೈ 1980**

**ಶ್ರೀ ಎ.ಕೆ. ಸುಬ್ಬಯ್ಯ:** ಈ ದಿನ ಕರ್ನಾಟಕದ ಉತ್ತರ ಭಾಗದ ದುರ್ಘಟನೆಯಲ್ಲಿ ಇಬ್ಬರು ಪೊಲೀಸ್ ಅಧಿಕಾರಿಗಳು ಹಾಗೂ ಇಬ್ಬರು ಸಾಮಾನ್ಯ ನಾಗರೀಕರು ಮಡಿದಿದ್ದಾರೆ. ಇದರ ಹಿನ್ನೆಲೆಯಲ್ಲಿ ಕೃಷಿಕರು, ರಾಜ್ಯದ ರೈತಬಾಂಧವರು ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದಕ್ಕೆ ರಸ್ತೆಗೆ ಇಳಿದಿರತಕ್ಕದ್ದು ಎಲ್ಲರ ಗಮನಕ್ಕೂ ಬಂದಿದೆ. ಇದನ್ನು ಎಲ್ಲರೂ ಗಮನಿಸಬೇಕಾಗಿದೆ. ಇವತ್ತು ರೈತ ಜಾಗೃತನಾಗಿ ರಸ್ತೆಗೆ ಇಳಿದಿದ್ದಾನೆ. ತನ್ನ ಹಕ್ಕನ್ನು ರಕ್ಷಣೆ ಮಾಡಿಕೊಳ್ಳಬೇಕಾದರೆ, ತನ್ನ ಯೋಗಕ್ಷೇಮವನ್ನು ನೋಡಿಕೊಳ್ಳಬೇಕಾದರೆ ರಸ್ತೆಗೆ ಇಳಿಯುವುದನ್ನು ಬಿಟ್ಟು ಬೇರೆ ಮಾರ್ಗವೇ ಇಲ್ಲ ಎನ್ನುವ ಘಟ್ಟಕ್ಕೆ ರೈತ ಬಂದು ಮುಟ್ಟಿದ್ದಾನೆ. ಹೀಗೆ ಒಂದು ಘಟ್ಟವನ್ನು ಮುಟ್ಟಿ ಜಾಗೃತನಾಗಿ ರಸ್ತೆಗೂ ಇಳಿದಿದ್ದಾನೆ. ರಕ್ತಪಾತವಾಗುವಂತಹ ಪರಿಸ್ಥಿತಿ ಅಲ್ಲಿ ಬಂದಿದೆ. ನಾಗರೀಕರಿಬ್ಬರು ಹಾಗೂ ಪೊಲೀಸಿನವರಿಬ್ಬರು ಅಲ್ಲಿ ಸತ್ತಿದ್ದಾರೆ. ಈ ಒಂದು ದುರ್ಘಟನೆ ನಡೆಯಬಾರದಿತ್ತು. ಆದರೆ ಈ ರೀತಿ ನಾಲ್ಕು ಜನರನ್ನು ಈ ಚಳುವಳಿ ಆಹುತಿಯನ್ನು ತೆಗೆದುಕೊಂಡಿದೆ. ಈ ಒಂದು ಚಳುವಳಿಯ ಸಂಪೂರ್ಣ ಜವಾಬ್ದಾರಿಯನ್ನು ಸರ್ಕಾರ ಹೊರಬೇಕಾಗಿದೆ. ಆ ಪಾಪ ಸರ್ಕಾರದ ಮೇಲೆ ಇದೆ. ಏನಾದರೂ ಒಂದು ಸರ್ಕಾರ, ಅದೂ ಜವಾಬ್ದಾರಿ ಇರತಕ್ಕ ಸರ್ಕಾರ ಕರ್ನಾಟಕದಲ್ಲಿ ಇದ್ದಿದ್ದರೆ ಈ ಘಟನೆ ಆಗುತ್ತಾ ಇರಲಿಲ್ಲ. ನಾವೆಲ್ಲಾ ಈ ಸರ್ಕಾರ ಬಂದ ಮೇಲೆ ಬಹಳ ಸಮಸ್ಯೆಗಳನ್ನು ಪ್ರಸ್ತಾಪ ಮಾಡಿದ್ದೇವೆ. ಆದರೆ ಈ ಸರ್ಕಾರದ ಒಂದು ಉದ್ಧಟತನ ಏನಿದೆ ಅದು ಅರ್ಥವಾಗುವುದಿಲ್ಲ. ನಾವು ಏನನ್ನೇ ಹೇಳಲಿ, ನೀವು ಏನು ಹೇಳುವುದು? ನಮಗೂ ಗೊತ್ತು. ಹಾಗೆ ಮಾಡುತ್ತೇವೆ. ಹೀಗೆ ಮಾಡುತ್ತೇವೆ ನೀವೇನೂ ಹೇಳಬೇಕಾಗಿಲ್ಲ ಎಂದು ಹೇಳುತ್ತಾರೆ. ವಿರೋಧ ಪಕ್ಷದವರು ಹೇಳುವ ಹೇಳಿಕೆಗಳನ್ನು ಸಮಾಧಾನದಿಂದ ಕೇಳಿ ಅದಕ್ಕೆ ಪರಿಹಾರ ಸೂಚಿಸುವಂತಹ ಒಂದು ಸನ್ಮಾರ್ಗದಲ್ಲಿ ಈ ಸರ್ಕಾರ ಹೋಗುತ್ತಾ ಇಲ್ಲ. ಈ ಒಂದು ಸರ್ಕಾರದ ಉದ್ಧಟತನದಿಂದಲೇ ರೈತನಿಗೆ ಬೇರೆ ಯಾವ ಮಾರ್ಗವೂ ಕಾಣದೆ ಈ ದಿನ ಆತ ರಸ್ತೆಗೆ ಇಳಿದಿದ್ದಾನೆ. ಈ ಒಂದು ಸರ್ಕಾರದ ಬೇಜವಾಬ್ದಾರಿ ಹಾಗೂ ನಿರ್ಲಕ್ಷ್ಯತನದಿಂದ ರಾಜ್ಯದ ಸಮಸ್ಯೆಗಳನ್ನು ಅದು ಅರ್ಥ

ಮಾಡಿಕೊಳ್ಳುವುದಕ್ಕೆ ಹೋಗಿಲ್ಲ. ಈ ರೀತಿ ಇದ್ದರೆ ಎಲ್ಲಿ ತಾನೆ ಅರ್ಥವಾಗುತ್ತದೆ. ಅರ್ಥ ಮಾಡಿಕೊಳ್ಳುವ ಪ್ರಯತ್ನವನ್ನೇ ಮಾಡಿಲ್ಲ. ಸಮಸ್ಯೆ ಅಗಾಧವಾಗಿ ಹೋಗುತ್ತಾ ಇರುವಾಗ ಇದನ್ನು ಅರ್ಥ ಮಾಡಿಕೊಳ್ಳುವಂತಹ ಸರ್ಕಾರ ಇಲ್ಲ.

ನಿಮ್ಮ ಬಡ್ಜೆಟ್ ಬಂದಿತ್ತು ಮತ್ತು ಕೇಂದ್ರ ಬಡ್ಜೆಟ್ ಕೂಡ ಬಂದಿತ್ತು. ಆದರೆ ಏನಾಯಿತು? ದಿನನಿತ್ಯ ಧಾನ್ಯಗಳ ಬೆಲೆಗಳು ಏರುತ್ತಲೇ ಇರುತ್ತವೆ. ಆದರೆ ರೈತನು ಬೆಳೆದಂಥ ಬೆಳೆ ಮಾರ್ಕೆಟ್‌ಗೆ ಬಂದರೆ ಅದನ್ನು ಕೊಂಡುಕೊಳ್ಳುವವರೇ ಇಲ್ಲ. ಯಶವಂತಪುರ ರೆಗ್ಯುಲೇಟೆಡ್ ಮಾರ್ಕೆಟ್ ಎಂದು ಮಾಡಿರುತ್ತೀರಿ. ಅದರಿಂದ ರೈತರಿಗೆ ಯಾವುದೇ ವಿಧವಾದ ಅನುಕೂಲವಾಗುತ್ತಿಲ್ಲ ಎಂದು ಹೇಳುತ್ತಲೇ ಇರುತ್ತೇವೆ. ಸರ್ಕಾರದ ಒಂದು ದುರ್ಲಾಭವನ್ನು ಪಡೆದುಕೊಂಡು ಕೆಲವರು ಹಣವನ್ನು ಹೊಡೆಯುತ್ತಲೇ ಇರುತ್ತಾರೆಯೇ ವಿನಃ ಸಮಸ್ಯೆಯನ್ನು ಪರಿಹಾರ ಮಾಡುವತ್ತ ಆಲೋಚನೆಯನ್ನು ಮಾಡುತ್ತಲೇ ಇಲ್ಲ. ಹದಿನೈದು ದಿವಸದೊಳಗೆ ಏನೇನೋ ಮಾಡುವುದಕ್ಕೆ ಆಗುತ್ತದೆ. ಆದರೆ ಇಂಥ ಸಮಸ್ಯೆಗಳನ್ನೆಲ್ಲ ಪರಿಹಾರ ಮಾಡುವುದಕ್ಕೆ ಸಾಧ್ಯವಾಗುತ್ತಿಲ್ಲ. ನಾಲ್ಕಾರು ವರ್ಷಗಳಿಂದ ಒಂದೇ ಸಮನೆ ಪ್ರಸ್ತಾಪ ಮಾಡಿದ್ದೇವೆ. ಸಮಸ್ಯೆಗಳು ಯಾವುದೂ ಪರಿಹಾರವಾಗಲಿಲ್ಲ. ಸುಭೇದಾರ್ ಪಾಳ್ಯದಲ್ಲಿ ಹರಿಜನರ ಸಮಸ್ಯೆ ಇದೆ. ಶ್ರೀಮಾನ್ ಬಸವಲಿಂಗಪ್ಪನವರು ಇದ್ದಾಗಲೂ ಕೂಡ, ಅಲ್ಲಿಂದ ಇಲ್ಲಿಯವರೆಗೂ ಏನಾಗಿದೆ ಪರಿಸ್ಥಿತಿ ಗೊತ್ತುಂಟೆ? ಅಲ್ಲಿರುವ ವೆಂಕಟಪ್ಪ ಎನ್ನುವ ಒಬ್ಬ ವ್ಯಕ್ತಿ ಸರ್ಕಾರಿ ಸ್ಲಮ್ ಎಂದು ಪ್ರಿಲಿಮಿನರಿ ನೋಟಿಫಿಕೇಷನ್ ಇಷ್ಯೂ ಮಾಡಿ ಕೊನೆಗೆ ಫೈನಲ್ ನೋಟಿಫಿಕೇಷನ್ ಕೊಡತಕ್ಕಂಥಾದ್ದಕ್ಕೆ ತಡೆಹಾಕಿ ದಿನನಿತ್ಯವೂ ಹಣವನ್ನು ವಸೂಲು ಮಾಡತಕ್ಕಂಥ ಕೆಲಸವನ್ನು ಮಾಡುತ್ತಿರುತ್ತಾನೆ. ಈತನ ಮೇಲೆ 10–12 ಕ್ರಿಮಿನಲ್ ಮೊಕದ್ದಮೆಗಳು ಪೊಲೀಸ್ ಸ್ಟೇಷನ್‌ನಲ್ಲಿ ಇರುತ್ತವೆ. ಇಂಥ ಪ್ರಸಂಗ ಇದ್ದಾಗ್ಯೂ ಆ ಬಗ್ಗೆ ಏನೊಂದು ಪರಿಹಾರವನ್ನೂ ಸರ್ಕಾರದವರು ಕೊಡಲಿಲ್ಲ. ಇದರ ಬಗ್ಗೆ ಅರ್ಧ ಡಜನ್ ಟೈಮ್ ಪ್ರಸ್ತಾಪ ಮಾಡಿದ್ದೇವೆ. ಹೀಗೆ ರೋಸಿಹೋದ ಜನರು ಏನು ಮಾಡುತ್ತಾರೆ? ಒಂದು ದಿವಸ ಬೀದಿಯಲ್ಲಿ ನಿಲ್ಲುತ್ತಾರೆ. ಆಗ ಗುಂಡು ಹಾರಿಸುವುದರಿಂದ ಅವರು ಸಾಯುತ್ತಾರೆ. ಜನರೂ ಸಾಯುತ್ತಾರೆ. ಇಂಥ ಪರಿಸ್ಥಿತಿ ಬರುತ್ತದೆ. ಮಾನ್ಯ ಸುಬ್ಬಯ್ಯ ಶೆಟ್ಟರು ಸಚಿವರಾಗಿದ್ದಾಗ ಸರ್ಕಾರಿ ಮುದ್ರಣಾಲಯದಲ್ಲಿ ಮತ್ತು ಅಲ್ಲಿ ನಡೆಯತಕ್ಕಂಥ ದುರ್ವ್ಯವಹಾರದ ಬಗ್ಗೆ ವಿಜಿಲೆನ್ಸ್ ತನಿಖೆಯಾದರೂ ಮಾಡಬೇಕೆಂದು ನಾನು ಹೇಳಿದ್ದೆ. ಅಲ್ಲಿಯ ನೌಕರರಿಗೆ ಏನೇನು ಅನ್ಯಾಯವಾಗುತ್ತಿವೆ. ಅದರ ಬಗ್ಗೆ

ಸೆಕ್ರೆಟರಿಯವರು ತನಿಖೆ ಮಾಡುತ್ತೇನೆಂದು ಹೇಳಿದರೂ ಕೂಡ ಅಲ್ಲಿ ನಿರಂತರವಾಗಿ ನೌಕರರಿಗೆ ಕಿರುಕುಳ ಕೊಡತಕ್ಕಂಥ ಕೆಲಸ ನಡೆದೇ ಇದೆ. ಕೊನೆಗೆ ಅವರೂ ಕೂಡ ತಮಗೆ ನ್ಯಾಯ ದೊರಕಿಸಿಕೊಳ್ಳಲು ಅನ್ಯ ಮಾರ್ಗವಿಲ್ಲದೆ ತಮ್ಮ ಶಕ್ತಿ ಪ್ರದರ್ಶನದ ಮೂಲಕ ಪಡೆಯಬೇಕಾದ ಪ್ರಸಂಗ ಬಂದೇ ಬರುತ್ತದೆ. ಈಗಿನ ಪರಿಸ್ಥಿತಿ ಏನಾಗಿದೆ ಎಂದರೆ ಒಬ್ಬ ಹುಚ್ಚು ದೊರೆ ಮನುಷ್ಯನನ್ನು ಕೊಲ್ಲಬೇಕಾದರೆ ಒಂದು ಇಳಿಜಾರಿನಲ್ಲಿ ಹೊರಳುಬಿಟ್ಟು ಹೊರಳುತ್ತಿರುವ ರಭಸದಲ್ಲಿ ರುಂಡವನ್ನು ಕಡಿದುಬಿಡುತ್ತಿದ್ದ. ರಭಸದಿಂದ ಹೊರಳುತ್ತಿದ್ದ ಮನುಷ್ಯನ ರುಂಡ ಬೇರ್ಪಟ್ಟಾಗ ಮುಂಡ ಅದೇ ರಭಸದಲ್ಲಿ ಹೊರಳಿಕೊಂಡು ಹೋಗಿ ಎಲ್ಲೋ ಬಿದ್ದುಕೊಳ್ಳುವಂಥ ಪರಿಸ್ಥಿತಿ ಈ ಸರ್ಕಾರಕ್ಕೆ ಬಂದಿರುತ್ತದೆ. ಅಧಿಕಾರ ಮಂಗನ ಮುಷ್ಟಿಗೆ ಸಿಕ್ಕಿದಂತಾಗಿರುತ್ತದೆ. ಯಾವ ಕಛೇರಿಯನ್ನೇ ತೆಗೆದುಕೊಂಡರೂ ಬಿ.ಡಿ.ಎ. ನಲ್ಲಿ ಒಬ್ಬ ರೆವಿನ್ಯೂ ಇನ್‌ಸ್ಪೆಕ್ಟರ್ ಕೋ ಆಪರೇಟೀವ್ ಸೊಸೈಟಿಗಳಲ್ಲಿ, ಡೆಪ್ಯುಟಿ ಕಮೀಷನರ್ ಆಫೀಸಿನಲ್ಲಿ ಕಾನೂನು ಪ್ರಕಾರ ಯಾವುದು ಕ್ರಮ ಜರುಗುತ್ತಿಲ್ಲ. ಇದರ ಬಗ್ಗೆ ಪ್ರಸ್ತಾಪ ಮಾಡಬೇಕೆಂದರೆ ಬೇಸರವಾಗುತ್ತದೆ. ಯಾವ ಅಧಿಕಾರಿಗೂ ಕೂಡ ತನ್ನ ಕರ್ತವ್ಯ ಏನು ಎನ್ನುವುದನ್ನು ಅರಿತು ಕೆಲಸ ಮಾಡಬೇಕು ಎನ್ನುವ ಪ್ರಜ್ಞೆಯೇ ಇರುವುದಿಲ್ಲ. ಜನರಿಗೆ ಮೋಸ ಮಾಡಿ ತಾವು ಕಮಾಯಿಸಿಕೊಳ್ಳುವುದರಲ್ಲಿಯೇ ನಿರತರಾಗಿರುತ್ತಾರೆ. ಎಂಪ್ಲಾಯ್‌ಮೆಂಟ್ ಅಫರ್‌ಮೇಷನ್ ಸ್ಕೀಂನಲ್ಲಿ ಏನಾಗಿದೆ ಎಂದರೆ, ದುರುಪಯೋಗ ನಡೆದೇ ಇದೆ. ಇಂಥಾ ಸರಕಾರ ಇರುವಾಗ ನರಗುಂದ, ನವಲಗುಂದ, ಜೇವರ್ಗಿ, ಧಾರವಾಡ, ಗದಗ್ ಇಲ್ಲೆಲ್ಲ ಇರತಕ್ಕಂಥ ರೈತರು ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಹೋರಾಟಕ್ಕೆ ಇಳಿದುದು ತಪ್ಪು ಎಂದು ಹೇಳುವುದಕ್ಕೆ ಸಾಧ್ಯವೇ ಇಲ್ಲ. ಅದು ಜನರ ಲಕ್ಷಣ ಇರುತ್ತದೆ. ಶ್ರೀಮತಿ ಪದ್ಮಾವತಿ ವಿಠ್ಠಲರಾವ್ ಅವರ ಮಗ ಎರಡು ಮೂರು ಸಾವಿರ ಸೌತೇಕಾಯಿಯನ್ನು ಬೆಳೆದಿದ್ದರಂತೆ. ಅವುಗಳನ್ನು ಮಾರ್ಕೆಟ್‌ಗೆ ಕೊಂಡೊಯ್ದಾಗ ಒಂದೊಂದಕ್ಕೂ 10 ಪೈಸೆಯಂತೆ ಕೇಳಿದರಂತೆ. 10 ಪೈಸೆಗೆ ಕೊಟ್ಟು ಮತ್ತೆ ಅವನು ಕೊಳ್ಳಬೇಕೆಂದರೆ ಮಾರಿದವನಿಗೆ 70 ಪೈಸೆ. ಮಧ್ಯೆ ಇದರಲ್ಲಿ 60 ಪೈಸೆ ಲಾಭ. ಬೆಳೆದವನಿಗೆ ಅದರ ಟ್ರಾನ್ಸ್‌ಪೋರ್ಟ್ ವೆಚ್ಚವೂ ಕೂಡ ಬರುವಂತೆ ಇಲ್ಲ. ಇತ್ತೀಚೆಗೆ ಮಾರ್ಕೆಟ್‌ನಲ್ಲಿ ಟೊಮೊಟೊ ಬೆಲೆ ಒಂದು ಕೆ.ಜಿ.ಗೆ 8–10–12 ರೂಪಾಯಿಗಳವರೆಗೆ ಆಗಿತ್ತು. ಆದರೆ ಬೆಳೆದವನು ಮಾರ್ಕೆಟ್‌ಗೆ ತೆಗೆದುಕೊಂಡು ಹೋದರೆ ಅದು ಕೊಳೆತು ಹೋಗುತ್ತದೆ. ಟೊಮೊಟೊ ಕೆ.ಜಿ. ಎರಡು ರೂಪಾಯಿ, ಮೂರು ರೂಪಾಯಿಗೆ

ಕೊಡು ಎಂದು ಕೇಳುತ್ತಾರೆ. ಅವನು ಕೊಡಲಿಲ್ಲವೆಂದರೆ ಅವನನ್ನು ಸುತ್ತುವರಿದುಕೊಂಡು ಅವನನ್ನು ಹೊಡೆಯಲಿಕ್ಕೆ ಹೋಗುತ್ತಾರೆ. ಆದ್ದರಿಂದ ಪಾಪ ಬೆಳೆದಂಥ ರೈತ ಮತ್ತೇನು ಮಾಡುವುದಕ್ಕೂ ದಿಕ್ಕು ತೋಚದೆ ಸಿಕ್ಕಿದಷ್ಟು ಸಿಗಲಿ ಎಂದು ಮಾರಾಟ ಮಾಡಿ ಹೋಗುತ್ತಾನೆ. ಈ ರೀತಿಯಾಗಿ ನಿರಂತರವಾಗಿ ರೈತರ ಶೋಷಣೆ ನಡೆಯುತ್ತಾ ಇದೆ.

ಇನ್ನು ಭೂಕಂದಾಯ ವಸೂಲು ಮಾಡುವ ವಿಚಾರದಲ್ಲಿ, ನಮ್ಮ ರಾಜ್ಯ ಸರ್ಕಾರದವರು ರೈತರಿಗೆ ನೋಟೀಸ್‌ಗಳನ್ನು ಕಳುಹಿಸಿಕೊಟ್ಟಿರುತ್ತಾರೆ. ಹತ್ತಾರು ವರ್ಷಗಳ ಬಾಕಿ ಎಲ್ಲವನ್ನೂ ಸೇರಿಸಿ ಒಂದೇ ಕಂತಿನಲ್ಲಿ ಕೊಡಬೇಕೆಂದು ವಸೂಲು ಮಾಡುವ ನೊಟೀಸ್ ಕಳುಹಿಸಿಕೊಟ್ಟಿರುತ್ತಾರೆ. ನಮ್ಮ ಮಾನ್ಯ ಮುಖ್ಯ ಮಂತ್ರಿಗಳು ಹೊಸದಾಗಿ ಬಂದ ಸಂದರ್ಭದಲ್ಲಿ ಹೊಸ ಸರ್ಕಾರ ಅಸ್ತಿತ್ವಕ್ಕೆ ಬಂದಾಗ, ನಾನು ಮೈಸೂರಿಗೆ ಹೋಗುತ್ತಾ ಇರಬೇಕಾದರೆ, ಮಧ್ಯೆ ಶ್ರೀರಂಗಪಟ್ಟಣದ ಹತ್ತಿರ ರೈತರು ರಸ್ತೆಯಲ್ಲಿ ನಮ್ಮನ್ನು ಅಡ್ಡಗಟ್ಟಿ ವಿಷಯವನ್ನು ತಿಳಿಸಿದರು. ಒಂದೇ ಕಂತಿನಲ್ಲಿ ಭೂಕಂದಾಯವನ್ನು ಕಟ್ಟಬೇಕೆಂದು ಬಲತ್ಕಾರ ಮಾಡುತ್ತಿದ್ದಾರೆಂದು ತಿಳಿಸಿದರು. ಸರ್ಕಾರದವರು ರೈತರ ಸಮಸ್ಯೆಗಳನ್ನು ಗಮನಕ್ಕೆ ತೆಗೆದುಕೊಂಡು ಇದರ ಬಗ್ಗೆ ಅಧ್ಯಯನ ಮಾಡಬೇಕು. ಹತ್ತಾರು ವರ್ಷಗಳ ಕಂದಾಯವನ್ನು ಒಮ್ಮೆಲೇ ರೈತರ ಮೇಲೆ ಹೇರಿ ವಸೂಲು ಮಾಡತಕ್ಕಂಥ ಕ್ರಮ ಸರಿಯಲ್ಲ. ಕಾನೂನುಗಳನ್ನು ಮಾಡಿದ್ದರೂ ಜಾರಿಗೆ ತರುವಾಗ ತೊಂದರೆಯಾಗದಂತೆ ನೋಡಿಕೊಳ್ಳಬೇಕು. ಕೆಲವು ಸಂದರ್ಭಗಳಲ್ಲಿ ನೀರನ್ನು ಕಾಲುವೆಗಳಲ್ಲಿ ಬಿಟ್ಟೇ ಇರುವುದಿಲ್ಲ. ತೆರಿಗೆ ಮಾತ್ರ ಕೊಡಬೇಕೆಂದು ವಸೂಲು ಮಾಡತಕ್ಕಂಥ ಕ್ರಮ ಸರಿಯಾದುದಲ್ಲ. ನೀರು ಕೊಡದಿದ್ದರೂ ತೆರಿಗೆಯುನ್ನು ಹಾಕುವುದು ಎಂದರೆ ಏನು ಅರ್ಥ. ಜವಾಬ್ದಾರಿಯನ್ನು ಅಧಿಕಾರಿಗಳಿಗೆ ಕೊಟ್ಟ ಮೇಲೆ, ಅದನ್ನು ದುರುಪಯೋಗಪಡಿಸಿ ಕೊಳ್ಳತಕ್ಕಂಥ ಕ್ರಮವನ್ನು ಅನುಸರಿಸಬಾರದೆಂದು ಹೇಳುತ್ತೇನೆ. ಎರಡು ವರ್ಷಗಳ ಹಿಂದೆ ಜನತಾ ಸರ್ಕಾರ ಅಧಿಕಾರದಲ್ಲಿದ್ದಾಗ ಒಂದು ಕಿಲೋ ಗ್ರಾಂ ಸಕ್ಕರೆಯ ಬೆಲೆ ಎರಡೂವರೆ ರೂಪಾಯಿಗಳು ಇತ್ತು. According to Economic Survey of Karnataka after two years of price stability, the prices have started raising. ಈವತ್ತಿನ ದಿವಸ ತಮಿಳುನಾಡಿನಿಂದ ಕಳ್ಳಭಟ್ಟಿ ಸಾರಾಯಿ ತಯಾರು ಮಾಡಲು ಬರತಕ್ಕಂಥ ಬೆಲ್ಲದ ಬೆಲೆ ನಾಲ್ಕೂವರೆ ರೂಪಾಯಿಯಾಗಿರುತ್ತದೆ. ಹಿಂದೆ ಜನತಾ ಸರ್ಕಾರವಿದ್ದಾಗ ಈ ನಾಲ್ಕೂವರೆ ರೂಪಾಯಿಗೆ ಎರಡು ಕೆ.ಜಿ. ಸಕ್ಕರೆ ಸಿಕ್ಕುತ್ತಿತ್ತು.

ಇಂಥ ಪರಿಸ್ಥಿತಿಯಿಂದ ಬೆಲೆಗಳು ಏರುವುದಕ್ಕೆ ಸಾಧ್ಯತೆ ಇದೆ. ಇವತ್ತು ನೀವು ಯೂರಿಯಾ ಬೆಲೆಯನ್ನು ಏರಿಸಿದ್ದೀರಿ. ಇದಕ್ಕೆ ಕಾರಣ ಏನು? ನಮ್ಮಲ್ಲಿ ಯೂರಿಯ ಉತ್ಪಾದನೆಗೆ ಏನಾದರೂ ತೊಂದರೆ ಇದೆಯೆ? ಕಳೆದ 5–6 ತಿಂಗಳಿಂದ ಮಂಗಳೂರು ಫರ್ಟಿಲೈಸರ್ ಫ್ಯಾಕ್ಟರಿಯವರಿಗೆ ಕರೆಂಟ್ ಕೊಟ್ಟಿಲ್ಲ. ಏತಕ್ಕೆ ಕೊಡಲಿಲ್ಲ ಅಂದರೆ, ಇವರಿಗೆ ಕರೆಂಟ್ ಕೊಟ್ಟರೆ ಇವರ ಯೂರಿಯ ಉತ್ಪಾದನೆ ಜಾಸ್ತಿಯಾಗುತ್ತದೆ. ರೈತರು ಇವರು ತಯಾರಿಸಿದ್ದನ್ನೇ ತೆಗೆದುಕೊಳ್ಳುತ್ತಾರೆ. ಇವರಿಗೆ ಕರೆಂಟ್ ಕೊಡದೇ ಹೋದರೆ ಜುವಾರಿ ಕೆಮಿಕಲ್ಸ್ ಅಂದರೆ ಬಿರ್ಲಾರವರ ಫ್ಯಾಕ್ಟರಿಯಿಂದ ಉತ್ಪತ್ತಿಯಾಗುವ ಯೂರಿಯಾವನ್ನು ರೈತರು ತೆಗೆದುಕೊಳ್ಳುತ್ತಾರೆ. ಬಿರ್ಲಾ ಫ್ಯಾಕ್ಟರಿಯಿಂದ ತಯಾರಾದ ಯೂರಿಯ ಖರ್ಚಾಗಲಿ ಎಂಬ ಉದ್ದೇಶದಿಂದ ಈ ರೀತಿ ನಿರಂತರವಾಗಿ ಅಕ್ರಮಗಳು ನಡೆದುಕೊಂಡು ಬರುತ್ತಿವೆ. ವಿಧಾನಸೌಧದ ಸುತ್ತ ಬೇಲಿ ಹಾಕಿಕೊಂಡು ಒಳಗಡೆ ಕೂತುಕೊಳ್ಳತಕ್ಕ ಸರ್ಕಾರ ಇದ್ದರೆ ಇನ್ನೇನಾಗುತ್ತದೆ. ಇವತ್ತು ರೈತರು ತಮಗೆ ಬೇಕಾದ ಎತ್ತುಗಳನ್ನು ತೆಗೆದುಕೊಳ್ಳುವುದಕ್ಕೇ ಆಗಲೀ ನೇಗಿಲು ತೆಗೆದುಕೊಳ್ಳುವುದಕ್ಕೇ ಆಗಲಿ ಹೋದರೆ ಸಾಧ್ಯವಾಗುತ್ತಿಲ್ಲ. ಇವತ್ತು ಏನಾಗಿದೆ ಎಂದರೆ, ನೀವು ಗೊತ್ತು ಮಾಡಿರತಕ್ಕ ಬೆಲೆಗೆ ಭತ್ತವನ್ನು ಕೊಡುತ್ತೇವೆಂದು ರೈತರೇ ಬಂದರೂ, ನಿಮ್ಮ ಏಜೆನ್ಸಿಗಳು ತೆಗೆದುಕೊಳ್ಳುತ್ತಿಲ್ಲ. ಮಾರ್ಕೆಟ್‌ನಲ್ಲಿ ಬೆಲೆಗಳು ದಿನೇ ದಿನೇ ಕುಸಿಯುತ್ತಿವೆ. ಮಧ್ಯವರ್ತಿಗಳ ಕೈಗೆ ರೈತರು ಸಿಕ್ಕಿ ಯಾವ ದಿಕ್ಕಿನಲ್ಲಿ ಹೋದರೂ ಸಾಯುವ ಸ್ಥಿತಿಗೆ ಬಂದಿರುವುದರಿಂದ ಇನ್ನು ನಾವು ಬದುಕಿರುವುದಕ್ಕಿಂತ ಸಾಯುವುದೇ ಮೇಲೆಂದು ಒಂದು ನಿರ್ಧಾರಕ್ಕೆ ಬಂದಿದ್ದಾರೆ. ಈಗ ರೈತರು ಪೊಲೀಸರ ವಿರುದ್ಧ ತಿರುಗಿದ್ದಾರೆ. ಮೊನ್ನೆ ಶ್ರೀನಿವಾಸಪುರದಲ್ಲಿ ಒಬ್ಬ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಮನೆಗೆ ನುಗ್ಗಿದರು. ಇನ್ನೊಬ್ಬ ಸಬ್ ಇನ್‌ಸ್ಪೆಕ್ಟರನ್ನು ಹೊಡೆದಿದ್ದಾರೆ. ಅವನು ಆಸ್ಪತ್ರೆಗೆ ಹೋದ. ಪೊಲೀಸರು ನ್ಯಾಯವನ್ನು ಪರಿಪಾಲನೆ ಮಾಡುವುದಕ್ಕೆ ಇದ್ದಾರೆ. ನಮ್ಮ ಮನೆಯಲ್ಲಿ ಕಳ್ಳತನ ಮುಂತಾದ ಅವಘಡಗಳು ಆದರೆ ತಕ್ಷಣ ಪೊಲೀಸ್ ಸ್ಟೇಷನ್‌ಗೆ ಫೋನ್ ಮಾಡುತ್ತೇವೆ. ಅನ್ಯಾಯ ಅಕ್ರಮಗಳನ್ನು ಮಾಡುವವರಿಗೆ ನಿಮ್ಮ ಸರ್ಕಾರೀ ಅಧಿಕಾರಿಗಳು ರಕ್ಷಣೆ ಕೊಡುತ್ತಿದ್ದಾರೆ. ನಮಗೆ ಪೊಲೀಸರ ಬಗ್ಗೆ ಗೌರವ ಇದ್ದು, ನಾವು ಅವರಿಗೆ ನಮಸ್ಕಾರ ಮಾಡುವಂತಿರಬೇಕು. ಪೊಲೀಸಿನವರೂ ಕೂಡ ಅದೇ ರೀತಿ ನಾಗರೀಕರ ಬಗ್ಗೆ ಸೌಹಾರ್ದದಿಂದ ಇರಬೇಕು. ಆದರೆ ಇವತ್ತಿನ ಪರಿಸ್ಥಿತಿ ಏನಾಗಿದೆ ಎಂದರೆ, ಪೊಲೀಸರು ನಮ್ಮನ್ನು ಕಂಡ ಕೂಡಲೇ ಗುಂಡು

ಹಾಕಿ ಸಾಯಿಸುತ್ತಾರೆ. ಆದ್ದರಿಂದ ಪೊಲೀಸರು ನಮ್ಮನ್ನು ಕೊಲ್ಲುವುದಕ್ಕೆ ಮೊದಲು ನಾವೇ ಅವರನ್ನು ಕೊಂದುಬಿಡೋಣ ಎನ್ನುವ ಮನೋಭಾವನೆ ಜನರಲ್ಲಿ ಬಂದಿದೆ. ಇಂಥ ಘಟನೆಗಳು ಒಂದಲ್ಲೊಂದು ರೀತಿಯಲ್ಲಿ ನಡೆಯುತ್ತಿರುವುದನ್ನು ನಾವು ದಿನನಿತ್ಯ ಪತ್ರಿಕೆಗಳಲ್ಲಿ ನೋಡುತ್ತಿದ್ದೇವೆ. ಇಷ್ಟಾದರೂ ಪೊಲೀಸಿನವರದ್ದು ಏನೂ ತಪ್ಪಿಲ್ಲ ಎಂದು ಸರ್ಕಾರದವರು ಬ್ರೇನ್ ವಾಷ್ ಮಾಡಿಕೊಂಡು ಬರುತ್ತಿದ್ದಾರೆ. ಬಾಯಲ್ಲಿ ನೋಡಿದರೆ ಕಾನೂನು ಉಲ್ಲಂಘನೆ ಮಾಡಿದವರ ಮೇಲೆ ತೀವ್ರ ಕ್ರಮ ತೆಗೆದುಕೊಳ್ಳುತ್ತೇವೆಂದು ಮಾನ್ಯ ಮುಖ್ಯ ಮಂತ್ರಿಯವರು ಹೇಳುತ್ತಿರುತ್ತಾರೆ. ಪೊಲೀಸರ ಬಗ್ಗೆ ನೀವು ಈ ರೀತಿ ಹೇಳುವುದಾದರೆ, ಡೀಮಾರಲೈಸ್ ಆಗುತ್ತದೆಂದು ಹೇಳಿದರು. ಹಾಗಾದರೆ ಪೊಲೀಸರಿಗೆ ಕಾನೂನು, ಕಾಯಿದೆ ಇಲ್ಲವೆ? ಪೊಲೀಸರು ಮಾಡತಕ್ಕ ಅಕ್ರಮಗಳನ್ನು ಸಕ್ರಮಗಳೆಂದು ನಾವು ತಿಳಿದುಕೊಳ್ಳಬೇಕೆ? ಜನತೆಗೆ ರಕ್ಷಣೆಯನ್ನು ಕೊಡುವುದಕ್ಕೆ ನಿಮ್ಮಿಂದಾಗುತ್ತದೆಯೇ ಎಂದು ನಿಮ್ಮನ್ನು ನಾವು ಕೇಳಬೇಕಾಗಿದೆ. ಇವತ್ತು ನಮ್ಮ ಕರ್ನಾಟಕ ರಾಜ್ಯದ ಪೊಲೀಸರು ನಿಷ್ಠೆ ಹಾಗೂ ದಕ್ಷತೆಗೆ ಬಹಳ ಹೆಸರುವಾಸಿಯಾಗಿದ್ದಾರೆ. ಒಳ್ಳೆಯ ಸುಸಂಸ್ಕೃತ ಪೊಲೀಸ್ ಅಧಿಕಾರಿಗಳಿದ್ದಾರೆ. ಅಂಥ ಪೊಲೀಸ್‌ನವರನ್ನು ರಾಜಕಾರಣಿಗಳು, ಮಂತ್ರಿಗಳು, ಶಾಸಕರು ತಮಗೆ ಅನುಕೂಲವಾಗುವ ರೀತಿಯಲ್ಲಿ ಬಳಸಿಕೊಂಡು ಪೊಲೀಸರ ಹೆಸರನ್ನೇ ಕೆಡಿಸುತ್ತಿದ್ದಾರೆ. ಈ ಸರ್ಕಾರದವರೇ ಅಲ್ಲ. ಹಿಂದಿನ ಎಲ್ಲ ಸರ್ಕಾರಗಳೂ ಕೂಡ ಹೀಗೆ ಮಾಡಿಕೊಂಡು ಬಂದಿವೆ. ಎಷ್ಟೋ ಜನ ಅಯೋಗ್ಯ ಪೊಲೀಸರಿಗೆ ಪ್ರೊಮೋಷನ್ ಕೊಟ್ಟಿದ್ದಾರೆ. ಪ್ರಭಾವಿ ವ್ಯಕ್ತಿಗಳ ಹಿಂದೆ ಹಗಲೂ ರಾತ್ರಿ ತಿರುಗುವವರಿಗೆ ಪ್ರೊಮೋಷನ್ ಕೊಟ್ಟಿದ್ದಾರೆ. ನಿಷ್ಠೆಯಿಂದ ಕೆಲಸ ಮಾಡತಕ್ಕವರಿಗೆ ಏನೂ ಕೊಟ್ಟಿಲ್ಲ. That one man, Sri Bhinder, a criminal of emergency, was brought there by superce'ding 142 Police Officers. ಈ ರೀತಿ ನಡೆಯುತ್ತಿದೆ. ನಾನು ಆಗಲೇ ಹೇಳಿದಂತೆ ಪೊಲೀಸ್‌ರಲ್ಲಿ ಒಳ್ಳೆಯ ಹಾಗೂ ಪ್ರಜ್ಞಾವಂತ ಜನರು ಬಹಳವಾಗಿದ್ದಾರೆ.

**ಸಭಾಪತಿಯವರು :** ನೀವು ವಿಷಯವನ್ನು ಬಿಟ್ಟು ಬೇರೆ ಮಾತನಾಡುವುದಕ್ಕೆ ದಯವಿಟ್ಟು ಹೋಗಬೇಡಿ.

**ಶ್ರೀ ಎ.ಕೆ. ಸುಬ್ಬಯ್ಯ :** ರೈತರು ಅಲ್ಲಿ ಸತ್ತಿದ್ದಾರೆ. ಅವರಿಗೆ ಪರಿಹಾರವನ್ನು ಕೊಡಿ. ಜುಡಿಷಿಯಲ್ ಎನ್‌ಕ್ವೈರಿ ಮಾಡಿ. ದಕ್ಷತೆಯಿಂದ ಅಧಿಕಾರವನ್ನು ನಡೆಸಲು

ಶಕ್ತಿ ಇದ್ದರೆ ನಡೆಸಿ, ಆ ಶಕ್ತಿ ನಿಮ್ಮಲ್ಲಿಲ್ಲದಿದ್ದರೆ ಸುಮ್ಮನೆ ನೀವಾದರೂ ಇಳಿದು ಹೊರಟು ಹೋಗಿ. ಆದರೆ ಜನರಿಗೆ ಮಾತ್ರ ಅನ್ಯಾಯ ಮಾಡಬೇಡಿ. ನಿಮಗೆ ಜನರು ಓಟು ಕೊಟ್ಟಿಲ್ಲ. ಅವರು ಓಟು ಕೊಟ್ಟಿರುವುದು ಶ್ರೀಮತಿ ಇಂದಿರಾಗಾಂಧಿಯವರಿಗೆ, ಜನರು ನಿಮ್ಮನ್ನು ಏನಾದರೂ ಕೇಳಿದರೆ, ನೀವು ನಮಗೆ ಓಟು ಕೊಟ್ಟಿಲ್ಲ. ನೀವು ಓಟು ಕೊಟ್ಟಿರುವುದು ಇಂದಿರಾಗಾಂಧಿಯವರಿಗೆ, ಆದ್ದರಿಂದ ನೀವು ಅವರನ್ನೇ ಹೋಗಿ ಕೇಳಿಕೊಳ್ಳಿ ಎಂದು ಹೇಳಿ. ವಿಧಾನಸೌಧಕ್ಕೆ ಸುತ್ತ ಬೇಲಿ ಹಾಕಿಸಿಕೊಂಡು ಕೂತುಕೊಳ್ಳತಕ್ಕ ಸರ್ಕಾರ, ಜನರಿಗೆ ಉಪಕಾರ ಮಾಡದೆ ಸುಮ್ಮನೆ ಭಾರವಾಗಿರತಕ್ಕ ಸರ್ಕಾರ ರಾಜ್ಯದಲ್ಲಿರಬಾರದು. ನಾವೇ ಆಗಲೀ, ನೀವೇ ಆಗಲಿ, ಆಡಳಿತಕ್ಕೆ ಬಂದ ಮೇಲೆ ಶುದ್ಧವಾದ ಆಡಳಿತವನ್ನು ನಡೆಸಿಕೊಂಡು ಹೋಗಬೇಕು. ಇಲ್ಲದಿದ್ದರೆ. ಆ ಸ್ಥಾನವನ್ನು ಬಿಟ್ಟು ಕೆಳಗಿಳಿದು ಹೊರಟುಹೋಗಬೇಕು. ಒಂದು ವೇಳೆ ನೀವು ಈ ಕೆಲಸವನ್ನು ಮಾಡದಿದ್ದರೆ ಜನರೇ ಇಳಿಸುತ್ತಾರೆ. ಒಂದಿಲ್ಲೊಂದು ದಿವಸ ರಾಜಕಾರಣಿಗಳನ್ನು ಜನಗಳೇ ಹಿಡಿದುಕೊಂಡು ಹೊಡೆಯುವ ಕಾಲ ಬರುತ್ತದೆ. ನಾವು ಆಡಳಿತವನ್ನು ಚೆನ್ನಾಗಿ ನಡೆಸುತ್ತಿದ್ದೇವೆಂದು ನೀವು ತಿಳಿದುಕೊಂಡಿರಬಹುದು. ಆದರೆ ನಿಮಗಿಂತಲೂ, ನಮಗಿಂತಲೂ ಆಡಳಿತವನ್ನು ಚೆನ್ನಾಗಿ ನಡೆಸಬಲ್ಲ ನಿಷ್ಠಾವಂತ ರಾಜಕಾರಣಿಗಳು ನಮ್ಮ ರಾಜ್ಯದಲ್ಲಿದ್ದಾರೆ. ಇದನ್ನು ಮರೆಯಬಾರದು. ನ್ಯಾಯಾಂಗ ತನಿಖೆ ಮಾಡುವ ವಿಚಾರದಲ್ಲಿ ಹೇಳುವುದಾದರೆ ಇದು ಒಂದು ರೀತಿಯ ಕ್ಲೋರೋಫಾರಂ ಕೊಟ್ಟಂತೆ ಅಷ್ಟೆ. ತುಮಕೂರಿನಲ್ಲಿ ಹಲ್ಲೆ ನಡೆಯಿತು. ಕಾರ್ಮಿಕರ ಮೇಲೆ ಹಲ್ಲೆ ನಡೆಯಿತು. ನ್ಯಾಯಾಂಗ ತನಿಖೆ ಮಾಡಿ ಎಂದು ಹೇಳಿದ್ದಕ್ಕೆ ನಮ್ಮನ್ನು ಜೈಲಿಗೆ ಕಳುಹಿಸಲು ಪ್ರಯತ್ನ ಮಾಡಿದಿರಿ. ಚಿಕ್ಕಮಗಳೂರಿನಲ್ಲಿ ಗಲಭೆಯಾದುದಕ್ಕೆ ನ್ಯಾಯಾಂಗ ತನಿಖೆಯಾಗಬೇಕೆಂದು ಹೇಳಿದಾಗ, ಅದಕ್ಕೆ ಆಜ್ಞೆಯೂ ಆಯಿತು. ತನಿಖೆಯ ವರದಿಯೂ ಬಂತು. ಆದರೆ ಅದರ ಪ್ರತಿಫಲ ಮಾತ್ರ ಕ್ಲೋರೋಫಾರಂ ಕೊಟ್ಟಂತಾಯಿತು. ಈ ಪ್ರಕರಣದಲ್ಲಿ ನ್ಯಾಯಾಂಗ ತನಿಖೆ ನಡೆಸುವುದು, ಬಿಡುವುದು ನಿಮಗೆ ಸೇರಿದ್ದು. ಅಲ್ಲಿ ನಡೆಯುತ್ತಿರುವ ಚಳುವಳಿ ನೀರಿನ ತೆರಿಗೆ ಹಾಕಿರುವುದರ ವಿರುದ್ಧವಾಗಿ ಮತ್ತು ಬೆಲೆಗಳು ಏರುತ್ತಿರುವುದರ ವಿರುದ್ಧ ಇವತ್ತು ನೀವು ಬೆಲೆಗಳನ್ನು ಇಳಿಸದಿದ್ದರೆ ಜನರು ಇನ್ನೂ ಉಗ್ರವಾಗಿ ಚಳುವಳಿ ಮಾಡುತ್ತಾರೆ. ಬೆಲೆಗಳು ಏರುತ್ತಿರುವುದರಿಂದ ಜನ ಸಾಮಾನ್ಯರು ಕೆಳಮಟ್ಟದಲ್ಲಿರತಕ್ಕ ಜನರು ಬದುಕುವುದಕ್ಕೆ ಸಾಧ್ಯವಾಗುತ್ತಿಲ್ಲ. ಕಡಲೆಕಾಯಿ ಎಣ್ಣೆ 6 ರೂಪಾಯಿ ಇದ್ದುದು ಈಗ 12 ರೂಪಾಯಿ ಆಗಿದೆ. ಬೇಳೆ

2 ರೂಪಾಯಿ ಇದ್ದುದು 6–7 ರೂಪಾಯಿ ಆಗಿದೆ. ಪ್ರತಿಯೊಂದು ದಿನಬಳಕೆ ವಸ್ತುಗಳ ಬೆಲೆಯೂ ಏರುತ್ತಿದೆ. ನಾನು ಆಗಲೇ ಹೇಳಿದಂತೆ ಏರುತ್ತಿರುವ ಪದಾರ್ಥಗಳ ಬೆಲೆಯನ್ನು ಇಳಿಸುವುದಕ್ಕೆ ಕ್ರಮ ತೆಗೆದುಕೊಳ್ಳಿ. ಅದು ನಿಮ್ಮಿಂದಾಗದಿದ್ದರೆ ನೀವಾದರೂ ಕೆಳಗೆ ಇಳಿಯಿರಿ. ವಿರೋಧಪಕ್ಷದ ಸದಸ್ಯರುಗಳು ನಿಮಗೆ ಲೆಕ್ಕಕ್ಕೇ ಇಲ್ಲವಾಗಿದೆ. ನಿಮಗೆ ಮರ್ಯಾದೆಯಂತೂ ಇಲ್ಲವೇ ಇಲ್ಲ. ಗೌರವವಂತೂ ಗೊತ್ತೇ ಇಲ್ಲ. ಈಗ ನಮ್ಮ ವಿರುದ್ಧ ನಿಮ್ಮ ಕಾರ್ಯಾಚರಣೆ ನಡೆದಿದೆ. ಎಲ್ಲಿ ನೋಡಿದರೂ ರಾಜಕೀಯ, ರಿಕ್ರೂಟ್‌ಮೆಂಟ್ ಕಮಿಟಿ ತೆಗೆದುಕೊಂಡರೆ ಅಲ್ಲೂ ನಿಮ್ಮವರೇ, ಬೇರೆ ಇನೊಂದು ಕಮಿಟಿ ತೆಗೆದುಕೊಂಡರೆ ಅಲ್ಲೂ ನಿಮ್ಮವರೆ, ಟ್ರಿಬ್ಯುನಲ್‌ನಲ್ಲೂ ನಿಮ್ಮವರೇ,....

**ಸಭಾಪತಿಯವರು :** ತಾವು ವಿಷಯವನ್ನು ಬಿಟ್ಟು ರಿಕ್ರೂಟ್‌ಮೆಂಟ್ ಕಮಿಟಿ ವಿಚಾರ ಮಾತನಾಡುತ್ತಿದ್ದೀರಿ. ದಯವಿಟ್ಟು ವಿಷಯದ ಬಗ್ಗೆ ಮತನಾಡಿ.

**ಶ್ರೀ ಎ.ಕೆ. ಸುಬ್ಬಯ್ಯ :** ಮಾನ್ಯ ಸಭಾಪತಿಯವರೆ, ಕಾಂಗ್ರೆಸ್(ಐ)ನವರ ರಾಜಕೀಯ ಎಲ್ಲೆಲ್ಲೂ ಇದೆ. ಎಲ್ಲ ಕಡೆಯೂ ಇವರೇ ಇದ್ದಾರೆಂಬುದಕ್ಕೆ ಹೇಳಿದೆ ಅಷ್ಟೆ. ಇವತ್ತು ತಮ್ಮ ಮುಖಾಂತರ ಹೇಳುತ್ತಿದ್ದೇನೆ. ಅವರು ಈ ಘಟನೆಯ ಬಗ್ಗೆ ಜುಡಿಷಿಯಲ್ ಎನ್‌ಕ್ವೈರಿ ಮಾಡುವುದಕ್ಕೆ ಮೊದಲು ಏರುತ್ತಿರತಕ್ಕ ಬೆಲೆಗಳನ್ನು ಇಳಿಸಲು ಏರ್ಪಾಡು ಮಾಡಬೇಕು. ಈಗಾಗಲೇ ಹಾಲಿನ ದರವನ್ನು ಏರಿಸುತ್ತಿರುವ ಬಗ್ಗೆ ಚಳುವಳಿ ಆಗುತ್ತಿದೆ. ಇನ್ನೊಂದು ಕಡೆ ಕ್ಯಾಟಲ್ ಫೀಡ್ಸ್ ರೇಟ್ ಜಾಸ್ತಿಯಾಗಿದೆ. ಆದ್ದರಿಂದ ಹಾಲಿನ ಬೆಲೆಯನ್ನು ಜಾಸ್ತಿ ಮಾಡಬೇಕೆಂದು ಮೈಸೂರಿನಲ್ಲಿ ಜನ ಈಗಾಗಲೇ ಬೀದಿಗೆ ಇಳಿಯುತ್ತಿದ್ದಾರೆ. ಅಲ್ಲಿ ನಾಲ್ಕು ಜನ ಸತ್ತಿದ್ದಾರೆ. ಇನ್ನು ಮೈಸೂರಿನಲ್ಲಿ ಇಬ್ಬರು ಸಾಯಬೇಕೇ? ಆದ್ದರಿಂದ ಸರ್ಕಾರ ಕೂಡಲೇ ಎಚ್ಚೆತ್ತು ಹಾಲಿನ ಬೆಲೆಯನ್ನುಏರಿಸಬೇಕು. ಹಸು ಸಾಕುವವರ ಗತಿ ಏನಾಗಿದೆ ಎಂದು ಯಾರಾದರೂ ಯೋಚನೆ ಮಾಡಿದ್ದೀರಾ? ಕ್ಯಾಟಲ್ ಫೀಡ್ ಬೆಲೆ ಇಳಿಸಬೇಕು. ಇನ್ನು ಹೋಟೆಲ್ ತಿಂಡಿ ಬೆಲೆ ಇಳಿಸಬೇಕು. ಅಕ್ಕಿ ಬೆಲೆ ಏರಿಸಿದರೆ ಹೇಗೆ? ಎಣ್ಣೆ ಬೆಲೆ ಇಳಿಸಬೇಕು. ಈ ರೀತಿಯಲ್ಲಿ ಹಲವಾರು ಸಮಸ್ಯೆಗಳು ರಸ್ತೆಗೆ ಇಳಿದಿವೆ. ಇದೇ ರೀತಿ ಮುಂದುವರಿದರೆ ಪರಿಸ್ಥಿತಿ ಉಲ್ಬಣವಾಗುತ್ತದೆ. ಆದ್ದರಿಂದ ಇದರ ಬಗ್ಗೆ ಒಂದು ನಿರ್ದಿಷ್ಟವಾದ ಕಾರ್ಯಕ್ರಮ ತೆಗೆದುಕೊಳ್ಳಲೇಬೇಕು. ಇನ್ನು ಸ್ಮಗ್ಲರ್‌ಗಳ ಹಿಡಿತದಲ್ಲಿ ಸರ್ಕಾರ ಸಿಕ್ಕಿಹಾಕಿಕೊಂಡಿದೆ. ಯಾರನ್ನು ನಮ್ಮ ಮಾನ್ಯ

ಮುಖ್ಯಮಂತ್ರಿಗಳು ಜೈಲಿಗೆ ಕಳುಹಿಸುತ್ತೇವೆಂದು ಹೇಳಿದ್ದರೋ ಅವರು ಜೈಲಿಗೆ ಹೋಗಲಿಲ್ಲ? ಒಬ್ಬೊಬ್ಬ ಸ್ಮಗ್ಲರ್ ಒಂದೊಂದು ಡಿಪಾರ್ಟ್‌ಮೆಂಟ್ ನಡೆಸುತ್ತಿದ್ದಾನೆ. ಇವರನ್ನು ಹಿಡಿತದಲ್ಲಿಟ್ಟುಕೊಂಡಿದ್ದಾರೆ. ಆದ್ದರಿಂದ ಈ ಸ್ಮಗ್ಲರ್ಸ್ ಇರಕೂಡದು. ಬೆಲೆ ಇಳಿಸುವಂಥಾದ್ದನ್ನು ಈ ಸದನದಲ್ಲಿ ಘೋಷಣೆ ಮಾಡಬೇಕು. ಅಲ್ಲಿ ರೈತನ ಸಮಸ್ಯೆ ಇದೆ. ನೀರಿಗೆ ತೆರಿಗೆ ಹಾಕುವಾಗ ನ್ಯಾಯವಾಗಿದ್ದನ್ನು ಬಿಟ್ಟು ಅನ್ಯಾಯವಾಗಿರುವ ತೆರಿಗೆಯನ್ನು ತೆಗೆದು ಹಾಕಿ. ಇದು ಸರಿಯಾಗಿ ತೀರ್ಮಾನವಾಗುವವರೆಗೆ ತೆರಿಗೆ ವಸೂಲಾತಿಯನ್ನು ಮಾಡುವುದಿಲ್ಲವೆಂದು ಹೇಳಿದರೆ ಅಲ್ಲಿ ಪರಿಸ್ಥಿತಿ ಉಲ್ಬಣಗೊಳ್ಳುವುದಿಲ್ಲ. ಇದು ಸರ್ಕಾರದ ಹೊಣೆಗಾರಿಕೆ. ಅಹಿತಕರ ಘಟನೆ ಬಗ್ಗೆ ಸರ್ಕಾರ ಕ್ಷಮೆಯಾಚನೆ ಮಾಡಬೇಕು. ಇನ್ನು ಕೆಲವು ಮಂತ್ರಿಗಳನ್ನು ತೆಗೆದು ಹಾಕಿ 30 ಲಕ್ಷ ರೂಪಾಯಿ ಅವ್ಯವಹಾರ ನಡೆದಿದೆ. ಎಂದರೆ ನಮಗೆ 60 ಲಕ್ಷ ರೂಪಾಯಿ ಅವ್ಯವಹಾರ ಮಾಡುವವರು ಬೇಕು. ಅಂತಹವರೇ ಒರಲಿ. ಎಂದು ಹೇಳುವ ಮಟ್ಟಕ್ಕೆ ಹೋಗುವುದಾದರೆ ಸರ್ಕಾರಕ್ಕೆ ಸಂಪೂರ್ಣವಾದ ಜವಾಬ್ದಾರಿ ಇಲ್ಲವೆಂದಾಯಿತು. ಸರ್ಕಾರವು ಸಂಪೂರ್ಣ ಜವಾಬ್ದಾರಿ ಇಟ್ಟುಕೊಂಡು ಆಡಳಿತವನ್ನು ನಡೆಸಬೇಕು. ಸರ್ಕಾರವು ಇನ್ನು ಮುಂದೆಯಾದರೂ ಜವಾಬ್ದಾರಿಯಿಂದ ವರ್ತಿಸುತ್ತೇವೆಂದು ಕರ್ನಾಟಕದ ಜನತೆಯನ್ನು ಕ್ಷಮಾಪಣೆ ಕೇಳಬೇಕೆಂದು ಹೇಳುತ್ತೇನೆ.

## ಮಾಡಿರುವ ತಪ್ಪಿಗೆ ಪ್ರಾಯಶ್ಚಿತ್ತ : ರಾಜೀನಾಮೆ

**22ನೇ ಜುಲೈ 1980**

## (21–7–80ರಂದು ನವಲಗುಂದ, ನರಗುಂದ ಮತ್ತು ಗದಗ್‌ನಲ್ಲಿ ಬಂದ್ ಸಂಬಂಧ ಸಂಭವಿಸಿದ ಗಲಭೆಯಲ್ಲಿ ಮೃತರಾದವರ ಕುರಿತು)

**ಶ್ರೀ ಎ.ಕೆ. ಸುಬ್ಬಯ್ಯ:** ಅರ್ಥ ಸಚಿವರು ಕೊಟ್ಟ ಹೇಳಿಕೆಯನ್ನು, ನಾನು ಗಮನಿಸಿದೆ ಮತ್ತು ಕೇಳಿದೆ. ಅಲ್ಲಿ ನಡೆದಿರತಕ್ಕಂಥ ಘಟನೆ ಸಾಮಾನ್ಯವಾದುದಲ್ಲ. ಅಲ್ಲಿ ಮೂರು ಜನ ಪೊಲೀಸ್ ಅಧಿಕಾರಿಗಳು ಮತ್ತೆ ಇಬ್ಬರು ರೈತರನ್ನು ಆಹುತಿ ತೆಗೆದುಕೊಂಡಿದೆ. ಇದು ಈ ಸರ್ಕಾರ ಅಸ್ತಿತ್ವಕ್ಕೆ ಬಂದ ಮೇಲೆ ನಡೆದಿರುವ ದೊಡ್ಡ ದುರಂತ. ಈ ದುರಂತಕ್ಕೆ ಜವಾಬ್ದಾರರು ಯಾರೆಂದರೆ ಯಾರ ಆಡಳಿತ ನಿರ್ವಹಣೆಯಲ್ಲಿ ವಿಫಲತೆ ಜೊತೆಗೆ ಆಡಳಿತ ನಡೆಸುವ ಬಗ್ಗೆ ನಿರ್ಲಕ್ಷ್ಯ ಮತ್ತು ಅಸಾಮರ್ಥ್ಯತೆ ಇದೆಯೋ ಅವರು ಇವತ್ತು ಈ ಘಟನೆಗೆ ಕಾರಣ. 3–4 ತಿಂಗಳಿಂದ ಶಾಂತಿಯುತವಾಗಿ ರೈತರ ಸಮಸ್ಯೆ ಬಗ್ಗೆ ಚಳುವಳಿ ನಡೆದಿದ್ದರೂ ಈ ಸರ್ಕಾರ ಅಸ್ತಿತ್ವದಲ್ಲಿ ಇದ್ದರೂ ಏನು ಪ್ರಯತ್ನ ಇದರ ಬಗ್ಗೆ ಮಾಡಿದೆ? ಸರ್ಕಾರವು ಜವಾಬ್ದಾರಿ ಹೊರುವುದಕ್ಕೆ ತಯಾರಿಲ್ಲ. ಆದ್ದರಿಂದ I fix the responsibility on the Chief Minister who is in charge of the Home Ministry and who is all in this Karnataka he is mainly responsible for this unfortunate episode. ಪೊಲೀಸರು ಸತ್ತಿದ್ದಾರೆ. ಈಗ ಮೊನ್ನೆ ಗಲಾಟೆಯಲ್ಲಿ ನಮ್ಮನ್ನು ಕಾಪಾಡಬೇಕೆಂದು ನಮಗೆ ಇಲ್ಲಿ ರಕ್ಷಣೆ ಇಲ್ಲ ಎಂದು ಹೇಳಿದಾಗ, ಟೆಲಿಫೋನ್ ಮುಖಾಂತರ ಸುದ್ದಿ ತಿಳಿದ ಮೇಲೆ ರಕ್ಷಣೆ ಕೊಡಲಿಕ್ಕೆ ಹೋದಂತಹ ಸಂದರ್ಭದಲ್ಲಿ ಸಾಯುತ್ತಾ ಇರುವುದು ಮತ್ತು ಪೊಲೀಸರು ಸಾಯುವುದು ಒಳ್ಳೆಯದಲ್ಲ. ಇದರಲ್ಲಿ ಪೊಲೀಸ್ ಎಕ್ಸೆಸ್ ಇದೆಯೋ ಇಲ್ಲವೋ ಇದು ತನಿಖೆ ಮಾಡುವಂತಹ ವಿಚಾರ. ಈಗ ನಡೆದಿರತಕ್ಕಂತಹ ಘಟನೆ ಬಗ್ಗೆ ಸಂಪೂರ್ಣವಾದ ಅನುಕಂಪ ಇದೆ. ಇಂತಹ ಒಂದು ದುರ್‌ಘಟನೆ ಮತ್ತು Non performance of this Government is the main cause to exposed the anger of the agriculturists. These poor farmers have been agitating peacefully for the past 4 months. But to-day the situation turned violent due to non-functioning of this Government. The

Government is sleeping and is not able to take decisions. The Government has deaf ears to hear the problems of the agriculturists. It is a Government worth the name. Can we call this a Government which cannot maintain law and order in our state. ಈ ಸರ್ಕಾರ ಸಂಪೂರ್ಣವಾಗಿ ನಿರ್ಲಕ್ಷ್ಯ ರೀತಿಯಿಂದ ನಡೆದುಕೊಂಡಿದೆ. ಯಾವಾಗಲೂ ಯಾವ ಜನ ಇಂತಹ ಘಟನೆಗಳಲ್ಲಿ ಭಾಗಿಯಾಗಿರುತ್ತಾರೆ ಅವರು ಕೊಡತಕ್ಕಂಥಹ ವರದಿಯನ್ನು ಇಲ್ಲಿ ಸರ್ಕಾರ ಹೇಳುತ್ತದೆ. ಆದ್ದರಿಂದ ನಾನು ಇವತ್ತು ಹೇಳುತ್ತೇನೆ ಇದರ ಸಂಪೂರ್ಣ ಜವಾಬ್ದಾರಿ ಹೊತ್ತು, ಜುಡಿಷಿಯಲ್ ಎನ್‌ಕ್ವೈರಿಯಿಂದ ಯಾರು ಅಪರಾಧಿ ಇರುತ್ತಾರೆ ಅವರಿಗೆ ಪ್ರಾಯಶ್ಚಿತ್ತ ಆಗಲೇಬೇಕು.... Therefore, I demand that this Government should resign. Nothing short of a resignation will satisfy the people. To at one your sins the Government must step down, let another Government take its place. ಈ ತರಹ ರೈತರ ಬೇಡಿಕೆಗಳ ಬಗ್ಗೆ ಸಂಪೂರ್ಣವಾಗಿ ನಿರ್ಲಕ್ಷ್ಯ ಮಾಡಿದ್ದಾರೆ. ಇದು ಜನತಾ ವಿರೋಧಿ ಸರ್ಕಾರ. ಆದ್ದರಿಂದ ಈ ಘಟನೆಯ ಹಿನ್ನೆಲೆಯಲ್ಲಿ ನಡೆದಿರುವುದನ್ನು ನೋಡಿದರೆ ಈ ಸರ್ಕಾರ ರಾಜೀನಾಮೆ ಕೊಡಲೇಬೇಕು. ಹಿಂದೆ ರೈಲ್ವೆ ಆಕ್ಸಿಡೆಂಟ್ ನಡೆದಾಗ ಆಗ ರೈಲ್ವೆ ಮಂತ್ರಿಗಳಾಗಿದ್ದ ಶ್ರೀಲಾಲ್ ಬಹದ್ದೂರ್‌ಶಾಸ್ತ್ರಿಯವರು ರಾಜೀನಾಮೆ ನೀಡಿದ್ದರು. ಈಗ ಕರ್ನಾಟಕ ರಾಜ್ಯದಲ್ಲಿ ರೈತರ ದುರಂತಗಳು ನಡೆದಿರುವಾಗ ಮುಖ್ಯಮಂತ್ರಿಗಳು ಮೊಟ್ಟ ಮೊದಲು ರಾಜೀನಾಮೆ ಕೊಡಬೇಕು. ಏತಕ್ಕೆಂದರೆ, ಮುಖ್ಯ ಮಂತ್ರಿಗಳೇ ಗೃಹಮಂತ್ರಿಗಳಾಗಿದ್ದಾರೆ. ಇವರು ಮಾಡಿದಂತಹ ತಪ್ಪಿಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಲು ರಾಜೀನಾಮೆ ಕೊಡುವುದು ಸೂಕ್ತ. ಆ ರೀತಿ ಈ ಸರ್ಕಾರ ರಾಜೀನಾಮೆ ಕೊಡದಿದ್ದರೆ ಜನ ಮುಂದುವರಿಯಬೇಕಾಗುತ್ತದೆ. ಮತ್ತು ಎಚ್ಚರಿಕೆ ಕೊಡಬೇಕಾಗುತ್ತದೆ. ಇದನ್ನು ಸರ್ಕಾರ ಗಮನಿಸಬೇಕು. What an irresponsible Government. We have not come across this type of Government since 30 years of our independence. This Government has no moral right to continue in power. I demand that this Government should resign.

# ಭಾಗ – ೩

# ಕಂಡು ಬಲ್ಲವರ ಸದಾಶಯ ನುಡಿಗಳು

***IT'S NOT ONLY WHAT IS SAID THAT'S IMPORTANT, BUT ALSO WHO SAYS IT.***

## ಎ.ಕೆ. ಸುಬ್ಬಯ್ಯ ಸಿಂಬಲ್ ಆಫ್ ಜಸ್ಟೀಸ್

ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿ 24 ವರ್ಷಗಳ ಕಾಲ ಕಾರ್ಯ ನಿರ್ವಹಿಸಿದ ಮತ್ತು 1978–80ರ ಅವಧಿಯಲ್ಲಿ ವಿಧಾನಪರಿಷತ್ತಿನ ವಿರೋಧ ಪಕ್ಷದ ನಾಯಕರಾಗಿ ಅನ್ಯಾಯಗಳ ವಿರುದ್ಧ ಗುಡುಗಿದ ಸುಬ್ಬಯ್ಯನವರ ವ್ಯಂಗ್ಯ ಮಿಶ್ರಿತವಾದ, ನಿಷ್ಠುರವಾದ ಭಾಷಣಗಳನ್ನು ಆಲಿಸಲು ಗ್ಯಾಲರಿಯಲ್ಲಿ ಜನಜಂಗುಳಿಯ ನೂಕುನುಗ್ಗಲಿದ್ದದ್ದು ಈಗ ಇತಿಹಾಸ ಮಾತ್ರ. ಸಾರ್ವಜನಿಕ ಭಾಷಣಗಳಲ್ಲಿಯೂ ಅವರ ಹರಿತವಾದ ಮಾತು ನೊಂದವರಿಗೆ ಸಾಂತ್ವನ ನೀಡುವಂತಿದ್ದರೆ ಶೋಷಕರಿಗೆ ಎದೆ ಬಗೆಯುವಂತಿರುತ್ತಿತ್ತು.

**ವಿಜಯ್ ಪೂಣಚ್ಚ ತಂಬಂಡ**

## ಗ್ರೇಟ್ ಫೈಟರ್ – ಸುಬ್ಬಯ್ಯ

ಎ.ಕೆ. ಸುಬ್ಬಯ್ಯ ಈಸ್ ಎ ಫೈಟರ್. ಅವರೊಬ್ಬ ದೊಡ್ಡ ಹೋರಾಟಗಾರ. ಅವರಿಗೆ ಫೈಟ್ ಮಾಡುವ ನೇಚರ್ ಇದೆ. ಅವರು ಸ್ವಭಾವತಃ ಹೋರಾಟ ಮಾಡುವ ಗುಣ ಹೊಂದಿದ್ದಾರೆ. ತನಗೆ ಸರಿ ಅನ್ನಿಸಿದ್ದರ ಪರವಾಗಿ ಹೋರಾಟ ಮಾಡದೇ ಬಿಡುವುದಿಲ್ಲ. ಹೋರಾಟವು ತನಗೆ ಪ್ರತಿಕೂಲ ಅಥವಾ ಅಡ್ವರ್ಸ್ ಎಫೆಕ್ಟ್ ಮಾಡುತ್ತದೆ ಅಂತ ಗೊತ್ತಿದ್ದರೂ, ಗೊತ್ತಾದರೂ ಅದನ್ನು ಕೈ ಬಿಡುತ್ತಿರಲಿಲ್ಲ. ಅವರೊಬ್ಬ ಹಾನೆಸ್ಟ್ ಮ್ಯಾನ್. ಅವರ ಬಗ್ಗೆ ನನಗೆ ಅಪಾರ ಗೌರವ ಇದೆ.

**ಎಚ್.ಡಿ. ದೇವೇಗೌಡ**

## ಅಪರೂಪದ ರಾಜಕಾರಣಿ ಎ.ಕೆ. ಸುಬ್ಬಯ್ಯ

ಎ.ಕೆ. ಸುಬ್ಬಯ್ಯ ನಮ್ಮ ನಡುವೆ ಇರುವಂತಹ ಒಬ್ಬ ಭಿನ್ನ ಬಗ್ಗೆಯ ರಾಜಕಾರಣಿ. ರಾಜಕಾರಣಿ ಎಂದರೆ ಹೇಗಾದರೂ ಸರಿ; ಅಧಿಕಾರ ಹಿಡಿಯುವವರು ಅನ್ನುವ ಅರ್ಥ ಇರುವ ಇಂದಿನ ದಿನಗಳಲ್ಲಿ ಸುಬ್ಬಯ್ಯ ಬಹಳ ಅಪರೂಪದ ರಾಜಕಾರಣಿಯಾಗಿ, ಹೋರಾಟಗಾರರಾಗಿ ಕರ್ನಾಟಕ ರಾಜ್ಯದಲ್ಲಿ ತಮ್ಮದೇ ಆದ ಸ್ಥಾನ ಪಡೆದಿದ್ದಾರೆ. ಸುಬ್ಬಯ್ಯನವರಂತಹವರು ಯಾರಿದ್ದಾರೆ ಅನ್ನುವ ಪ್ರಶ್ನೆಗೆ

‘ಸುಬ್ಬಯ್ಯ ಮಾತ್ರ’ ಎಂದು ಉತ್ತರಿಸಬೇಕಾಗಿದೆ. ಈ ಪ್ರಶ್ನೆಗೆ ಬೇರೆ ಉತ್ತರವೇ ಇಲ್ಲ.

**ಎಂ.ಸಿ. ನಾಣಯ್ಯ**

## ಸಫಲ ರಾಜಕಾರಣಿ ಸುಬ್ಬಯ್ಯನವರು

ಯಾವಾಗಲೂ ತಪ್ಪನ್ನು ತಪ್ಪು ಅಂತ ಸರಿಯನ್ನು ಸರಿ ಅಂತ ಹೇಳುವ ನಿರ್ದಾಕ್ಷಿಣ್ಯ ವ್ಯಕ್ತಿತ್ವ ಸುಬ್ಬಯ್ಯನವರದು. ಪ್ರಾಮಾಣಿಕತೆ, ಮಾನವೀಯತೆ, ನಿರ್ದಾಕ್ಷಿಣ್ಯ, ನಿರ್ಭಿಡೆ ಅವರ ಸ್ವಭಾವಗಳು. ಆತ ಒಬ್ಬ ಅದ್ವಿತೀಯ ಮಾತುಗಾರ, ಪ್ರಾಮಾಣಿಕ ಚಿಂತಕ.

**ಡಿ.ಬಿ. ಚಂದ್ರೇಗೌಡ**

## ದಂತಕಥೆಯಾದವರು

ಕರ್ನಾಟಕದ ಗಂಡು ಮೆಟ್ಟಿದ ನೆಲ ಕೊಡಗಿನ ಕಾವೇರಿಯ ವರಪುತ್ರ ಶ್ರೀ ಎ.ಕೆ. ಸುಬ್ಬಯ್ಯ ಇಂದಿಗೂ ಘರ್ಜಿಸುತ್ತಲೇ ಇರುವ ರಾಜಕೀಯದ ಹುಲಿ. ವಯಸ್ಸು–83. ಅನಾರೋಗ್ಯ ಆದರೂ ತನ್ನತನವನ್ನು ಬಿಟ್ಟುಕೊಡದ ಶ್ರೀಸುಬ್ಬಯ್ಯ ನನ್ನಂಥಹ ಹಲವಾರು ರಾಜಕಾರಣಿಗಳಿಗೆ ಮಾರ್ಗದರ್ಶಕರಾದರೂ ಎಲ್ಲೋ ಬೆರಳೆಣಿಕೆಯ ನನ್ನಂಥಹವರು ಶ್ರೀ ಸುಬ್ಬಯ್ಯನವರ ನಿಷ್ಠೂರ ನಡೆಯ ಹಾದಿಯಲ್ಲೇ ಸಾಗುತ್ತಲೇ ಇದ್ದೇವೆ.

**ಅಡಗೂರು ಹೆಚ್. ವಿಶ್ವನಾಥ್**

## ಯುವಜನತೆಯ ಮಾರ್ಗದರ್ಶಿ

ಆಹಾರ ತಾರತಮ್ಯದ ವಿರುದ್ಧ ಧ್ವನಿ ಎತ್ತುವಂತೆ ಪ್ರೇರೇಪಣೆ ಮಾಡಿ ನಮ್ಮಂತಹವರಿಗೆ ಅಂದೇ ಮಾರ್ಗದರ್ಶನ ನೀಡಿದವರು ಶ್ರೀ ಸುಬ್ಬಯ್ಯನವರು. ಅದು ಇಂದಿಗೂ ಪ್ರಸ್ತುತವಾಗಿದೆ.

ಕರ್ನಾಟಕ ರಾಜ್ಯ ಕಂಡಂತಹ ವಿಚಾರವಂತ, ಹೋರಾಟದ ಹಿನ್ನೆಲೆಯುಳ್ಳ ಅಪರೂಪದ ಕೆಲವೇ ಕೆಲವು ರಾಜಕಾರಣಿಗಳಲ್ಲಿ ಶ್ರೀ ಸುಬ್ಬಯ್ಯನವರೂ ಒಬ್ಬರು. ಅವರು ಎಲ್ಲ ಕಾಲಕ್ಕೂ ವಿರೋಧ ಪಕ್ಷದ ನಾಯಕನಂತೆಯೇ ಇದ್ದರು. ಅದು ಏನೇ ಆದರೂ ಶ್ರೀ ಸುಬ್ಬಯ್ಯನವರ ಗಟ್ಟಿ ಧ್ವನಿ, ಜಾತಿರಹಿತ, ಶೋಷಣೆರಹಿತ, ಸಮಪಾಲು, ಸಮಬಾಳು, ಸಮಾನ ಅವಕಾಶದ, ಸುಖೀ ಸಮಾಜದ ಗುರಿಯತ್ತ ಸಾಗುತ್ತಿತ್ತು. ಅವರ ಮಾರ್ಗದರ್ಶನ ಸದಾ ಯುವ ಪೀಳಿಗೆಗೆ ಅವಶ್ಯ. ಶ್ರೀ ಸುಬ್ಬಯ್ಯನವರು ಆರೋಗ್ಯವಂತರಾಗಿ, ನೂರು ಕಾಲ ಬಾಳಿ, ಸಮಸ್ತ ನಾಡಿಗೆ ಮಾರ್ಗದರ್ಶನ ನೀಡಲಿ ಎಂದು ಆಶಿಸುತ್ತೇನೆ.

**ವಿ.ಎಸ್. ಉಗ್ರಪ್ಪ**

## ಎವರ್ ಗ್ರೀನ್ ಹೀರೊ ಸುಬ್ಬಯ್ಯ

ಎ.ಕೆ. ಸುಬ್ಬಯ್ಯನವರ ಜೊತೆಗಿನ ನನ್ನ ಸಂಬಂಧವು ಎರಡು ರೀತಿಯದು. ಮೊದಲನೆಯದಾಗಿ ನಾನು ಅವರನ್ನು ರಾಜಕೀಯ ಗುರು ಮತ್ತು ಮಾರ್ಗದಗರ್ಶಕ ಎಂದು ನೋಡುತ್ತೇನೆ. ಎರಡನೆಯದು ಅವರ ಜೊತೆಗಿನ ವೈಯಕ್ತಿಕ ಒಡನಾಟ. ನನಗೆ ಆಗ ಬೆಂಗಳೂರಿನಲ್ಲಿ ಇರಲಿಕ್ಕೆ ಜಾಗ ಕೂಡ ಇರಲಿಲ್ಲ. ಆಗ ಶಾಸಕರಿಗೆ ನೀಡಲಾಗುತ್ತಿದ್ದ ಜನರಲ್ ಹಾಸ್ಟೆಲ್ಲಿನ ತಮ್ಮ ರೂಮ್ ನನಗೆ ಬಳಸಲು ಸುಬ್ಬಯ್ಯನವರು ಬಿಟ್ಟುಕೊಟ್ಟಿದ್ದರು. ಒಮ್ಮೆ ಸುಬ್ಬಯ್ಯನವರು ವಿರಾಜಪೇಟೆಯಿಂದ ಹೊರಟು ರಾತ್ರಿಯ ಹೊತ್ತಿಗೆ ಜನರಲ್ ಹಾಸ್ಟೆಲ್ಗೆ ಬಂದಿದ್ದರು. ಆಗ ನಾನು ಒಳಗಡೆಯಿಂದ ಬೋಲ್ಟ್ ಹಾಕಿ ಮಲಗಿಬಿಟ್ಟಿದ್ದೆ. ಗಾಢನಿದ್ರೆಯಲ್ಲಿದ್ದೆ. ಹಲವು ಬಾರಿ ತಟ್ಟಿದರೂ ಮಲಗಿದ್ದ ನಾನು ಬಾಗಿಲು ತೆರೆಯಲಿಲ್ಲ. ಆ ದಿನ ಅವರು ಮತ್ತೊಂದು ಕಡೆ ಉಳಿದುಕೊಂಡು ಮರುದಿನ ಬೆಳಿಗ್ಗೆ ಬಂದರು. ಒಂಚೂರೂ ಬೇಜಾರು ಮಾಡಿಕೊಳ್ಳಲಿಲ್ಲ. ಆ ಬಗ್ಗೆ ಪ್ರಸ್ತಾಪ ಕೂಡ ಮಾಡಲಿಲ್ಲ. ಈ ಘಟನೆಯು ಅವರ ಸೌಜನ್ಯ ಮತ್ತು ಔದಾರ್ಯದ ಸ್ವಭಾವವನ್ನು ಪರಿಚಯಿಸುತ್ತದೆ.

**ಪಿ.ಜಿ.ಆರ್. ಸಿಂಧ್ಯಾ**

## ತಾಯಿ ಗುಣ ಇರುವ ಸುಬ್ಬಯ್ಯನವರು

ಎ.ಕೆ. ಸುಬ್ಬಯ್ಯ ಅಂದ ತಕ್ಷಣ ನನಗೆ ನೆನಪಿಗೆ ಬರುವುದು ಅವರ ಮಾತು. ಎ.ಕೆ. ಸುಬ್ಬಯ್ಯನವರ ಮಾತು ಅಂದರೆ ಗುಂಡು ಹೊಡೆದ ಹಾಗೆ. ಎಲ್ಲರೂ ಸುಬ್ಬಯ್ಯನವರ ಜೊತೆಗೆ ಮಾತನಾಡಲು, ಅವರನ್ನು ಎದುರು ಹಾಕಿಕೊಳ್ಳಲು ಹೆದರುತ್ತಿದ್ದರು. ನಾನು ವಿಧಾನ ಪರಿಷತ್ ಸದಸ್ಯಳಾದ ಮೇಲೆ ಹೇಗೆ ಮಾತನಾಡಬೇಕು ಎನ್ನುವುದನ್ನು ಕಲಿತೆ. ಅದು ಸುಬ್ಬಯ್ಯನವರಿಂದ ದೊರೆತ ಪ್ರೇರಣೆ. ಬಂಡಾಯ ಸಾಹಿತ್ಯದ ನೆಲೆಯಲ್ಲಿ ಬಂದವಳಾದ ನನಗೆ ಸುಬ್ಬಯ್ಯನವರ ಮಾತು ಬಹಳ ಇಷ್ಟ ಆಗುತ್ತಿತ್ತು. ಅವರೊಬ್ಬ ದೊಡ್ಡ ನಾಯಕ. ವಿರೋಧ ಪಕ್ಷದ ನಾಯಕನಾಗಿ ಬಹಳಷ್ಟು ಹಗರಣಗಳನ್ನು ಬಯಲಿಗೆ ಎಳೆದಿದ್ದಾರೆ. ಅವುಗಳನ್ನು ಅವರು ಒಂದು ತಾರ್ಕಿಕ ಅಂತ್ಯಕ್ಕೆ ತೆಗೆದುಕೊಂಡು ಹೋಗದೇ ಬಿಡುತ್ತಿರಲಿಲ್ಲ.

**ಬಿ.ಟಿ. ಲಲಿತಾನಾಯಕ್**

## ಉನ್ನತ ಪ್ರಜಾಪ್ರಭುತ್ವವಾದಿ

ನಾನು ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ಸುಬ್ಬಯ್ಯನವರ ಬಗ್ಗೆ ಕೇಳಿದ್ದೆ. ನಾನು ಮೊದಲು ಅವರನ್ನು ನೋಡಿದ್ದು ಮತ್ತು ಗುರುತಿಸಿದ್ದು, ಮೆಚ್ಚಿಕೊಂಡದ್ದು ಅವರೊಬ್ಬ ರಾಜಕಾಣಿಯಾಗಿ ಅಲ್ಲ. ಅಥವಾ ಒಬ್ಬ ನ್ಯಾಯವಾದಿಯೂ ಅಂತ ಅಲ್ಲ. ಸುಬ್ಬಯ್ಯ ಅವರ ಸೂಕ್ಷ್ಮಾತಿಸೂಕ್ಷ್ಮ ಮಾತುಗಳು ನನ್ನ ಮೇಲೆ ಅಪಾರ ರೀತಿಯಲ್ಲಿ ಪ್ರಭಾವ ಬೀರಿದವು. ಅವರೊಬ್ಬ ಶಾರ್ಪ್ ಸ್ಪೀಕರ್ ಮತ್ತು ಅತ್ಯುತ್ತಮ ವಾಗ್ಮಿ.

ಅವರು ವಯಸ್ಸಿನಲ್ಲಿಯೂ ವೃತ್ತಿಯಲ್ಲಿಯೂ ಸೀನಿಯರ್, ನಾನು ಜ್ಯೂನಿಯರ್. ರಾಮಕೃಷ್ಣ ಹೆಗಡೆಯವರ ಆಡಳಿತಾಧಿಯಲ್ಲಿ ಸುಬ್ಬಯ್ಯನವರು ಪುನಃ ವಕೀಲಿ ವೃತ್ತಿ ಆರಂಭಿಸಿ ಹೈಕೋರ್ಟ್‌ನಲ್ಲಿ ವಾದ ಮಾಡುತ್ತಿದ್ದರು. ಅವರು ಸಿದ್ಧತೆ ಇಲ್ಲದೆ ಎಂದೂ ವಾದವನ್ನು ಮಂಡಿಸುತ್ತಿರಲಿಲ್ಲ. ಕೇಸಿಗೆ ಸಂಬಂಧವಿಲ್ಲದ ವಿವರಗಳನ್ನೆಂದೂ ಅವರು ಕೋರ್ಟಿನ ಗಮನಕ್ಕೆ ತರದೆ ನೇರವಾಗಿ ಕೇಸಿಗೆ ಸಂಬಂಧಿಸಿದ ಕಾನೂನಾತ್ಮಕ ವಿಷಯಗಳನ್ನು ನೇರವಾಗಿ ಮಂಡಿಸುತ್ತಿದ್ದರು. ಸುಬ್ಬಯ್ಯನವರು ಕೋರ್ಟಿನಲ್ಲಿ ವಾದ ಮಂಡಿಸುತ್ತಾರೆ ಅಂದರೆ ಯಾವ ನ್ಯಾಯಾಧೀಶರೂ ಅವರನ್ನು ಲಘುವಾಗಿ ಪರಿಗಣಿಸುತ್ತಿರಲಿಲ್ಲ. ಅವರೊಬ್ಬ

respective advocate in the Court. ಯಾವಾಗಲೂ ಅವರ presentation powerful ಆಗಿರುತ್ತಿತ್ತು. powerful Advocacy ಅವರದು.

ಎ.ಕೆ. ಸುಬ್ಬಯ್ಯನವರು ತಮ್ಮ ಇಡೀ ಜೀವನದಲ್ಲಿ ಎಂದೂ ತಾವು ನಂಬಿದ ತತ್ವಗಳಿಗೆ ವಿರುದ್ಧವಾಗಿ ರಾಜೀ ಮಾಡಿಕೊಂಡವರಲ್ಲ. ತಮ್ಮ ರಾಜಕೀಯ ಹಾಗೂ ವೃತ್ತಿ ಜೀವನದಲ್ಲಿ ಯಾವುದೇ ರೀತಿಯ ಹಗರಣ ಇಲ್ಲದೇ ಬದುಕು ಸಾಗಿಸಿದವರು. ಯಾವಾಗಲೂ ಶೋಷಿತರ, ಅಲ್ಪಸಂಖ್ಯಾತರ, ದಲಿತರ ಪರವಾಗಿದ್ದರು.

ಶ್ರೀ ಸುಬ್ಬಯ್ಯನವರ ಪುತ್ರ ಪೊನ್ನಣ್ಣ ಅವರು ರಾಜಕೀಯದಲ್ಲಿ ಇಲ್ಲದಿದ್ದರೂ ಒಳ್ಳೆಯ ರೀತಿಯಲ್ಲಿ ವಾದ ಮಂಡಿಸುವ ವಕೀಲರಾಗಿ ಅತ್ಯುತ್ತಮ ಸಾಧನೆ ಮಾಡುತ್ತಿದ್ದಾರೆ. ಅವರೂ ಸಹ eminant Advocate ಎಂಬುದು ಖುಷಿಯ ಸಂಗತಿ.

ಎ.ಕೆ. ಸುಬ್ಬಯ್ಯನವರ ಜೊತೆಗಿನ ನನ್ನ ಒಡನಾಟ ನನ್ನ ತಿಳುವಳಿಕೆ, ಗ್ರಹಿಕೆ ಮತ್ತು ನಂಬಿಕೆಗಳನ್ನು ಸ್ಪಷ್ಟಗೊಳಿಸಿದೆ. ಅವರದು ಪ್ರಾಮಾಣಿಕತೆಯ ತುಂಬು ಜೀವನ.

**ನಾಗಮೋಹನ ದಾಸ್**

## ಸ್ವಾರ್ಥರಹಿತ ಪ್ರಾಮಾಣಿಕ ವ್ಯಕ್ತಿ

ಎ.ಕೆ. ಸುಬ್ಬಯ್ಯನವರಾಗಲಿ, ನಾನಾಗಲಿ ರಾಜಕೀಯ ಹಿನ್ನೆಲೆ ಅಥವಾ ಶ್ರೀಮಂತಿಕೆ ಇದ್ದಂತಹ ಕುಟುಂಬದಿಂದ ಬಂದವರಲ್ಲ. ನಾನು ರಾಜಕೀಯಕ್ಕೆ ಪ್ರವೇಶ ಮಾಡಿದ್ದು ಮತ್ತು ಆ ನಂತರದ ದಿನಗಳಲ್ಲಿ ಗ್ರಾಮ ಪಂಚಾಯಿತಿಯಿಂದ ಹಿಡಿದು, ತಾಲೂಕು ಅಭಿವೃದ್ಧಿ ಮಂಡಳಿ ಹಾಗೂ ಜಿಲ್ಲಾ ಪಂಚಾಯಿತಿಯ ಸದಸ್ಯನಾಗಿ ಆಯ್ಕೆಯಾದದ್ದು, ಸಹಕಾರ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸಿದ್ದು, ಜನತಾ ಪ್ರೌಢಶಾಲೆಯ ಅಧ್ಯಕ್ಷನಾದದ್ದು ಎಲ್ಲವೂ ಎ.ಕೆ. ಸುಬ್ಬಯ್ಯನವರ ಮಾರ್ಗದರ್ಶನದಿಂದ ಎಂಬುದನ್ನು ನಾನು ಸ್ಮರಿಸಿಕೊಳ್ಳುತ್ತೇನೆ. ಅವರ ಪ್ರಭಾವದಿಂದಲೇ ಈ ಎಲ್ಲಾ ಸ್ಥಾನಮಾನಗಳನ್ನು ನಾನು ಗಳಿಸಿಕೊಳ್ಳಲು ಸಾಧ್ಯವಾಯಿತು.

**ಚಕ್ಕೇರ ಕೆ. ಸೋಮಯ್ಯ**

## ಸಿದ್ಧಾಂತಕ್ಕೆ ಪ್ರಾಮುಖ್ಯತೆ ನೀಡಿದ ವ್ಯಕ್ತಿ

ಕೊಡಗಿನಂತಹ ಪುಟ್ಟ ಜಿಲ್ಲೆಯಿಂದ ಯಾವುದೇ ರಾಜಕೀಯ ಹಿನ್ನೆಲೆ, ಜಾತಿಯ ಹಿನ್ನೆಲೆ ಇಲ್ಲದೆ ಇರುವಂತಹ ವ್ಯಕ್ತಿಯೊಬ್ಬರು ರಾಜ್ಯ ಮಟ್ಟದಲ್ಲಿ ಬೆಳೆದದ್ದು ಮತ್ತು ರಾಷ್ಟ್ರ ರಾಜಕಾರಣದ ಪ್ರಮುಖ ರಾಜಕೀಯ ಪಕ್ಷದ ರಾಜ್ಯಾಧ್ಯಕ್ಷರಾದದ್ದು ಅವರ ಪ್ರತಿಭೆಗೆ ಸಾಕ್ಷಿಯಾಗಿದೆ. ಅವರ ವೈಯಕ್ತಿಕ ಸಾಮರ್ಥ್ಯದಿಂದಲೇ ಅವರು ರಾಷ್ಟ್ರೀಯ ನಾಯಕರುಗಳಾದ ಅಟಲ್ ಬಿಹಾರಿ ವಾಜಪೇಯಿ, ಎಲ್.ಕೆ. ಅದ್ವಾನಿ ಮುಂತಾದವರ ಸ್ನೇಹವನ್ನು ಗಳಿಸಿದ್ದರು.

ಕೊಡಗು ಜಿಲ್ಲೆಯ ಕೃಷಿಕ ವರ್ಗಕ್ಕೆ ಎ.ಕೆ. ಸುಬ್ಬಯ್ಯನವರ ಸಾರ್ವಜನಿಕ ಹೋರಾಟ ಹಾಗೂ ಕಾನೂನು ಹೋರಾಟದಿಂದ ಸಾಕಷ್ಟು ಅನುಕೂಲಗಳಾಗಿವೆ. ಕೊಡಗಿನ ಜಮ್ಮಾ ಬಾಣೆಯ ಸಮಸ್ಯೆಯನ್ನು ಇತ್ಯರ್ಥಪಡಿಸಿದ ಕೀರ್ತಿ ಸುಬ್ಬಯ್ಯನವರಿಗೆ ಸಲ್ಲಬೇಕು.

**ಮಾತಂಡ ಮೊಣ್ಣಪ್ಪ**

## ಸೌಹಾರ್ದತೆಯ ಸುಬ್ಬಯ್ಯ

ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ಬದಲಾವಣೆಗಾಗಿ ಶ್ರಮಿಸಿದ ಕೆಲವೇ ಮಹಾನ್ ವ್ಯಕ್ತಿಗಳ ಸಾಲಿನಲ್ಲಿ ಎ.ಕೆ. ಸುಬ್ಬಯ್ಯ ಅವರೂ ಒಬ್ಬರಾಗಿದ್ದಾರೆ. ಸಾಮಾಜಿಕ ಅನ್ಯಾಯ, ಅವಮಾನಗಳು ಮತ್ತು ಅನಾಚಾರಗಳು ನಡೆದ ಸಂದರ್ಭದಲ್ಲಿ ಸುಬ್ಬಯ್ಯ ಅವರು ಅದರ ವಿರುದ್ಧ ಧ್ವನಿ ಎತ್ತಿದವರಾಗಿದ್ದಾರೆ. ಅವರು ಯಾವುದೇ ಪಕ್ಷದಲ್ಲಿರಲಿ ಅಥವಾ ಸಂಘಟನೆಯಲ್ಲಿರಲಿ, ಪಕ್ಷ ಮೀರಿದ ಸಾಮಾಜಿಕ ನ್ಯಾಯದ ಧ್ವನಿಯಾಗಿ ಕಂಡು ಬರುತ್ತಾರೆ. ಕರ್ನಾಟಕದಲ್ಲಿ ಕೋಮು ಸೌಹಾರ್ದತೆಯ ಮತ್ತು ಸಮಾನತೆಯ ತತ್ವವನ್ನು ಎತ್ತಿ ಹಿಡಿದವರಲ್ಲಿ ಇವರು ಪ್ರಮುಖರಾಗಿದ್ದಾರೆ.

**ಇಂದಿರಾ ಕೃಷ್ಣಪ್ಪ**

## ನಿರ್ದಾಕ್ಷಿಣ್ಯತೆಯ ಸ್ಥಾಯಿ ಭಾವದಲ್ಲಿ...

ಎ.ಕೆ. ಸುಬ್ಬಯ್ಯ ಅವರು ಕರ್ನಾಟಕದ ಸಾಮಾಜಿಕ ಹಾಗೂ ರಾಜಕೀಯ ಬದುಕಿನಲ್ಲಿ ಅತ್ಯಂತ ಶಿಸ್ತುಬದ್ಧ ನಾಯಕರು. ಅವರು ಕೇವಲ ಆಕ್ಷೇಪಣೆ ಅಥವಾ ಆರೋಪ ಮಾಡಿ ದೂರ ಸರಿಯುವ ಜಾಯಮಾನದವರಲ್ಲ. ದಟ್ಟವಾದ ಮಾನವ ಪ್ರೀತಿಯನ್ನು ತುಂಬಿಸಿಕೊಂಡಿದ್ದರು. ಸರಳ ವ್ಯಕ್ತಿ ಆದ್ದರಿಂದ ಅವರು ಕುತಂತ್ರಿಗಳನ್ನು ಸಹಿಸುತ್ತಿರಲಿಲ್ಲ.

ಎ.ಕೆ. ಸುಬ್ಬಯ್ಯ ಅವರಂತಹ ಒಬ್ಬ ಹೃದಯವಂತ ಚಿಂತಕ ಮಾತ್ರ ಎಲ್ಲ ವಿಧವಾದ ಮಾನವೀಯ ಸಂಬಂಧಗಳಿಗೆ ಸ್ಪಂದಿಸಲು ಸಾಧ್ಯ. ಅಲ್ಲಿ ಶಬ್ದಗಳ ಮಾರಾಟವಿರುವುದಿಲ್ಲ. ಗಾಢವಾದ ವಿಷಾದ ಮತ್ತು ತಳಮಳವಿರುತ್ತದೆ.

**ಶೂದ್ರ ಶ್ರೀನಿವಾಸ**

## ಪುರುಷ ಸಿಂಹ

ಎ.ಕೆ. ಸುಬ್ಬಯ್ಯ ವಿಧಾನಪರಿಷತ್ತಿಗೆ ಕಾಲಿಡುವವರೆಗೆ ರಾಜ್ಯದಲ್ಲೊಂದು ವಿಧಾನಪರಿಷತ್ತು ಇದೆ. ಅಲ್ಲೂ ಶಾಸಕರಿರುತ್ತಾರೆಂಬ ವಿಚಾರ ಜನಸಾಮಾನ್ಯರಿಗೆ ಗೊತ್ತೇ ಇರಲಿಲ್ಲ. ತಲಕಾವೇರಿ ಅಮ್ಮನ ಆಣೆಗೂ ಗೊತ್ತಿರಲಿಲ್ಲ ಕಂಡ್ರಿ. ಪುಣ್ಯಾತ್ಮ ಯಾವ ಘಳಿಗೆಯಲ್ಲಿ ವಿಧಾನ ಪರಿಷತ್ತಿಗೆ ಕಾಲಿಟ್ಟರೋ, ಆ ಕ್ಷಣದಿಂದಲೇ ಸುದ್ದಿ ಮಾಡಲು ಶುರು ಹಚ್ಚಿದರು. ಅಂತಿಂಥ ಸುದ್ದಿಯಲ್ಲ ಸ್ವಾಮಿ, ಸರಕಾರವನ್ನು ಬೆತ್ತಲು ಮಾಡುವ ಸ್ಫೋಟಕ ಸುದ್ದಿ ಸರಮಾಲೆಯನ್ನು, ಕೆಲವು ಮಂತ್ರಿಗಳನ್ನು ಆಡಳಿತ ಪಕ್ಷದ ಕೆಲವು ಶಾಸಕರನ್ನು ಬೆತ್ತಲುಗೊಳಿಸಿ ಮಾನ ಹರಾಜು ಹಾಕಿದವರು ಈ ನಮ್ಮ ಸುಬ್ಬಯ್ಯ.

**ಗರುಡನಗಿರಿ ನಾಗರಾಜ**

## ಕೆಲವು ನೆನಪುಗಳು

ಎ.ಕೆ. ಸುಬ್ಬಯ್ಯನವರ ವೈಭವರಂಗ ಕರ್ನಾಟಕದ ಶಾಸಕಾಂಗದ ಮೇಲ್ಮನೆ. ಬಹಳಷ್ಟು ಸಲ ಅದು ಆಡಳಿತ ಪಕ್ಷ ಮತ್ತು ಎ.ಕೆ. ಸುಬ್ಬಯ್ಯ ಅವರ ನಡುವಿನ ರಣರಂಗವೂ ಆಗಿ ಬಿಡುತ್ತಿತ್ತು. ಎ.ಕೆ. ಸುಬ್ಬಯ್ಯ ಅವರು ಬೆತ್ತಲೆಗೊಳಿಸಿದ ಹಗರಣಗಳೇ ಅವರ ಕಾಳಜಿ, ಸತ್ಯಪ್ರಿಯತೆ ಹಾಗೂ ಧೈರ್ಯಗಳಿಗೆ ಸಾಕ್ಷಿ.

**ಡಾ॥ ಡಿ.ಬಿ. ರಾಮಚಂದ್ರಾಚಾರ್**

## ಹಲವಾರು ವಿಚಾರಗಳಲ್ಲಿ ಮೊದಲಿಗರು

ಕೊಡಗಿನ ಇಂದಿನ ರಾಜಕಾರಣಿಗಳಲ್ಲಿ ಯಾರಲ್ಲಿಯೂ ಇಲ್ಲದ ಒಂದು ಅಂಶ ಸುಬ್ಬಯ್ಯನವರಲ್ಲಿದೆ. ಅದೆಂದರೆ ಪ್ರಾಮಾಣಿಕತೆ. ಅವರಲ್ಲಿ 'ಹೊರಗೊಂದು ಒಳಗೊಂದು' ಎನ್ನುವ ಇಬ್ಬಂದಿತನವಿಲ್ಲ. ಅವರು ಏನನ್ನು ನಂಬುತ್ತಾರೋ ಅದನ್ನೇ ಹೇಳುತ್ತಾರೆ. ಏನನ್ನು ಹೇಳುತ್ತಾರೋ ಅದನ್ನೇ ಮಾಡುತ್ತಾರೆ. ಇಂದು ಕೊಡಗಿನ ಬಹುತೇಕ ಮುಖಂಡರುಗಳು ನುಡಿಯುವುದೊಂದು ನಡೆಯುವುದೊಂದು ಎನ್ನುವುದನ್ನು ಗಮನಿಸಿದಾಗ, ಸುಬ್ಬಯ್ಯನವರ ಈ ವಿಶಿಷ್ಟ ಗುಣವೊಂದೇ ಅವರನ್ನು ಇತರರಿಂದ ಪ್ರತ್ಯೇಕಿಸುತ್ತದೆ.

**ಡಾ॥ ಐ.ಆರ್. ದುರ್ಗಾ ಪ್ರಸಾದ್**

## ಮಾನವೀಯ ನೆಲೆಯ ಹೋರಾಟಗಾರ

ಎ.ಕೆ. ಸುಬ್ಬಯ್ಯ ಅಂದಾಗ ನಮಗೊಂದು ಆತ್ಮಸ್ಥೈರ್ಯ, ಮನೋಬಲ. ಹೋರಾಟಕ್ಕೆ ಒಂದು ಕಿಚ್ಚು. ಚಳುವಳಿಯ ಗುರಿಯೆಡೆಗೆ ಸ್ಪಷ್ಟತೆಯ ದಾರಿದೀಪ. ಬೆರಳ ಹಿಡಿದು ಮುನ್ನಡೆಸುವ ಆಪ್ತ ಸಲಹೆಗಾರ, ಜೊತೆಗಾರ, ನೊಂದಾಗ ಸಾಂತ್ವನಿಸುವ ವಾತ್ಸಲ್ಯ ತುಂಬಿರುವ ಮಾತೃ ಹೃದಯಿ. ಎದೆಗುಂದಿದಾಗ ಬೆನ್ನು ಚಪ್ಪರಿಸಿ ಆತ್ಮವಿಶ್ವಾಸ ತುಂಬುವ ಗುರು. ಚಳುವಳಿಯಲ್ಲಿ ಗೊಂದಲಗಳಿದ್ದಾಗ ತಮ್ಮ ವಿದ್ವತ್–ಪೂರ್ಣ ತರ್ಕ ಮತ್ತು ವಾಸ್ತವ ನೆಲೆಗಟ್ಟಿನ ಚರ್ಚೆಗಳ ಮೂಲಕ ಆಲೋಚನೆಗೆ ಹಚ್ಚುವ ತಪಸ್ವಿ. ತಮ್ಮ ವೈಶಿಷ್ಟ್ಯಪೂರ್ಣ ಶೈಲಿಯ ಮಾತುಗಾರಿಕೆ

ಮೂಲಕ ಹೇಳಬೇಕಾದ ವಿಷಯವನ್ನು ತನ್ನದೆ ಧಾಟಿಯಲ್ಲಿ ಜನ ಸಮೂಹಕ್ಕೆ ತಲುಪಿಸುವ ವಾಗ್ಮಿ. ಸತ್ಯ ಎಷ್ಟು ಕಠೋರವಾದರೂ, ವಿರೋಧಿಗಳನ್ನು ಸೃಷ್ಟಿಸಿದರೂ ವಾಸ್ತವ ತಿಳಿಸದೆ ವಿರಮಿಸದ ಪ್ರಖರ ಹಠವಾದಿ.

**ವಿ.ಪಿ. ಶಶಿಧರ್**

## ಸಮರ್ಥ ಸಂಘಟಕ

ಎ.ಕೆ. ಸುಬ್ಬಯ್ಯರವರ ಅಗಾಧ ಸಂಘಟನಾತ್ಮಕ ಶಕ್ತಿಯನ್ನು ನಾನು ನೋಡಿದ್ದು ಪಾಲೂರು ಹರಿಶ್ಚಂದ್ರ ದೇವಸ್ಥಾನವನ್ನು ವಿರೂಪಗೊಳಿಸಿದ ಹಿನ್ನೆಲೆಯಲ್ಲಿ ನಡೆದ ಕೋಮು ಗಲಭೆಗಳನ್ನು ವಿರೋಧಿಸಿ 2001ರ ಡಿಸೆಂಬರ್‌ನಲ್ಲಿ ನಡೆಸಿದ ಬೃಹತ್ ಪ್ರತಿಭಟನಾ ರ‍್ಯಾಲಿಯಲ್ಲಿ, ಕಣ್ಣೆದುರು ನಡೆಯುತ್ತಿರುವ ಅನ್ಯಾಯವನ್ನು ಪ್ರತಿಭಟಿಸುವ, ಸಂಪ್ರದಾಯದ ಮೌಢ್ಯಗಳನ್ನು ಪ್ರತಿರೋಧಿಸುವ ವ್ಯವಸ್ಥೆಯ ವಿನಾಶಕಾರಿ ಹುನ್ನಾರಗಳನ್ನು ಎದುರಿಸುವ, ನೋವುಂಡವರ ಮನಸ್ಸಿಗೆ ತಂಪನ್ನೆರೆಯುವ ಹಲವು ಹೋರಾಟಗಳನ್ನು ಎ.ಕೆ.ಎಸ್. ನಡೆಸಿದ್ದಾರೆ.

**ಕೆ.ಆರ್. ವಿದ್ಯಾಧರ್**

## ಅತಿಯಾದ ಪ್ರಾಮಾಣಿಕತನವೆ ಮುಳುವಾಯಿತು

ಎ.ಕೆ. ಸುಬ್ಬಯ್ಯ ರಾಜಕೀಯದಲ್ಲಿ ಅತೀ ಎತ್ತರಕ್ಕೆ ಬೆಳೆಯಬೇಕಾಗಿದ್ದ ವ್ಯಕ್ತಿ. ಇದನ್ನು ನಾನು ಅತ್ಯಂತ ಅಧಿಕಾರಯುತವಾಗಿ ಏಕೆ ಹೇಳುತ್ತಿದ್ದೇನೆಂದರೆ, ನಾನು ಎ.ಕೆ. ಸುಬ್ಬಯ್ಯನವರನ್ನು ಅತ್ಯಂತ ಹತ್ತಿರದಿಂದ ಬಲ್ಲ ವ್ಯಕ್ತಿ.

ಎ.ಕೆ. ಸುಬ್ಬಯ್ಯನವರಲ್ಲಿ ಇದ್ದಂತಹ ಧೈರ್ಯ, ಶುದ್ಧಹಸ್ತ, ಒಳ್ಳೆಯತನ ಹಾಗೂ ಅವರ ತಲೆಯಲ್ಲಿ ಇದ್ದಂತಹ ಸಾಮರ್ಥ್ಯ ಹಾಗೂ ಗಟ್ಟಿಗತನ ವಿರಳ ಸಮ್ಮಿಲನ. ಇವೆಲ್ಲವೂ ಒಟ್ಟಾಗಿ ಒಂದೇ ವ್ಯಕ್ತಿಯಲ್ಲಿ ಹೇಗೆ ಬಂತು ಎಂಬುದೇ ಬಹಳ ಆಶ್ಚರ್ಯದ ವಿಚಾರ. ಅವರು ಕಳ್ಳನನ್ನು ಯಾವುದೇ ಮುಲಾಜೂ ಇಲ್ಲದೇ ಕಳ್ಳ ಎಂದು ಹೇಳುತ್ತಿದ್ದರು. ಇದು ರಾಜಕೀಯದಲ್ಲಿ ಆಗುವುದಿಲ್ಲ. ಎ.ಕೆ.

ಸುಬ್ಬಯ್ಯನವರಂತಹ ನಾಯಕರು ಕರ್ನಾಟಕದ ಜನರಿಗೆ ಬೇಕಿರಲಿಲ್ಲ. ಅವರು ಮುಂಚೂಣಿಯಲ್ಲಿ ಇದ್ದಿದ್ದರೆ ಕರ್ನಾಟಕದ ಚಿತ್ರಣವೇ ಬದಲಾಗುತ್ತಿತ್ತು.

**ಚಂಗುಲಂಡ ಸೋಮಯ್ಯ**

## ಹಿಂದುತ್ವವಾದದ ವಿರೋಧಿ

ಇಂದಿಗೂ ಸುಬ್ಬಯ್ಯನವರು ಕರ್ನಾಟಕದಲ್ಲಿ ಕೋಮುವಾದಿ ವಿರೋಧಿ ರಾಜಕೀಯದ ಪ್ರಬಲ ಧ್ವನಿಯಾಗಿದ್ದಾರೆ. ಎಂತಹ ಗಂಭೀರ ಪರಿಸ್ಥಿತಿಯಲ್ಲಿಯೂ ಎದೆಗುಂದದೆ, ಸವಾಲುಗಳನ್ನು ಧೈರ್ಯವಾಗಿ ಎದುರಿಸುವ ಸುಬ್ಬಯ್ಯನವರ ಛಲ ಮತ್ತು ಸಾಮರ್ಥ್ಯ ಬರೇ ಹುಡಿ ವೀರಾವೇಶವಲ್ಲ. ಅಥವಾ ಪ್ರಚಾರಪ್ರಿಯತೆಯ ವರಸೆಯಲ್ಲ. ಯಾವತ್ತೂ ಅಧಿಕಾರಸ್ಥರನ್ನು ಓಲೈಸದೆ, ಭ್ರಷ್ಟಾಚಾರದ ಆಮಿಷಗಳಿಗೆ ಬಲಿಯಾಗದೆ ಅವರು ಕಾಪಾಡಿಕೊಂಡು ಬಂದ ಆಂತರಿಕ ನೈತಿಕ ಸ್ಥೈರ್ಯವೇ ಅವರ ಅಪೂರ್ವ ಎದೆಗಾರಿಕೆಯ ಮೂಲ ಸೆಲೆಯಾಗಿದೆ. ಅವರ ಸಮಕಾಲೀನರಲ್ಲಿ ಹಲವರು ಈಗಾಗಲೇ ನೇಪಥ್ಯಕ್ಕೆ ಜಾರಿದ್ದಾರೆ. ಹಲವರು ಗದ್ದುಗೆಯ ಸುಖದಲ್ಲಿ ಮೈಮರೆತಿದ್ದಾರೆ. ಆದರೆ ಸುಬ್ಬಯ್ಯನವರು ಮಾತ್ರ ಪ್ರತಿಯೊಂದು ಸಮಕಾಲೀನ ಸಂಗತಿಗಳಿಗೆ ಪ್ರತಿಕ್ರಿಯಿಸುತ್ತಾ, ಕ್ರಿಯಾಶೀಲರಾಗಿದ್ದಾರೆ.

**ಐ.ಆರ್. ಪ್ರಮೋದ್**

## ಬುದ್ಧಿವಂತ ಸುಬ್ಬಯ್ಯ

ಎ.ಕೆ. ಸುಬ್ಬಯ್ಯನವರು ಶಾಲಾ ದಿನಗಳಲ್ಲಿ ಶಾಲೆಯಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಚರ್ಚಾ ಸ್ಪರ್ಧೆಯಲ್ಲಿ ಸುಬ್ಬಯ್ಯ ಭಾಗವಹಿಸುತ್ತಿದ್ದರು. ಅವರ ಮಾತಿನ ಶೈಲಿ ಎಂತಹವರನ್ನೂ ಮರುಳು ಮಾಡುತ್ತಿತ್ತು. ಆಗಲೇ ಅವರು ಜನರನ್ನು ಆಕರ್ಷಿಸುವ ವಿಚಾರಗಳನ್ನು ಮತ್ತು ಧ್ವನಿಯನ್ನು ಪಡೆದಿದ್ದರು. ಅದು ಅವರಿಗೆ ದೈವದತ್ತವಾಗಿ ಬಂದಂತಹ ಒಂದು ಕೊಡುಗೆ ಆಗಿರಬಹುದು ಎಂಬುದು ನನ್ನ ಅನಿಸಿಕೆ. ಯಾರನ್ನೂ ಕೂಡ ಮಾತಿನ ಮೂಲಕ ಅವರು ಸೋಲಿಸುತ್ತಿದ್ದರು.

**ಮುಕ್ಕಾಟಿರ ಮಾದಪ್ಪ**

## ಪ್ರಜಾಪ್ರಭುತ್ವದ ಮೌಲ್ಯಗಳಿಗಾಗಿ ಹೋರಾಡಿದ ಶಕ್ತಿ

ಭಾರತದ ರಾಜಕಾರಣದಲ್ಲಿ ಅತ್ಯಂತ ಅಪರೂಪದ ವ್ಯಕ್ತಿ ಎ.ಕೆ. ಸುಬ್ಬಯ್ಯ ಎಂಬುದು ನಿರ್ವಿವಾದ. ಅವರು ಅಧಿಕಾರಕ್ಕಾಗಿ ಆಸೆಪಡಲಿಲ್ಲ. ಅಧಿಕಾರದ ರಾಜಕಾರಣವನ್ನು ಅವರು ಮಾಡಲೇ ಇಲ್ಲ. ಚುನಾವಣೆಗಾಗಿ ಚುನಾವಣಾ ಪ್ರಕ್ರಿಯೆಯನ್ನು ಮೈಲಿಗೆ ಮಾಡಿದ ವ್ಯಕ್ತಿ ಸುಬ್ಬಯ್ಯನವರಲ್ಲ. ಅವರು ತಾವು ನಂಬಿದ ಸಿದ್ಧಾಂತದ ಚೌಕಟ್ಟಿನಲ್ಲಿ ಬದುಕಿದವರು. ಅವರ ರಾಜಕೀಯ ಜೀವನವನ್ನು ನಾನು ಗಮನಿಸಿದ್ದೇನೆ.

**ಸಂಕೇತ್ ಪೂವಯ್ಯ**

## ದಮನಿತರ ಪರವಾದ ಧ್ವನಿ

ಜನಪರ ಕಾಳಜಿ, ಅನ್ಯಾಯದ ವಿರುದ್ಧದ ಸಿಟ್ಟು, ಜೊತೆಗೆ ಶೋಷಣೆ ರಹಿತ ಸಮಾಜ ನಿರ್ಮಾಣಗೊಳ್ಳಬೇಕೆಂಬ ತುಡಿತ ಉಳ್ಳಂತಹ ಹಿರಿಯ ಚೇತನ ಎ.ಕೆ. ಸುಬ್ಬಯ್ಯನವರು. ದಣಿವಿಲ್ಲದೆ, ಬಹುಮುಖ ಹೋರಾಟಗಳಲ್ಲಿ ತಮ್ಮನ್ನು ಇಂದಿಗೂ ತೊಡಗಿಸಿಕೊಂಡವರು4. ಹಿಂಸೆ, ಭ್ರಷ್ಟಾಚಾರ, ಕಂದಾಚಾರಗಳ ವಿರುದ್ಧ ಈಜುವಂತಹ ಧೈರ್ಯ ಹಾಗೂ ಮಾನವೀಯ ಕಳಕಳಿಯನ್ನು ತಮ್ಮ ಈ ವಯಸ್ಸಿನಲ್ಲಿಯೂ ಉಳಿಸಿಕೊಂಡಿರುವುದು ಸಾಮಾನ್ಯ ಸಾಧನೆಯಲ್ಲ. ಇಂತಹ ನೈತಿಕ ಬದ್ಧತೆ ಎಷ್ಟು ಮಂದಿ ರಾಜಕಾಣಿಗಳಲ್ಲಿದೆ?

**ಮೂರ್ನಾಡು ರಾಮಸ್ವಾಮಿ**

## ಪ್ರವಾಹದ ವಿರುದ್ಧದ ಈಜುಗಾರ

ಎ.ಕೆ. ಸುಬ್ಬಯ್ಯ ಒಬ್ಬ ವ್ಯಕ್ತಿ ಎಂದು ಭಾವಿಸಿದರೆ ಅದು ತಪ್ಪಾಗುತ್ತದೆ. ಅವರು ಒಂದು ಶಕ್ತಿ. ಎ.ಕೆ. ಸುಬ್ಬಯ್ಯ ಒಂದು ಸಂಸ್ಥೆ. ಅವರದು ಸಂಕೀರ್ಣ ವ್ಯಕ್ತಿತ್ವ. ಅವರು ಓರ್ವ ದಕ್ಷ ರಾಜಕಾರಣಿ, ಓರ್ವ ಬುದ್ಧಿವಂತ ಹಾಗೂ ಚಾಣಾಕ್ಷ ವಕೀಲ, ಓರ್ವ ಸಮಾಜಮುಖಿ ಚಿಂತಕ ಹಾಗೂ ಹೋರಾಟಗಾರ. ಪ್ರಗತಿಪರ ಕೃಷಿಕ ಹಾಗೂ ಅತ್ಯಂತ ಸರಳ ಜೀವಿ. ಯಾವುದೇ ಕ್ಷೇತ್ರವಿರಲಿ. ಅಲ್ಲಿ ಸುಬ್ಬಯ್ಯನವರು ತಮ್ಮ ಛಾಪನ್ನು ಬೀರುತ್ತಾರೆ.

ಎ.ಕೆ.ಸುಬ್ಬಯ್ಯ ಒಬ್ಬ ಮಹಾನ್ ಹೋರಾಟಗಾರ. ಕೊಡಗು ಜಿಲ್ಲೆಯಲ್ಲಿ ಹೋರಾಟ ಎಂಬುದೇ ಇಲ್ಲದಿದ್ದಂತಹ ಪರಿಸ್ಥಿತಿಯಲ್ಲಿ, ರಾಜ್ಯಮಟ್ಟದಲ್ಲಿ ಮತ್ತು ರಾಷ್ಟ್ರ ಮಟ್ಟದಲ್ಲಿ ಒಬ್ಬ ಹೋರಾಟಗಾರ ಎಂದು ಸುಬ್ಬಯ್ಯನವರನ್ನು ಪರಿಗಣಿಸಲಾಗುತ್ತಿದೆ. ಅವರು ಬೆಳೆದು ಬಂದಂತಹ ಪರಿಸರ, ಅವರನ್ನು ಕಾಡಿದ ಬಡತನ, ಅನುಭವಿಸಿದ ನೋವು ಹಾಗೂ ಅವಮಾನ ಅವರನ್ನು ಹೋರಾಟಗಾರರನ್ನಾಗಿ ಹಾಗೂ ಕುಲುಮೆಯಲ್ಲಿ ಹಾಕಿ ಸಿದ್ದಪಡಿಸಿದ ವ್ಯಕ್ತಿಯಾಗಿಸಿತು ಎಂಬುದು ನನ್ನ ಅಭಿಪ್ರಾಯ.

**ಬಿ.ಎನ್. ಮನು ಶೆಣೈ**

## ಸುಬ್ಬಯ್ಯ ನಿರಂತರ ಸ್ಫೂರ್ತಿಯ ನೆಲೆ, ಸೆಲೆ

ಕರ್ನಾಟಕದ ರಾಜಕೀಯ ಬದುಕಿನ ಅನೇಕ ನೆಲೆಗಳಲ್ಲಿ ಅನೇಕ ತೆರನಾಗಿ ತೊಡಗಿಸಿಕೊಂಡಿದ್ದರೂ ತಮ್ಮ ಅಂತಃಸ್ಸತ್ವದ ಪ್ರಖರತೆಯಿಂದಾಗಿ ವ್ಯಕ್ತಿತ್ವದ ತಾಜಾತನವನ್ನು ಉಳಿಸಿಕೊಂಡವರು ಶ್ರೀ ಎ.ಕೆ. ಸುಬ್ಬಯ್ಯನವರು.

ಬಾಲ್ಯ ಹಾಗೂ ವಿದ್ಯಾರ್ಥಿ ದೆಸೆಯಿಂದ ಶುರುಮಾಡಿ ಅವರ ಎಂಟು ದಶಕಗಳ ವಿವಿಧ ಮಜಲುಗಳನ್ನು ಗಮನಿಸಿದಾಗ ತೋರಿಕೆಗೆ ಸುಬ್ಬಯ್ಯನವರ ಜೀವನ ರೇಖೆ ಅಂಕುಡೊಂಕು ಅನ್ನಿಸಿದರೂ ಅಲ್ಲೊಂದು ಏಕಸೂತ್ರ ಕಾಣಿಸುತ್ತದೆ. ಆತ್ಮಾಭಿಮಾನ ಮತ್ತು ಅನ್ಯಾಯವನ್ನು ಎದುರಿಸುವ ಎದೆಗಾರಿಕೆ ಅವರ ವ್ಯಕ್ತಿತ್ವದ ಮೂಲ ಬೀಜಗಳೆಂದು ನನಗೆ ಅನ್ನಿಸುತ್ತದೆ.

**ಪ್ರೊ. ಚಂದ್ರಶೇಖರ ಪಾಟೀಲ**

## ಎ.ಕೆ. ಸುಬ್ಬಯ್ಯ : ಒಂದು ವ್ಯಕ್ತಿ ಚಿತ್ರ

ಎ.ಕೆ. ಸುಬ್ಬಯ್ಯನವರನ್ನು ಕುರಿತು ಆಳವಾಗಿ ಯೋಚಿಸುವವರು ವಿರಳ. ಇವರ ಹೇಳಿಕೆಗಳನ್ನು ಪತ್ರಿಕೆಗಳ ಮುಖಪುಟದಲ್ಲಿ ಹಾಕುವ ಪತ್ರಕರ್ತರೂ ಈ ಸುಬ್ಬಯ್ಯ ಎಂಬ ವಿಚಿತ್ರ ಮನುಷ್ಯನ ಒಳ್ಳೆಯ ಮತ್ತು ಕೆಟ್ಟ ಗುಣಗಳ ಬಗ್ಗೆ ಚಿಂತಿಸುವುದಿಲ್ಲ. ಸುಬ್ಬಯ್ಯ ರಾಜಕೀಯದಲ್ಲಿ ಹೇಗಿರಬಾರದು ಎಂಬುದಕ್ಕೆ ಉದಾಹರಣೆಯಾಗಿರುವಂತೆಯೇ ಹೇಗಿರಬೇಕು ಎಂಬುದಕ್ಕೆ ಸಾಕ್ಷಿಯೂ ಆಗಿದ್ದಾರೆ.

ಯಾವುದೇ ರಾಜಕೀಯ ಲಾಭಕ್ಕಾಗಿ, ಸಮಯಸಾಧಕತನಕ್ಕಾಗಿ ಮಾತಾಡದೆ ನಿಷ್ಠೂರತೆಯಿಂದ, ನಿಷ್ಠೆಯಿಂದ ಮಾತಾಡುತ್ತಾರೆ. ಅಧಿಕಾರದಲ್ಲಿರುವ ಪಕ್ಷವನ್ನು ಇವತ್ತು ಟೀಕಿಸಿ ರಾಜಿ, ಹೊಂದಾಣಿಕೆ ಮಾಡಿಕೊಂಡು ನಾಳೆ ರಂಗವನ್ನೇ ಬದಲಿಸುವ ಪ್ರವೃತ್ತಿ ಸುಬ್ಬಯ್ಯನವರಲ್ಲಿಲ್ಲ.

**(10–4–1986ರಂದು ಲಂಕೇಶ್ ಪತ್ರಿಕೆಯ ಟೀಕೆ ಟಿಪ್ಪಣಿಯಲ್ಲಿ ಪ್ರಕಟವಾಗಿರುವ ಬರಹ)**

**ಪಿ. ಲಂಕೇಶ್**

## ಸತ್ಯನಿಷ್ಠತೆಯ ಪ್ರತೀಕ

ಅಪ್ಪಟ ಪಾರದರ್ಶಕ ವ್ಯಕ್ತಿತ್ವದ ಅಜ್ಜಿಕುಟ್ಟಿರ ಕಾರ್ಯಪ್ಪ ಸುಬ್ಬಯ್ಯಣ್ಣ ಕನ್ನಡನಾಡು ಕಂಡ ಅಪ್ರತಿಮ ಧೀರ: ಜಾತ್ಯಾತೀತ ತತ್ತ್ವಗಳಿಗಾಗಿ ಪ್ರಾಣದ ಹಂಗುತೊರೆದು ಹೋರಾಡುವ ಗುಣಗಳುಳ್ಳವರು. ಈಗಂತೂ ಸಕಲರ ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರತೆಯ ಹಂಬಲದಲ್ಲಿಯೇ ಹಣ್ಣಾಗಿರುವವರು. ಅನ್ಯಾಯ, ಭ್ರಷ್ಟತೆ ಮತ್ತು ಆಷಾಢಭೂತಿತನಗಳಲ್ಲಿ ಮುಳುಗಿದ ಅಲ್ಪರು ಸುಬ್ಬಯ್ಯನವರ ಹೆಸರು ಕೇಳಿದರೆ ಸಾಕು ಭಯಭೀತರಾಗುತ್ತಾರೆ.

**ಪ್ರೊ. ಕಾಳೇಗೌಡ ನಾಗವಾರ**

## AKS - The Irrepressible

It indeed is a very difficult task to write about a person as versatile as Sri. A.K. Subbaiah. Having been, if I might consider me so, a close follower for over two decades now, it is difficult to do justice to his towering personality in a write-up like this. He has stridden the political and legal firmament in Karnataka for six decades now. He is an able advocate, a parliamentarian of merit, a liberal thinker, a fighter for public causes and above all a

noble, generous and responsive soul. Contemporary political, legal and social arena in the State, especially in Kodagu, would be incomplete without him, not withstanding what his adversaries, more so the proponents of hindutva, claim him to be.

**Cheranda Nanda Subbaih**

## ಕಳಂಕರಹಿತ ವ್ಯಕ್ತಿ

ಎ.ಕೆ. ಸುಬ್ಬಯ್ಯನವರ ಪತ್ನಿ ನಾನು ಎಂದು ಹೇಳಿಕೊಳ್ಳಲು ನನಗೆ ಯಾವಾಗಲೂ ಹೆಮ್ಮೆ. ನಾನು ಎಲ್ಲಿಗೇ ಹೋಗಲಿ, ಮಿಸಸ್ ಎ.ಕೆ. ಸುಬ್ಬಯ್ಯ ಎಂದರೆ ಸಿಗುವ ಗೌರವವೇ ಬೇರೆ. ತಮ್ಮ ಸುದೀರ್ಘ ರಾಜಕೀಯ ಜೀವನದಲ್ಲಿ ಭ್ರಷ್ಟಾಚಾರ ಅವರ ಸುತ್ತ ಸುಳಿಯಲೇ ಇಲ್ಲ. ಸಚ್ಚಾರಿತ್ರ್ಯ ವ್ಯಕ್ತಿತ್ವ ಅವರದ್ದು. ಸಾರ್ವಜನಿಕ ಜೀವನದಲ್ಲಿ ಕಳಂಕರಹಿತರಾಗಿ ಇದ್ದಾರೆ ಎಂದರೆ ಅದಕ್ಕಿಂತ ಮಹತ್ತರವಾದದ್ದು ಬೇರೇನು ಇದೆ. ಈ ಬಗ್ಗೆ ನನಗೆ ನಿಜವಾಗಿಯೂ ಹೆಮ್ಮೆ ಇದೆ.

ಇಂದು ನನ್ನ ಮಕ್ಕಳು ಉತ್ತಮವಾದ ಸ್ಥಾನದಲ್ಲಿದ್ದಾರೆ ಎಂದರೆ ಅದು ಎ.ಕೆ. ಸುಬ್ಬಯ್ಯನವರ ಪ್ರಾಮಾಣಿಕತನ, ಸಚ್ಚಾರಿತ್ರ್ಯ ಮತ್ತು ಪರಿಶ್ರಮದ ಫಲ.

**ಪೊನ್ನಮ್ಮ ಸುಬ್ಬಯ್ಯ**

## Living life on his own terms

It's not easy writing about somebody you've grown up admiring. Especially if he happens to be your father and one of the most prominent political figures of his time. Appa has been someone that has lived life on his own terms and earned tremendous respect for that. Growing up, I rarely saw him alone. People always surrounded him with their queries, problems or

opinions, but it was only later that I realized why. A moment that is etched in my memory, which made me truly see the magnitude of the name and respect he had earned for himself, was when he was being released from jail after the Emergency. I was only in school then, and I ran back home to meet him. To my surprise, I wasn't the only one. There were hundreds of people at our home waiting to greet Appa. It is then that I realized the impact he has on the people around him.

**A.S. Cariappa**

**Courage ! Conviction ! Resilience !**

My father has been a hero to many, and a villain to others. That is a mark of what he has stood for throughout his public life. He has faced adversity throughout his life. To see a truly self-made man. I don't have to look too far beyond him.

I always say to my friends that my father juggles three professions. The law is his career, activism his purpose, and agriculture his passion! He has done remarkably well in all three areas. I attribute it to his conviction, courage, and resilience. What I have learnt by watching him is that these qualities don't stand separately. It takes conviction to have courage, and it takes courage to have resilience. The compassion is the horse driving this cart! And that is what I take from his life, what I will always look up to.

**A.S. Somaiah**

## Growing up in the shadow of a legend

To this day, at 83 years of age, he continues his fight for social justice, despite his many ailments, with the same audacity and optimism that he did as a young man. As I watch Appa share his wisdom and stories with my children, I can only hope that one day they will grow up with the same courage and conviction.

**A.S. Muthanna**

## Courage Has A Name

Thatha is honest, relentless and never shies away from the truth. He has lent a helping had to many, many people along the way, although his own journey hasn't been the easiest. And that's something that will always stay with me-the memory of people coming to him for a favour, and him not hesitating to help. He is helpful and righteous, and above all, he's fearless. Whether it's his bold political statements, his stance for justice or his fight against cancer, he has conviction and willpower that few possess.

Even today, I can say that thatha is, and always will be, the strongest man I know.

**Charita Cariappa**

## ನನ್ನಪ್ಪ ಎ.ಕೆ.ಸುಬ್ಬಯ್ಯ ಅವರನ್ನು ನಾ ಕಂಡಂತೆ

ಅಪ್ಪನ ಮತುಗಾರಿಕೆಯನ್ನು ಕೇಳುವುದೇ ಸೊಗಸು. ಅವರು ಅಸ್ಖಲಿತವಾಗಿ ಮಾತನಾಡಬಲ್ಲರು. ನಾನು ಎಷ್ಟೆಲ್ಲಾ ದೊಡ್ಡದೊಡ್ಡ ನಾಯಕರು, ದಿಗ್ಗಜರು ಮಾತನಾಡುವುದನ್ನು ಕೇಳಿದ್ದೇನೆ. ಆದರೆ ಅಪ್ಪನ ವಾಜ್ಞಯಕ್ಕೆ ಸರಿಗಟ್ಟುವವರನ್ನು

ಈವರೆಗೂ ನೋಡಿಲ್ಲ. ಕರ್ನಾಟಕದ ರಾಜಕೀಯದಲ್ಲಿ ಅವರ ಜೀವನ ಮತ್ತು ಅವರ ಜೀವಿತಾವಧಿಯು ಕರ್ನಾಟಕದ ರಾಜಕಾರಣದಲ್ಲಿ ಅವರನ್ನು ಚಳವಳಿಗಾರರಂತೆಯೇ ನೋಡಬೇಕು. ಅವರ ವೃತ್ತಿ ಜೀವನದಲ್ಲಿ ಒಬ್ಬ ವಕೀಲನಾಗಿ ಅವರ ಜೀವನ ಅತೀ ಹೆಚ್ಚು ಆಸಕ್ತಿದಾಯಕವಾಗಿತ್ತು. ಮರೆಯಲಾರದಂತಿತ್ತು. ಅಪ್ಪನ ಈ ಜೀವನದ ಒಂದು ಭಾಗವಾಗಿ ನಾನಿರುವುದು ನನ್ನ ಸುಕೃತ.

ಅಪ್ಪನ ಸ್ಥೈರ್ಯ ನ್ಯಾಯಕ್ಕಾಗಿ ಹೋರಾಡಬೇಕು, ನ್ಯಾಯ ಪರವಾಗಿರಬೇಕು ಎಂಬ ನಿಲುವಿಗೆ ನನ್ನದೊಂದು ದೊಡ್ಡ ಶರಣು. ಒಂದು ವೇಳೆ ಒಂದೇ ವಾಕ್ಯದಲ್ಲಿ ಅಪ್ಪನ ಜೀವನವನ್ನು ವ್ಯಾಖ್ಯಾನಿಸಬೇಕೆಂದರೆ, ಯಾವುದೇ ರೀತಿಯಲ್ಲಿಯೂ ಅನ್ಯಾಯ ಸಹಿಸದ ಆತ್ಮಸ್ಥೈರ್ಯವುಳ್ಳ ವ್ಯಕ್ತಿ. ಇಂತಹ ಆತ್ಮಸ್ಥೈರ್ಯದ ವ್ಯಕ್ತಿತ್ವಗಳು ದಂತಕಥೆಗಳಲ್ಲಿ ಮಾತ್ರವೇ ದಕ್ಕುವಂತಹವು.

ನಾನು ನನ್ನ ತಂದೆಯ ಜೀವನವನ್ನು ನೋಡಿ ನನ್ನ ಜೀವನದ ಮೂಲ ಮೌಲ್ಯಗಳಿಗೆ ಧಕ್ಕೆ ತರದಂತೆ ಬದುಕಲು ಇಚ್ಛಿಸುತ್ತೇನೆ. ಅಪ್ಪನ ನ್ಯಾಯಪರವಾದ ಈ ನಿಲುವು ಮುಂದಿನ ಪೀಳಿಗೆಗೂ ಮಾದರಿಯಾಗಲಿ ಎಂಬುದೆ ನನ್ನ ಆಶಯ.

**ಎ.ಎಸ್. ಪೊನ್ನಣ್ಣ**

### A.K. Subbaiah to the world, APPA to me and the family

Influenced by the way my husband calls him; I too call my father in law as 'Appa'. A.K. Subbaiah to the rest of the world will always remain Appa to me. Each of his five sons look up at him with admiration, respect and love. This by itself speaks volumes of the persona he is.

**Kanchan Ponnanna**

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20–00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15–00 |
| 3. | ಶಾಂತವೇರಿ ಗೋಪಾಲಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15–00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20–00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20–00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15–00 |
| 7. | ಜಿ.ವಿ. ಹಳ್ಳಿಕೇರಿ | ಡಾ. ಆರ್.ಎಂ.ಎಲ್. ಪಾಟೀಲ್ | 15–00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15–00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15–00 |
| 10. | ಕೆ.ಟಿ. ಭಾಷ್ಯಂ | ಡಾ. ವಿಘ್ನೇಶ್ ಎನ್. ಭಟ್ | 15–00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15–00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20–00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15–00 |

| | | | |
|---|---|---|---|
| 14. | ಕೆ.ಸಿ. ರೆಡ್ಡಿ | ಡಾ. ಸಂಧ್ಯಾರೆಡ್ಡಿ | 20–00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20–00 |
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20–00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20–00 |
| 18. | ಎಂ. ನಾಗಪ್ಪ | ಡಾ. ಎಂ.ಎಸ್. ಪಾಟೀಲ್ | 15–00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ. ಹೆಚ್.ಎಂ.ಪಂಚಾಕ್ಷರಯ್ಯ | 15–00 |
| 20. | ಗಂಗಾಧರ್ ನಮೋಶಿ | ಡಾ. ಕವಂಟೆ ಹಾಗೂ ಇತರರು | 15–00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15–00 |
| 22. | ಆರ್. ಗುಂಡೂರಾವ್ | ಈಶ್ವರ ದೈತೋಟ | 20–00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15–00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15–00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15–00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30–00 |
| 27. | ಬಿ.ಎಲ್. ಸುಬ್ಬಮ್ಮ | ಡಾ. ಡಿ.ಎಸ್. ಜಯಪ್ಪಗೌಡ | 15–00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20–00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವೆರ್ಣೇಕರ್ | 20–00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಹಾರೋಗದ್ದೆ ಉಷಾ ರಮೇಶ್ ನಾಯಕ್ | 20–00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30–00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15–00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20–00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25–00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30–00 |

| | | | |
|---|---|---|---|
| 36. | ಎಸ್.ಸಿ. ಮಲ್ಲಯ್ಯ | ಡಾ. ಟಿ.ಸಿ. ಪೂರ್ಣಿಮ | 20–00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30–00 |
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30–00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20–00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20–00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15–00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ॥ ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 25–00 |
| 51. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–3 | ಡಾ. ಎಂ.ಜಿ. ನಾಗರಾಜ್ | 25–00 |
| 52. | ಬಿ.ಎಂ. ಹೊರಕೇರಿ | ಡಾ. ಎಂ.ಎಸ್. ಪಾಟೀಲ | 20–00 |
| 53. | ಕೆ. ಕೆಂಚಪ್ಪ | ಚಂದ್ರಶೇಖರ ತಾಳ್ಯ | 20–00 |

| | | | |
|---|---|---|---|
| 54. | ಕೇಶವರಾವ ನಿಟ್ಟೂರಕರ್ | ಡಾ. ಜಿ.ಬಿ. ವಿಸಾಜಿ | 20–00 |
| 55. | ಸರದಾರ ಶರಣಗೌಡ ಇನಾಂದಾರ | ಡಾ. ಬಿ.ವ್ಹಿ. ಮಲ್ಲಾಪುರ | 20–00 |
| 56. | ಬಸವರಾಜೇಶ್ವರಿ | ಪ್ರಹ್ಲಾದ ಬೆಟಗೇರಿ | 20–00 |
| 57. | ಕೊಲೂರು ಮಲ್ಲಪ್ಪ | ಗಂಗಾಧರಯ್ಯ ಹಿರೇಮಠ, ಡಾ. ದೇ.ಮಾ. ಪಾಟೀಲ | 20–00 |
| 58. | ದೇವೇಂದ್ರಪ್ಪ ಘಾಳಪ್ಪ ಜಮಾದಾರ | ಡಾ. ನಾಗಬಾಯಿ ಬಿ.ಬುಳ್ಳಾ | 20–00 |
| 59. | ಮೊಹಮ್ಮದ್ ಅಲಿ | ಪ್ರೊ॥ ಶಿವರಾಜ ಪಾಟೀಲ | 20–00 |
| 60. | ಬಿ. ಶ್ಯಾಮಸುಂದರ್ | ಗಂಧರ್ವ ಸೇನಾ | 20–00 |
| 61. | ಶಂಕರಶೆಟ್ಟಿ ಪಾಟೀಲ | ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ | 20–00 |
| 62. | ಸದಾಶಿವ ಎಸ್. ಶೆಟ್ಟರ್ | ಶ್ರೀ ನಾರಾಯಣ ಗಾಳಗಿ | 20–00 |
| 63. | ಅಂದಾನಪ್ಪ ದೊಡ್ಡಮೇಟಿ | ಪ್ರೊ. ಸಿ.ವಿ. ಕೆರೆಮನಿ | 25–00 |
| 64. | ಎಸ್.ವೈ. ಪಾಟೀಲ್ | ಡಾ. ಎಮ್.ಎಸ್. ಪಾಟೀಲ್ | 20–00 |
| 65. | ವೈ. ರಾಮಚಂದ್ರಪ್ರೊ. | ಎನ್. ಚಿಕ್ಕಣ್ಣ | 20–00 |
| 66. | ಕೆ.ಪಿ. ರಾಮಯ್ಯಶ್ರೀ | ಸಿದ್ದಗಂಗಯ್ಯ ಕಂಬಾಲ್ | 20–00 |
| 67. | ವೈ.ಕೆ. ರಾಮಯ್ಯಡಾ. | ಇ.ಚಿ. ಬೋರಲಿಂಗಯ್ಯ | 20–00 |
| 68. | ಸೋಲೂರು ಸಇದ್ದಪ್ಪ | ಶ್ರೀ ಸಿದ್ದಲಿಂಗಯ್ಯ ಕಂಬಾಲ್ | 20–00 |
| 69. | ಎಂ.ವೈ. ಘೋರ್ಪಡೆ | ಶ್ರೀ ಮಹಾಬಲೇಶ್ವರ ಕತ್ರಲಿ | 20–00 |
| 70. | ಎಂ.ಪಿ. ಪಾಟೀಲ್ | ಡಾ. ಗುರುಪಾದಪ್ಪ ಮಾರಿಗುಡ್ಡಿ | 20–00 |
| 71. | ಹೆಚ್.ವಿ. ಕೌಜಲಗಿ | ಡಾ. ಡಿ.ಎಸ್. ಜಯಪ್ಪ ಗೌಡ | 20–00 |
| 72. | ಡಾ: ಎಂ.ಆರ್. ತಂಗಾ | ಶ್ರೀ ಸುರೇಶ್ ಕುಮಾರ್ | 25–00 |
| 73. | ಕೆ.ಎನ್. ನಾಗೇಗೌಡ | ಪ್ರೊ. ಹೆಚ್.ಎಸ್. ಮುದ್ದೇಗೌಡ | 20–00 |

| | | | |
|---|---|---|---|
| 74. | ಎ.ಆರ್. ಪಂಚಗಾವಿ | ಪ್ರೊ. ಚಂದ್ರಶೇಖರ ಅಕ್ಕಿ | 20–00 |
| 75. | ಡಾ: ಕೆ. ನಾಗಪ್ಪ ಆಳ್ವ | ಶ್ರೀ ರಘು ಶೆಟ್ಟಿಗಾರ್ | 20–00 |
| 76. | ಎಚ್.ಸಿದ್ದವೀರಪ್ಪಶ್ರೀ | ಆರ್.ಜಿ. ಹಳ್ಳಿ ನಾಗರಾಜ | 35–00 |
| 77. | ಕೊಂಡಜ್ಜಿ ಬಸಪ್ಪಡಾ. | ಸಾ.ಶಿ. ಮರುಳಯ್ಯ | 20–00 |
| 78. | ಟಿ.ಎ.ಪೈ ಡಾ. ಶಿವಾನಂದ | ಬೆಕಲ್ | 30–00 |
| 79. | ವಿಶ್ವನಾಥ ಕತ್ತಿ ಡಾ. | ರಾಮಕೃಷ್ಣ ಮರಟೆ | 15–00 |
| 80. | ಎನ್. ಹುಚ್ಚಮಾಸ್ತಿಗೌಡ | ಶ್ರೀಮತಿ ಕವಿತಾ ಕೃಷ್ಣ | 20–00 |
| 81. | ಡಿ.ವಿ.ಗುಂಡಪ್ಪ | ಶ್ರೀ ರಾಘವೇಂದ್ರ ಪಾಟೀಲ | 20–00 |
| 82. | ಕರ್ನಾಟಕ ರೈತ ಚಳುವಳಿ–<br>ಸತ್ಯಾಗ್ರಹಗಳು ಸಂಪುಟ–4 | ಡಾ. ಎಂ.ಜಿ. ನಾಗರಾಜ್ | 25–00 |
| 83. | ಕರ್ನಾಟಕ ರೈತ ಚಳುವಳಿ–<br>ಸತ್ಯಾಗ್ರಹಗಳು ಸಂಪುಟ–5 | ಡಾ. ಎಂ.ಜಿ. ನಾಗರಾಜ್ | 20–00 |
| 84. | ಕರ್ನಾಟಕ ರೈತ ಚಳುವಳಿ–<br>ಸತ್ಯಾಗ್ರಹಗಳು ಸಂಪುಟ–6 | ಡಾ. ಎಂ.ಜಿ. ನಾಗರಾಜ್ | 30–00 |
| 85. | ಪಿ.ಎಂ.ಬಾಂಗಿ | ಡಾ. ಎಂ.ಎಸ್. ಪಾಟೀಲ | 30–00 |
| 86. | ದಿ. ಎಸ್.ಆರ್. ಬೊಮ್ಮಾಯಿ | ಶ್ರೀ ಚಂದ್ರಶೇಖರ ಬೆಳಗೆರೆ | 20–00 |
| 87. | ಶ್ರೀ ಬಿ.ಜಿ. ಬಣಕಾರ | ಡಾ. ಭೋಜರಾಜ ಪಾಟೀಲ | 40–00 |
| 88. | ಶ್ರೀ ಚಂದ್ರಶೇಖರ ಪಾಟೀಲ್<br>ಮಹಂಗಾವ್ | ಡಾ. ಶಿವಾನಂದ ಬೇಕಲ್ | 30–00 |
| 89. | ದಿ: ಎ.ಎಸ್. ಪಾಟೀಲ | ಎಸ್.ಎಸ್. ಹಾದಿಮನಿ | 30–00 |
| 90. | ಎನ್.ರಾಚಯ್ಯ | ಡಾ. ರಾಮಚಂದ್ರಪ್ಪ ಜಿ.ಟಿ.<br>ಮತ್ತು ಡಾ. ಲೋಲಾಕ್ಷಿ | 50–00 |
| 91. | ಬಿ.ಬಸವಲಿಂಗಪ್ಪ | ಡಾ. ಎಸ್. ನಾಗರಾಜ್ | 30–00 |

*****

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20–00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15–00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20–00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20–00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15–00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20–00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20–00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15–00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20–00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಲೂರು ಸುದರ್ಶನ್ | 20–00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶನಾಲಯ | 15–00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15–00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15–00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15–00 |

ಸರ್ಕಾರಿ ಮುದ್ರಣಾಲಯ, ವಿಕಾಸಸೌಧ ಘಟಕ, ಬೆಂಗಳೂರು. ಕಾ.ಸೂ. 154 / ಪಿ5